# ನಾಡಗೀತೆ

ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು
ಬದುಕು ಬಲುಹಿನನಿಧಿಯು ಸದಭಿಮಾನದ ಗೂಡು ॥ ಪಲ್ಲ ॥

ರಾಜನ್ಯರಿಪು ಪರಶುಧರನ ಜನನಿಯ ನಾಡು
ಆ ಜಲಧಿಯನೆ ಜಿಗಿದ ಹನುಮನುದಿಸಿದ ನಾಡು
ಓಜೆಯಿಂ ಮೆರೆದರಸುಗಳ ಸಾಹಸದ ಸೂಡು
ತೇಜವನು ನಮಗೀವ ವೀರವೃಂದದ ಬೀಡು ॥ ೧ ॥

ಲೆಕ್ಕಿಗಮಿತಾಕ್ಷರರು ಬೆಳೆದು ಮೆರೆದಿಹ ನಾಡು
ಜಕ್ಕಣನ ಶಿಲ್ಪಕಲೆಯ ಎಚ್ಚರಿಯು ಕರುನಾಡು
ಚೊಕ್ಕಮತಗಳ ನಾರಿದವರಿಗಿದು ನೆಲೆವೀಡು
ಬೊಕ್ಕಸದ ಕಣಜ ಜಯಶಿರಿಯು ನಲಿಯುವ ನಾಡು ॥ ೨ ॥

ಪಾವನೆಯರಾ ಕೃಷ್ಣೆ-ಭೀಮೆಯರ ತಾಯ್ ನಾಡು
ಕಾವೇರಿ-ಗೋದೆಯರು ಪೈದೊಳೆವ ನಲುನಾಡು
ಆವಗಂಬಗೆಯ ನಗಿಸುವ ಕಬ್ಬಿಗರ ಹಾಡು
ಕಾವಗದುಗಿನ ವೀರನಾರಾಯಣನ ಬೀಡು ॥ ೩ ॥

# ಸ್ವತಂತ್ರ ಭಾರತದ ರಾಷ್ಟ್ರಗೀತೆ

ಜನಗಣಮನ ಅಧಿನಾಯಕ ಜಯಹೇ ಭಾರತ ಭಾಗ್ಯವಿಧಾತಾ ।
ಕಾಮರೂಪ ಪಂಜಾಬ ಮರಾಠಾ ಗುಜರಾತ ದ್ರಾವಿಡ ವಂಗ ।
ಉತ್ಕಲ ವಿಂಧ್ಯ ಹಿಮಾಚಲ ಜಮುನಾ ಗಂಗಾ ಜಲಧಿತರಂಗಾ ।
ತವ ಶುಭ ನಾಮೇ ಜಾಗೇ,
ತವ ಶುಭ ಆಶಿಸ ಮಾಗೇ ।
ಗಾಹೇ ತವ ಜಯಗಾಥಾ ॥
ಜನಗಣಮಂಗಲದಾಯಕ ಜಯ ಹೇ ಭಾರತ ಭಾಗ್ಯವಿಧಾತಾ ।
ಜಯಹೇ, ಜಯಹೇ, ಜಯಹೇ, ಜಯ ಜಯ ಜಯ ಜಯ ಹೇ ॥



|| ಶ್ರೀ ಮಂಗಲ ಮೂರ್ತಯೇನಮಃ ||

# ವೀರಶೈವ—ದಶರತ್ನ

## ಅಥವಾ

## ಪುರೋಹಿತರ ಕೈಪಿಡಿ

**ಈ ವೀರಶೈವ ಧಾರ್ಮಿಕ ಗ್ರಂಥವು**


**ವೇದಮೂರ್ತಿ ಬ್ರಹ್ಮಶ್ರೀ ಸಿದ್ಧಾಂತಿ**
**ಪುರೋಹಿತ ಚನವೀರಶಾಸ್ತ್ರಿ ಸಾಲೀಮಠ**

ಶ್ರೀ ಬಸವರಾಜ ಪಂಚಾಂಗಕರ್ತ **ಹುಬ್ಬಳ್ಳಿ** ಇವರಿಂದ ರಚಿಸಲ್ಪಟ್ಟಿತು.



ಪ್ರಕಾಶಕರು :
**ವೇ|| ಪಿ. ಸಿ. ಶಾಬಾದಿಮಠ ಸುಪ್ರಸಿದ್ಧ ಪುಸ್ತಕ ವ್ಯಾಪಾರಿಗಳು ಗದಗ**
**ಇವರಿಂದ ಪ್ರಕಾಶ ಮಾಡಲ್ಪಟ್ಟಿತು.**





ಪ್ರಥಮ ಮುದ್ರಣ
ಸನ್ ೧೯೫೯ ಮೇ

ಶ್ರೀ ಶಕೆ ೧೮೮೧
ವಿಕಾರೀ ಸಂವತ್ಸರ ವೈಶಾಖಮಾಸ

**ಬೆಲೆ : ರೂ. ೪—೦—೦** (ಅಂಚೆ ವೆಚ್ಚ ಬೇರೆ)

## ಶಿರ್ಶಿ ಬಣ್ಣದ ಮಠಾಧ್ಯಕ್ಷರಾದ ಶ್ರೀಮನ್ನಿರಂಜನ ಪ್ರಣಮಸ್ವರೂಪಿಗಳಾದ ಗುರುಸಿದ್ಧ ಮಹಾಸ್ವಾಮಿಗಳವರ ಆಶೀರ್ವಚನ

ಶ್ರೀ ಬಸವರಾಜ ಪಂಚಾಂಗಕರ್ತೃಗಳಾದ ಸಿದ್ಧಾಂತಿ ಚನ್ನವೀರಶಾಸ್ತ್ರಿಗಳ ಸಾಲೀಮಠ ಹುಬ್ಬಳ್ಳಿ ಇವರಿಂದ ವಿರಚಿತವಾದ ಈ ವೀರಶೈವ ದಶರತ್ನವೆಂ ಗ್ರಂಥವನ್ನು ಓದಿ ನೋಡಲಾಗಿ ಸಮಸ್ತ ವೀರಶೈವ ಬಾಂಧವರಿಗೂ, ಜನಸಾಮಾನ್ಯರೆಲ್ಲರಿಗೂ ನಿತ್ಯೋಪಯೋಗವಾಗುವಂತೆ ಶ್ರಮ ವಹಿಸಿ ವೀರಶೈವ ತತ್ವಗಳನ್ನೂ, ಹಾಗೂ ನಿತ್ಯ ಪ್ರಾಪಂಚಿಕ ವಿಷಯಗಳಿಗೆ ಉಪಯುಕ್ತವಾಗುವಂತೆ ಲಿಂಗಧಾರಣ, ಶಿವಪೂಜೆ, ದೀಕ್ಷೆ, ವಿವಾಹ ಮೊದಲಾದ ಆಚಾರ ವಿಚಾರ ವಿಷಯಗಳನ್ನು ಚನ್ನಾಗಿ ಆಧಾರಪೂರ್ವಕ ವಿವರಿಸಿ ಬರೆದಿದ್ದಾರೆ. ಪ್ರತಿಯೊಬ್ಬ ವೀರಶೈವನೂ, ಮಾಹೇಶ್ವರನೂ ಈ ಗ್ರಂಥವನ್ನು ತೆಗೆದುಕೊಳ್ಳಲು ಯೋಗ್ಯವಾಗಿದೆ. ವಾಚಕರು ಈ ಗ್ರಂಥವನ್ನು ಪುನರ್ಮುದ್ರಣವಾಗುವಂತೆ ಪ್ರೋತ್ಸಾಹಿಸುವದು ವಿಹಿತವಾಗಿದೆ.

ಇತ್ಯಾಶೀರ್ಷಃ

೨೫-೫-೧೯೫೫ **ಬಣ್ಣದಮಠ ಶಿರ್ಶಿ**

---

# ಪ್ರಕಟನೆ

### ವೇ|| ಪಂಡಿತ ಚನವೀರಶಾಸ್ತ್ರಿಗಳು ಸಾಲೀಮಠ
ಶ್ರೀ ಬಸವರಾಜ ಪಂಚಾಂಗ ಕರ್ತ ಇವರ

## ಜ್ಯೋತಿಷ್ಯ—ಕಾರ್ಯಾಲಯ

( ಮಂಗಳವಾರ ಪೇಟೆ ಕಲ್ಯಾಣಮಠ ) ಹುಬ್ಬಳ್ಳಿ

ನಮ್ಮ ಭವಿಷ್ಯ ಕಾರ್ಯಾಲಯದಲ್ಲಿ ಜಾತಕ, ವರ್ಷಭವಿಷ್ಯ, ಜನ್ಮಪತ್ರಿಕೆ, ಋತುಜಾತಕ, ತೇಜೀ-ಮಂದಿ ಪತ್ರಿಕೆ, ಪ್ರಶ್ನೆ ಹಾಗೂ ಮುಹೂರ್ತ ಮೊದಲಾದ ವಿಷಯಗಳನ್ನು ಸಶಾಸ್ತ್ರೋಕ್ತವಾಗಿ ಸಕಾಲಕ್ಕೆ ತಯಾರಿಸಿ ಕೊಡಲಾಗುವದು. ಭವಿಷ್ಯಗಳ ಸತ್ಯತೆಯ ಬಗ್ಗೆ ಮ. ಗಾಂಧೀಜಿಯವರ ಅಮರ ಭವಿಷ್ಯವನ್ನು ಮೂರು ತಿಂಗಳು ಮೊದಲು ಬರೆದದ್ದೇ ಪ್ರಮಾಣವಾಗಿದೆ. ವಿವರಗಳಿಗೆ ಇಂದೇ ವಿಚಾರಿಸಿರಿ.

ತಮ್ಮ
**ಗ್ರಂಥಕರ್ತ**

# ಮುನ್ನುಡಿ

ಯಾದಗಿರಿ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರೂ ಧಾರವಾಡದಲ್ಲಿ ಸನ್ ೧೯೪೦ ಡಿಶೆಂಬರ ೨೭ ಕ್ಕೆ ಜರುಗಿದ ೨೫ ನೇ ಕನ್ನಡ ಸಾಹಿತ್ಯ ಸಮ್ಮೇಲನದ ಅಧ್ಯಕ್ಷರೂ
ಆಗಿದ್ದ, ವ್ಯಾಕರಣತೀರ್ಥ, ವಿದ್ಯಾಲಂಕಾರ, ವಿದ್ಯಾವಾಗೀಶ,
**ಪಂಡಿತ ಚಂದ್ರಶೇಖರಶಾಸ್ತ್ರಿಗಳು ಹೊಳಲು ಇವರು**
ಈ ವೀರಶೈವ ದಶರತ್ನ ಗ್ರಂಥಕ್ಕೆ ಮುನ್ನುಡಿಯನ್ನು ಈ ಪ್ರಕಾರವಾಗಿ ಬರೆಯುತ್ತಾರೆ—

ವೀರಶೈವ ದಶರತ್ನವೆಂಬುವ ಸಂಗ್ರಹವಾತ್ಮಕವಾದ ಗ್ರಂಥವನ್ನು ಓದಿ ನೋಡಿದೆನು. ಈ ದಶರತ್ನವೆಂಬುವ ಹೆಸರಿದ್ದರೂ ಒಂದೊಂದು ರತ್ನದಲ್ಲಿ ಅನೇಕ ಅವಾಂತರ ವಿಷಯಗಳಿರುತ್ತವೆ. ಇವುಗಳೆಲ್ಲ ಪ್ರತಿಯೊಬ್ಬ ವೀರಶೈವನಿಗೂ ಬೇಕಾದವುಗಳೇ ಆಗಿರುತ್ತವೆ. ಸಂಸ್ಕೃತ ಕಲಿಯದೆ ಇರತಕ್ಕ ಸಾಮಾನ್ಯ ಜನಗಳಿಗೆ ಇದು ನಿತ್ಯೋಪಯುಕ್ತ ಗ್ರಂಥವಾಗಿರುತ್ತದೆ. ಇದನ್ನು ಸಂಗ್ರಹಿಸಿದವರು ಭವಿಷ್ಯವಾದಿಗಳೂ ಶ್ರೀ ಬಸವರಾಜ ಪಂಚಾಂಗಕರ್ತೃಗಳೂ ಆಗಿರುವ ಚನ್ನವೀರ ಶಾಸ್ತ್ರಿಗಳು ನಾಲೀಮಠ ಮುಕ್ಕಾಮು ಹುಬ್ಬಳ್ಳಿ ಇವರು ಇರುತ್ತಾರೆ.

ವೀರಶೈವ ಧರ್ಮದ ಸಾಮಾನ್ಯ ಸ್ವರೂಪವನ್ನು ಪ್ರಾರಂಭದಲ್ಲಿ ಚನ್ನಾಗಿ ವಿವೇಚನೆ ಮಾಡಿರುತ್ತಾರೆ. ಪ್ರತಿಯೊಬ್ಬನಿಗೂ ತಿಳಿಯುವಂತಿರುತ್ತದೆ. ಇದರಲ್ಲಿ ಸಾಮಾನ್ಯವಾಗಿ ವೀರಶೈವ ಮತದ ಸ್ವರೂಪವನ್ನು ವಿವೇಚನೆ ಮಾಡಿರುತ್ತಾರೆ. ಅಷ್ಟಾವರಣ, ಪಂಚಾಚಾರ, ಷಟಸ್ಥಲ, ಶಿವಪೂಜೆ, ಶಿವಸಹಸ್ರ ನಾಮಾವಳಿ ಮೊದಲಾದ ಅನೇಕ ವಿಷಯಗಳು ಇರುತ್ತವೆ. ಅಂತೂ ಈ ಗ್ರಂಥದಲ್ಲಿ ಎಲ್ಲ ವಿಧಿ ವಿಧಾನಗಳೂ ಇರುತ್ತವೆ.

ಇದಲ್ಲದೆ ಆಚಾರ ಮಹಿಮೆ ಮೊದಲಾದ ಅನೇಕ ವಿಷಯಗಳನ್ನು ಚನ್ನವೀರಶಾಸ್ತ್ರಿಗಳವರು ಚನ್ನಾಗಿ ಸಂಗ್ರಹಿಸಿ ಜನರಿಗೆ ಉಪಯುಕ್ತವಾಗಿರುವಂತೆ ಮಾಡಿರುವುದು ಸ್ತುತ್ಯವಾದ ಕಾರ್ಯವಾಗಿರುತ್ತದೆ. ಇಂತಹ ಸಂಗ್ರಹಾತ್ಮಕವಾದ ಈ ಗ್ರಂಥವು ಪ್ರತಿಯೊಬ್ಬ ವೀರಶೈವನಲ್ಲಿಯೂ ಇರಲಿಕ್ಕೆ ಯೋಗ್ಯವಾಗಿರುತ್ತದೆ. ಇದನ್ನು ಶಾಸ್ತ್ರಿಗಳಿಂದ ತಯಾರಿಸಿ ಅಚ್ಚು ಮಾಡಿಸಿ ಜನತೆಗೆ ಉಪಕಾರವಾಗುವಂತೆ ಮಾಡಿರುವ ಶಾಬಾದಿಮಠ ಇವರಿಗೆ ಧನ್ಯವಾದವನ್ನರ್ಪಿಸುವೆನಲ್ಲದೆ ಚನ್ನವೀರಶಾಸ್ತ್ರಿಗಳವರ ಪ್ರಯತ್ನವು ಸ್ತುತ್ಯವಾಗಿರುತ್ತದೆ. ಸರ್ವರೂ ಒಂದೊಂದು ಪ್ರತಿಯನ್ನು ಕೊಂಡು ಗ್ರಂಥದ ಪುನರ್ಮುದ್ರಣ ಬೇಗ ಆಗುವಂತೆ ಮಾಡಬೇಕಾಗಿ ಸೂಚನೆ. ಪ್ರಿಂಟಿನಲ್ಲಿ ಕೆಲವು ದೋಷಗಳಿರುತ್ತವೆ. ಅವುಗಳನ್ನೆಲ್ಲ ಪುನರ್ಮುದ್ರಣದಲ್ಲಿ ಸರಿಪಡಿಸಬೇಕು.

**ಪಂಡಿತ ಚಂದ್ರಶೇಖರಶಾಸ್ತ್ರಿಗಳವರು**
ಪ್ರಿನ್ಸಿಪಾಲ್
ಶಂಕರ ಸಂಸ್ಕೃತ ಕಾಲೇಜ ಯಾದಗಿರಿ.

ಹುಬ್ಬಳ್ಳಿ
ತಾ॥ ೧-೫-೧೯೫೯

# ಪ್ರಸ್ತಾವನೆ

ಈ ಜಗತ್ತಿನ ಪ್ರತಿಯೊಂದು ಜನಾಂಗದಲ್ಲಿ ಧಾರ್ಮಿಕ ಸಂಸ್ಕಾರಗಳಿಗೆ ವಿಶೇಷ ಮಹತ್ವವಿದೆ ಹಾಗೂ ಆ ಯಾವ ಧಾರ್ಮಿಕ ಸಂಸ್ಕಾರಗಳು ಜರಗುವದು ಕಂಡುಬರುತ್ತದೆ. ಈ ಧಾರ್ಮಿಕ ಸಂಸ್ಕಾರಗಳಿಂದ ಲೌಕಿಕ ಪ್ರಕಾರವಾಗಿ ಸ್ಥೂಲ ಶರೀರವು ಪವಿತ್ರವಾಗಿ ಪ್ರಾಪಂಚಿಕ ಕಾರ್ಯಗಳಿಗೆ ಯೋಗ್ಯವಾಗುವದೆಂದೂ, ಪಾರಮಾರ್ಥಿಕ ವಿಷಯದಲ್ಲಿ ಅಂತರಾತ್ಮನು ಪರಿಶುದ್ಧನಾಗಿ ಜಗನ್ನಿಯಾಮಕನ ಸಾನ್ನಿಧ್ಯಕ್ಕೆ ಪಾತ್ರನಾಗುವನೆಂದೂ, ಧಾರ್ಮಿಕ ಸಂಸ್ಕಾರಗಳ ಮಾರ್ಮಿಕ ವಿಷಯವಾಗಿದೆ. ಆದರೆ ಈ ಆಧುನಿಕ ಯಂತ್ರಯುಗದಲ್ಲಿ ಮಾನವನು ತನ್ನ ಅಪರಿಮಿತವಾದ ಬುದ್ಧಿ ಮತ್ತೆಯಿಂದ ವಿಜ್ಞಾನದ ಪರಮಾವಧಿಯ ಶಕ್ತಿಯನ್ನು ಪ್ರದರ್ಶನ ಮಾಡಲ್ಪಟ್ಟಾಗ್ಯೂ, ಸಹ ಇಂದು ಯಾವ ಜನಾಂಗವೂ ತಮ್ಮ-ತಮ್ಮ ಧಾರ್ಮಿಕ ಸಂಸ್ಕಾರಗಳನ್ನು ಅಳಿಯಲು ಸಿದ್ಧವಿಲ್ಲ. ಧಾರ್ಮಿಕಸಂಸ್ಕಾಗಳಲ್ಲಿ ಯಾವ ತತ್ವಗಳಿಲ್ಲೆಂದರೆ ಇಂದಿನ ವಿಜ್ಞಾನ ಯುಗದಲ್ಲಿ ಎಲ್ಲರೂ ತ್ಯಾಜ್ಯಮಾಡುತ್ತಿದ್ದರು. ವಿಜ್ಞಾನಿಯಾಗಲೀ ಅಥವಾ ಅಜ್ಞಾನಿಯಾಗಲೀ ಆಯಾಯ ಜನಾಂಗದ ಪ್ರಕಾರ ಆಯಾಯ ಧಾರ್ಮಿಕ ಸಂಸ್ಕಾರಗಳನ್ನು ಇಂದಿಗೂ ಹೊಂದುತ್ತಲಿದ್ದಾನೆ. ಧಾರ್ಮಿಕ ಸಂಸ್ಕಾರದ ರೂಪಗಳು ಬೇರೆ ಬೇರೆಯಾಗಿದ್ದರೂ ಸಹ ತತ್ವಗಳು ಒಂದೇಯಾಗಿರುವವು. ಉದಾಹರಣಾರ್ಥವಾಗಿ ಹೇಳಬೇಕೆಂದರೆ— ಮರಣಾನಂತರ ಶವಕ್ಕೆ ಮಾಡುವ ಧಾರ್ಮಿಕ ಸಂಸ್ಕಾರಗಳು ಬೇರೆ ಬೇರೆಯಾಗಿದ್ದರೂ "ಮೃತರ ಆತ್ಮಕ್ಕೆ ಚಿರಶಾಂತಿ ದೊರೆಯಲಿ'' ಎಂಬ ತತ್ವವು ಒಂದೇಯಾಗಿರುವದು. ಇದರಂತೆ ವಿವಾಹ ಧರ್ಮ ಸಂಸ್ಕಾರಗಳು ಬೇರೆ ಬೇರೆಯಾಗಿದ್ದರೂ "ವಿವಾಹ ನಂತರ ದಂಪತಿಗಳಿಗೆ ಉತ್ತರೋತ್ತರ ಕಲ್ಯಾಣವಾಗಲೆಂಬ"ತತ್ವವು ಒಂದೇಯಾಗಿರುತ್ತದೆ.

ಧರ್ಮವೆಂದರೆ ಅದೊಂದು ಹಿಮಾಲಯ ಪರ್ವತೋಪಾದಿಯಲ್ಲಿಲ್ಲ. ಆದರೆ ನಿತ್ಯ ಬಳಕೆಯಲ್ಲಿ ತರುವಂಥ ಕೇವಲ ನೀತಿಯ ತತ್ವಗಳು ಅಡಕವಾಗಿರುವವಲ್ಲದೆ ವಿಜ್ಞಾನವನ್ನು ಹಳಿದು ತ್ಯಾಜ್ಯಮಾಡಬೇಕೆಂಬ ವಿಷಯವಾಗಲೀ ಅಥವಾ ಅನ್ಯರನ್ನು ದೂಷಿಸುವದಾಗಲೀ ಮೊದಲಾದ ತುಚ್ಛಸಂಗತಿಗಳನ್ನು ಹೇಳಿರುವದಿಲ್ಲ. ಆದರೆ ಇಹದಲ್ಲಿ ಸುಂದರವಾದ, ಸರ್ವೋತ್ಕೃಷ್ಟವಾದ ಮಾನವತ್ವವನ್ನು ಪಡೆಯಬೇಕಾದರೆ ಧಾರ್ಮಿಕ ನೀತಿಯ ಮಾರ್ಗಗಳೇ ಅತ್ಯಾವಶ್ಯಕವಾಗಿರುವವು. ಆ ನೀತಿಯ ನಿಯಮಗಳೇ ಮಾನವತ್ವದ ಸೋಪಾನಗಳಾಗಿರುವವು. ಈ ಸೋಪಾನಗಳ ವಿಧಾಯಕ ಆರೋಹಣದಿಂದಲೇ ಮಾನವನು ತನ್ನ ಜೀವನದಲ್ಲಿ ಕಾಣಬೇಕಾದ ಆ ದಿವ್ಯಪರಂಜ್ಯೋತಿಯಾದ ಪರಮಾತ್ಮನ ಸಾನ್ನಿಧ್ಯಕ್ಕೆ ಪಾತ್ರನಾಗುತ್ತಾನೆ. ಆದರೆ ಮಾತ್ರ ಮಾನವನು ಆಧುನಿಕ ಯಂತ್ರಯುಗದಲ್ಲಿ ನೀತಿ-ಧರ್ಮ-ಶಾಂತಿಗಳು ದ್ರವ್ಯದಲ್ಲಿವೆ, ಸಂಪತ್ತಿನಲ್ಲಿವೆ, ಸಾಮ್ರಾಜ್ಯದಲ್ಲಿವೆ ಅಂದು-ಅಂದು ಅಟಂಬಾಂಬ, ಹೈಡ್ರೋಜನಬಾಂಬ ಮೊದಲಾದ ಸರ್ವವಿನಾಶಕ ದ್ರವ್ಯಗಳನ್ನು ತಯಾರಿಸಿ ಕೊನೆಗೆ ಉಪಗ್ರಹ ನಿರ್ಮಿಸಿ ಸರ್ವಸಮಾಲೋಚನೆಯನ್ನು ಮಾಡಿ

ಕೊನೆಗೆ ನೀತಿ-ಧರ್ಮ-ಶಾಂತಿಗಳು ದ್ರವ್ಯದಲ್ಲಿಲ್ಲ, ಸಂಪತ್ತಿನಲ್ಲಿಲ್ಲ, ಸಾಮ್ರಾಜ್ಯದಲ್ಲಿಲ್ಲ ಯಾವದೇ ತರದ ಬಾಂಬುಗಳಲ್ಲಿಲ್ಲ. ಉಪಗ್ರಹದಲ್ಲಿಲ್ಲ. ಅದು ಕೇವಲ ನೀತಿಯ ಧಾರ್ಮಿಕತನದಲ್ಲಿ ಮಾತ್ರ ದೊರೆಯುವದು. ಆನೀತಿಯೇ ಸದಾನಂದವು. ಸದಾನಂದವೇ ಸೌಖ್ಯವು ಸೌಖ್ಯಕ್ಕೆ ಶಾಂತಿಯೇ ಮೂಲವು. ಇಂಥ ಶಾಂತಿಯಿಂದಲೇ ಜಗತ್ತಿನ ಕಲ್ಯಾಣವೆಂಬ ತತ್ವವು ಇಂದಿನ ವಿಜ್ಞಾನದ ಕೊನೆಯ ವಿಚಾರವಾಗಿದೆ. ಇದರಿಂದ ನಮ್ಮ ಪೂರ್ವಜರ ವೇದ ಆಗಮ ಉಪನಿಷತ್ ಶ್ರುತಿಗಳ ವಿಚಾರಗಳಿಗೆ ಬಂದು ತಲ್ಪಿದಂತಾಯಿತು ಈ ವಿಷಯವನ್ನು ವಾಚಕರು ಗಮನಕೊಟ್ಟು ವಿಚಾರ ಮಥನ ಮಾಡುವದು ವಿಶೇಷ ಮಹತ್ವದ್ದಾಗಿದೆ.

ಬಂಗಾರವು ಭೂಮಿಯಲ್ಲಿ ಮೊದಲು ಅದುರಿನ ರೂಪದಲ್ಲಿ ದೊರೆಯುವದು ತದನಂತರ ಅದನ್ನು ಸ್ಫುಟಸಂಸ್ಕಾರಕೊಟ್ಟು ಅದರಲ್ಲಿದ್ದ ಕಿಲ್ಮಿಷವನ್ನು ಬೇರ್ಪಡಿಸಿದಾಗ, ಆ ಬಂಗಾರವು ಅಮೌಲ್ಯವಾಗುವದಲ್ಲದೆ ಅದರಿಂದ ಬೆಲೆ ಬಾಳುವ ಆಭರಣಗಳು ತಯಾರಾಗುವವು. ಇದರಂತೆಯೇ ವೀರಶೈವ ಧರ್ಮದಲ್ಲಿ ಹೇಳಲ್ಪಟ್ಟ ಲಿಂಗಧಾರಣ ವಿವಾಹ ದೀಕ್ಷೆ ಮೊದಲಾದ ಧಾರ್ಮಿಕಸಂಸ್ಕಾರ-ವಿಧಾನಗಳಿಂದ ಸ್ಥೂಲದೇಹದಲ್ಲಿದ್ದ ಮಾತಾಪಿತೃಗಳಿಂದ ಉದ್ಭವಿಸಿದ ಗರ್ಭದೋಷ, ಸ್ತನ್ಯಪಾನದೋಷ, ಸಹಭೋಜನದೋಷ, ಮೋಹದೋಷ, ಮೊದಲಾದ ಅನೇಕ ದೋಷಗಳು ನಿವಾರಣೆಯಾಗಿ ಅಂತರಾತ್ಮನು ಪರಿಶುದ್ಧನಾಗುವನು. ಬಂಗಾರವು ಹೇಗೆ ಸ್ಫುಟಸಂಸ್ಕಾರವಿಲ್ಲದೆ ಪರಿಶುದ್ಧವಾಗುವದಿಲ್ಲವೋ ಹಾಗೆ ಧಾರ್ಮಿಕ ಸಂಸ್ಕಾರಗಳಿಂದ ಸ್ಥೂಲದೇಹವು ಪವಿತ್ರವಾಗದೇ ಅಂತರಾತ್ಮನು ಎಂದೂ ಪರಿಶುದ್ಧನಾಗುವದಿಲ್ಲ. ಆದರೆ ಬಹಿರಷ್ಟಾವರಣಗಳ ಶುದ್ಧಿಯಿಂದಲೇ ಅಂತರಷ್ಟಾವರಣ ಶುದ್ಧಿಯಾಗುವವೆಂದು ವೀರಶೈವ ಧರ್ಮಸಿದ್ಧಾಂತವಿದೆ ಆದರೆ ಆಧುನಿಕ ಕಾಲದಲ್ಲಿ ಮಾತ್ರ ಎಷ್ಟೋ ವೀರಶೈವರು ಯಾವ ಬಾಹ್ಯಲಿಂಗಧಾರಣ ದೀಕ್ಷೆ ಮೊದಲಾದ ಧಾರ್ಮಿಕ ಸಂಸ್ಕಾರಗಳನ್ನು ಹೊಂದದೇ ಹಾಗೇ ಅಮಂಗಲ ದೇಹಿಗಳಾಗಿರುವದು ವೀರಶೈವ ಧರ್ಮಕ್ಕೆ ಹಾಸ್ಯಾಸ್ಪದ ವಿಷಯವಾಗಿದೆ ಆಧುನಿಕ ವಿಜ್ಞಾನ ಪ್ರಭಾವದಿಂದ ವೀರಶೈವ ಬಾಂಧವರು ಹೀಗೆ ಮಾಡದೆ ವೀರಶೈವ ಧರ್ಮದ ತತ್ವಗಳನ್ನು ಆಳವಾಗಿ ಅಧ್ಯಯನ ಮಾಡಿ ಪೂರ್ವಜರಂತೆ ನಡೆದು-ನುಡಿದು, ನುಡಿದಂತೆ ನಡೆದು ಇದೇ ಜನ್ಮವನ್ನು ಕಡೆಯದಾಗಿ ಮಾಡಿಕೊಂಡು ಇಹದಲ್ಲಿ ಆದರ್ಶ ಜೀವಿಗಳಾಗಿ ಲಿಂಗಾಂಗ ಸಾಮರಸ್ಯವನ್ನು ಪಡೆದು ಪರದಲ್ಲಿ ಶಿವಸಾಯುಜ್ಯ ಪದವಿಯನ್ನು ಹೊಂದಬೇಕೆಂಬುದು ನಮ್ಮ ಹೃದಯದ ಹಿರಿಯಾಶೆಯಾಗಿದೆ.

ಈ ಗ್ರಂಥವನ್ನು ಹತ್ತು ರತ್ನಗಳ ರೂಪದಲ್ಲಿ ಶಕ್ಯವಿದ್ದಮಟ್ಟಿಗೆ ವೀರಶೈವ ಧರ್ಮದ ತತ್ವಗಳನ್ನು ಅನೇಕ ಪಾಂಡಿತ್ಯ ಗ್ರಂಥಗಳಿಂದ ಸಂಗ್ರಹಿಸಿ ಅಲ್ಪಮತಿಗೆ ಹೊಳೆದಷ್ಟು ವಿವರಿಸಿ ಬರೆಯಲಾಗಿದೆ. ಹಾಗೂ ವೀರಶೈವ ಧಾರ್ಮಿಕ ಮುಖ್ಯ ಸಂಸ್ಕಾರಗಳ ಪದ್ಧತಿಯನ್ನು ಶಾಸ್ತ್ರೋಕ್ತವಾಗಿ ಬರೆದು ಅವುಗಳಿಗೆ ಬೇಕಾಗುವ

ವೇದಮಂತ್ರಗಳನ್ನೂ, ಆಗಮಮಂತ್ರಗಳನ್ನೂ ಬರೆಯಲಾಗಿದೆ. ಇದರಲ್ಲಿರುವ ಪ್ರತಿಯೊಂದು ರತ್ನಗಳು ಚಿಂತಾರತ್ನಗಳಾಗಿದ್ದು, ಕಾಮಧೇನು ಕಲ್ಪವೃಕ್ಷದಂತೆ ವೀರಶೈವ ಬಾಂಧವರಿಗೂ, ಮಹೇಶ್ವರರಿಗೂ ನಿತ್ಯೋಪಕಯುಕ್ತವಾಗಲಿಕ್ಕೆ ಯಾವ ಸಂದೇಹವಿಲ್ಲ. ಆದರೆ ಸುಗುಣಗ್ರಾಹಿಗಳು ಇದರಲ್ಲಿ ಕಂಡ ಹಸ್ತದೋಷ, ಮುದ್ರಣದೋಷಗಳನ್ನು ಮಿತ್ರ-ಬಾಂಧವ್ಯಭಾವನೆಯಿಂದ ನಮಗೆ ಸೂಚಿಸಿದಲ್ಲಿ ಯೋಗ್ಯವಾದವುಗಳನ್ನು ಎರಡನೆಯ ಮುದ್ರಣದಲ್ಲಿ ಸರಿಪಡಿಸಿಕೊಳ್ಳುವೆವು.

ಜನಸಾಮಾನ್ಯರಿಗೂ ನಿತ್ಯೋಪಯುಕ್ತವಾಗುವಂಥ ವೀರಶೈವ ತತ್ವಗಳನ್ನೊಳಗೊಂಡ ಪೌರೋಹಿತ್ಯ ಗ್ರಂಥವನ್ನು ಬರೆಯಬೇಕೆಂಬಾಶೆಯಿತ್ತು ಆದರೆ ಧಾರ್ಮಿಕ ವಿಷಯವು ಆಧುನಿಕ ಕಾಲದಲ್ಲಿ ಕಥೆ ಕಾದಂಬರಿ ಕವನ ನಾಟಕ ಸಿನೇಮಾಗಳಂತೆ ರಸಿಕತನದಾಗದಿದ್ದ ಮೂಲಕ ಗ್ರಂಥ ಪ್ರಕಟನೆಗೆ ಯೋಗ್ಯಪರಿಸ್ಥಿತಿಯುತ್ಪನ್ನವಾಗದೆ ಹಾಗೆಯೇ ಸ್ಥಗಿತವಾಗಿತ್ತು ಆಕಸ್ಮಿಕವಾಗಿ ಈ ಗ್ರಂಥ ಪ್ರಕಟನೆಯ ಮಹಾತ್ಕಾರ್ಯಕ್ಕೆ ಗದಗಿನ ಸುಪ್ರಸಿದ್ಧ ಪುಸ್ತಕ ವ್ಯಾಪಾರಿಗಳಾದ ವೇ|| ಪಿ. ಶಿ. ಶಾಬಾದಿಮಠ ಇವರು ಮುಂದೆ ಬಂದು ನಮಗೆ ಯೋಗ್ಯ ಪ್ರೋತ್ಸಾಹ ಕೊಟ್ಟು ಈ ಗ್ರಂಥಕ್ಕೆಬೇಕಾಗುವ ಕೆಲವು ಸಂಸ್ಕೃತ ಪಾಂಡಿತ್ಯಗಳನ್ನು ಸಂಭಾವನೆಯಾಗಿ ಕೊಟ್ಟು ಗ್ರಂಥ ಪ್ರಕಾಶನ ಹಕ್ಕನ್ನು ವಹಿಸಿಕೊಂಡರು ಇದಲ್ಲದೆ ಇನ್ನೊಂದು "ವಿದ್ಯಾಸಾಗರ"ವೆಂಬ ಜ್ಯೋತಿಷ್ಯ, ಕಾಮಶಾಸ್ತ್ರ, ವೈದ್ಯಶಾಸ್ತ್ರ, ಕೈಗಾರಿಕೆಶಾಸ್ತ್ರ ಮೊದಲಾದ ಅನೇಕ ವಿಷಯಗಳಿಂದೊಡಗೂಡಿದ ೫೦೦-೬೦೦ ಪುಟಗಳ ಬೃಹದ್ಗಂಥವನ್ನೊಂದು ಬರೆಯಲಿಕ್ಕೆ ಪ್ರೋತ್ಸಾಹಕೊಟ್ಟಿರುವದಲ್ಲದೆ ಅದೂನಹ ಬೇಗ ಅಚ್ಚಾಗಿ ಪ್ರಕಟವಾಗುವ ಸಿದ್ಧತೆಯಲ್ಲಿದೆ ದೇವರು ಇವರಿಗೆ ಇನ್ನೂ ಇಂಥ ಅನೇಕ ಗ್ರಂಥಗಳ ರಚನೆಗೆ ಪ್ರೋತ್ಸಾಹ ಕೊಡುವ ಶಕ್ತಿಯನ್ನೂ ಬುದ್ಧಿಯನ್ನೂ ಕೊಡಲೆಂದು ಆ ದಯಾಘನನಾದ ಪರಮಾತ್ಮನನ್ನು ಪ್ರಾರ್ಥಿಸಿ ದೇವರು ಅವರಿಗೆ ಆಯುರಾರೋಗ್ಯ ಸಕಲ ಸಂಪತ್ತನ್ನು ದಯಪಾಲಿಸಲೆಂದು ನಾವು ಹೃತ್ಪೂರ್ವಕ ಹಾರೈಸಿ ಅವರನ್ನು ಅಭಿನಂದಿಸುತ್ತೇವೆ ಹಾಗೂ ಈ ಗ್ರಂಥವನ್ನು ಅಚ್ಚುಕಟ್ಟಾಗಿ ಸಕಾಲಕ್ಕೆ ಅಚ್ಚು ಮಾಡಿಕೊಟ್ಟ ರಾಯಲ್ ಪ್ರಿಂಟಿಂಗ ಪ್ರೆಸ್ಸಿನ ಮಾಲಕರಾದ ಶ್ರೀ ಎನ್. ವ್ಹಿ. ಶ್ರೇಷ್ಠಿ ಇವರಿಗೆ ನಮ್ಮ ಅನೇಕ ಧನ್ಯವಾದಗಳು,

ತಮ್ಮ
ವಿದ್ವಜನ-ವಿಧೇಯ
ವೇ|| ಪಂಡಿತ **ಚನವೀರ ಶಾಸ್ತ್ರಿಗಳು ಸಾಲೀಮಠ**
ಶ್ರೀ ಬಸವರಾಜ ಪಂಚಾಂಗ ಕರ್ತೃ
(ಮಂಗಳವಾರ ಪೇಟಿ ಕಲ್ಯಾಣಮಠ) **ಹುಬ್ಬಳ್ಳಿ.**

# ವೀರಶೈವ ದಶರತ್ನ ಗ್ರಂಥದೊಳಗಿನ
# ವಿಷಯಾನುಕ್ರಮಣಿಕೆ.

## ೪ ಚತುರ್ಥ ರತ್ನ

| ವಿಷಯಗಳು | ಪುಟಸಂಖ್ಯೆ |
|---|---|
| ತತ್ವ ಶುದ್ಧಿ | ೧೪೩ |
| ಷಡಧ್ವ ಶುದ್ಧಿ | ೧೪೪ |
| ಪ್ರಾಣಾಯಾಮ | ೧೪೫ |
| ನ್ಯಾಸತ್ರಯ ವಿಚಾರ | ,, |
| ಸೃಷ್ಟಿನ್ಯಾಸ ಕ್ರಮ ವಿಚಾರ | ೧೪೬ |
| ಕರನ್ಯಾಸ ಕ್ರಮ, ದೇಹನ್ಯಾಸಕ್ರಮ | ,, |
| ಅಂಗನ್ಯಾಸಕ್ರಮ, ಸ್ಥಿತಿನ್ಯಾಸಕ್ರಮ | ,, |
| ಕರನ್ಯಾಸ ಕ್ರಮ | ೧೪೭ |
| ದೇಹನ್ಯಾಸ, ಅಂಗನ್ಯಾಸ | ,, |
| ಸಂಹಾರನ್ಯಾಸ ಕ್ರಮ | ೧೪೭ |
| ದೇಹನ್ಯಾಸ | |
| ಅಂಗನ್ಯಾಸ | ೧೪೮ |
| ಅಭಿಷೇಕ ಮಂತ್ರಗಳು | |
| ಪಾದ್ಯ, ಅರ್ಘ್ಯ, ಆಚಮನ, ಮಧುಪರ್ಕ | , |
| ಸ್ನಾನ | ೧೪೯ |
| ಪಂಚಾಮೃತ ಅಭಿಷೇಕ ಮಂತ್ರ | |
| ಕ್ಷೀರ (ಹಾಲು) | |
| ದಧಿ(ಮೊಸರು), ಘೃತ(ತುಪ್ಪ) | ,, |
| ಮಧು(ಜೇನುತುಪ್ಪ) | ,, |
| ಶರ್ಕರಾ(ಸಕ್ಕರೆ) | ೧೫೦ |
| ಕದಳೀ ರಸ ಮಂತ್ರ | |
| ದ್ರಾಕ್ಷಾರಸ, ಕಪಿತ್ಥರಸ, ಖರ್ಜೂರರಸ | ,, |
| ಊರ್ವಾರುಕ ರಸ | ೧೫೧ |
| ಇಕ್ಷುರಸ, ನಾರಿಕೇಳರಸ, ಆಮ್ಲರಸ | ,, |
| ತೈಲ, ಪರಮಾನ್ನ | ,, |
| ಗೋಧೂಮ ಪಿಷ್ಟ | ೧೫೨ |
| ಮುದ್ಗಪಿಷ್ಟ, ತಂಡುಲಪಿಷ್ಟ | ,, |
| ಹರಿದ್ರಾಪಿಷ್ಟ, ಆಮಲಕ ಪಿಷ್ಟ | ,, |
| ಕುಶೋದಕ | ,, |
| ಕುಸ್ಮೋದಕ, ಭಸ್ಮೋದಕ | ೧೫೩ |
| ಕಂದೋದಕ, ಪುಷ್ಪೋದಕ | ,, |
| ಪತ್ರೋದಕ, ಪಿಪ್ಪಲೋದಕ | ,, |
| ಪಲ್ಲೋದಕ, ಮೂಲೋದಕ | ೧೫೪ |
| ಸ್ವರ್ಣೋದಕ, ರತ್ನೋದಕ | ,, |
| ಮಂತ್ರೋದಕ, ಯವೋದಕ | ,, |
| ಗೋಧೂಮೋದಕ, ಮುದ್ಗೋದಕ | ೧೫೫ |
| ತಿಲೋದಕ ಮಂತ್ರ, ವ್ರೀಹ್ಯುದಕ | ,, |
| ಶಮೀ ಪತ್ರೋದಕ, ಬಿಲ್ವಪತ್ರೋದಕ | ,, |

| ವಿಷಯಗಳು | ಪುಟಸಂಖ್ಯೆ |
|---|---|
| ಕುಂದ ಪತ್ರೋದಕ | ೧೫೬ |
| ಮಂದಾರು ಪತ್ರೋದಕ | ,, |
| ಕರವೀರ ಪತ್ರೋದಕ | ,, |
| ಕುಂಕುಮೋದಕ, ರೋಚನೋದಕ | ,, |
| ಕರ್ಪೂರೋದಕ, ಚಂದನೋದಕ | ೧೫೭ |
| ರಕ್ತ ಚಂದನೋದಕ | ,, |
| ಶ್ರೀ ಮಹಾರುದ್ರಾಭಿಷೇಕ ಕ್ರಮ | ೧೫೭ |
| ನಿರಂಜನ ಸ್ತೋತ್ರಂ | |
| ಶ್ರೀ ರುದ್ರಾಧ್ಯಾಯ ಪ್ರಾರಂಭ | ೧೫೯ |
| ಧ್ಯಾನ | ೧೬೦ |
| ಅಥ ಚಮಕಾಧ್ಯಾಯ | ೧೬೫ |
| ಪುರುಷಸೂಕ್ತ ಮಹಾಭಿಷೇಕ | ೧೬೯ |
| ಯಜುರ್ವೇದೀಯ ಶಾಂತಾಧ್ಯಾಯ | ೧೭೦ |
| ಶ್ರೀರುದ್ರ ಸ್ವಸ್ತಿ ಪ್ರಾರ್ಥನಾ | |
| ಮಂತ್ರಾಧ್ಯಾಯ | ೧೭೧ |
| ವೇದೋಕ್ತ ಪುಷ್ಪಾಂಜಲಿ ಮಂತ್ರ | ೧೭೩ |
| ಭೋಜನ ಸಂಕಲ್ಪ | ,, |

## ಷಷ್ಠ ರತ್ನ

| ವಿಷಯಗಳು | ಪುಟಸಂಖ್ಯೆ |
|---|---|
| ಸರ್ವದೇವಾ ಪೂಜಾ ಪ್ರಕರಣ | ೧೭೪ |
| ಸಂಕಲ್ಪ ವಿಧಾನ | ,, |
| ಶ್ರೀ ಗಣಪತಿ ಪೂಜಾಕ್ರಮ | ೧೭೫ |
| ಆಹ್ವಾನ ಮಂತ್ರ | ,, |
| ಸರ್ವದೇವ ಆಹ್ವಾನ ಮಂತ್ರ | ೧೭೭ |
| ಆಸನಮಂತ್ರ, ಕುಂಕುಮಧಾರಣಮಂತ್ರ | ,, |
| ಹರಿದ್ರಾ (ಅರಿಷಿಣಪುಡಿ) ಮಂತ್ರ | ,, |
| ಕಜ್ಜಲ (ಕಾಡಿಗೆ) ಧಾರಣ ಮಂತ್ರ | ,, |
| ಸಿಂಧೂರ ಧಾರಣ ಮಂತ್ರ | ,, |
| ಕಂಠಸೂತ್ರ ಧಾರಣ ಮಂತ್ರ | ೧೭೮ |
| ಕಂಕಣಧಾರಣ ಮಂತ್ರ | ,, |
| ಕರ್ಣಕುಂಡಲ ಧಾರಣ ಮಂತ್ರ | ,, |
| ಸ್ವಸ್ತಿ ಪುಣ್ಯಾಹ ವಾಚನ | ೧೭೮ |
| ನಾಂದೀ ಸಮಾರಾಧನ | ೧೮೫ |
| ಅಂಕುರಾರೋಪಣ | ೧೮೬ |
| ಮಂಟಪ ದೇವತಾ ಪ್ರತಿಷ್ಠೆ ಹಾಗೂ ಪೂಜಾ ಕ್ರಮ | ೧೮೭ |
| ಪಂಚಕಲಶ ಸ್ಥಾಪನಾ ಕ್ರಮ | ೧೯೦ |
| ಪಂಚಪೀಠಗಳ ಪಂಚ ಪ್ರಣವಗಳು | ,, |
| ಆಯಾಯ ಸೂತ್ರಕ್ಕನುಸಾರವಾಗಿ ಕಲಶಗಳ ಸ್ಥಾಪನಾ ಕ್ರಮ | |

## ನವಮ ರತ್ನ



## ದಶಮ ರತ್ನ

ಶ್ರೀ ಗುರುಸಿದ್ಧೇಶ್ವರ ಪ್ರಸೀದ ||

# ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು ಮೂರುಸಾವಿರಮಠ ಹುಬ್ಬಳ್ಳಿ

## ಪೂಜ್ಯಪಾದರವರ

# ಆಶೀರ್ವಚನವು.



ವೇ|| ಪಂಡಿತ ಚನ್ನವೀರಶಾಸ್ತ್ರಿಗಳು ನಾಲೀಮಠ, ಶ್ರೀಬಸವರಾಜ ಪಂಚಾಂಗ ಕರ್ತ ಹುಬ್ಬಳ್ಳಿ ಇವರು ಸಂಗ್ರಹಿಸಿರುವ **"ವೀರಶೈವ ದಶರತ್ನ"** ಅಥವಾ ಪುರೋಹಿತರ ಕೈಪಿಡಿ ಎಂಬ ಗ್ರಂಥ ವನ್ನು ಮುಖ್ಯ ಮುಖ್ಯ ಸ್ಥಲಗಳಲ್ಲಿ ಅವಲೋಕನ ಮಾಡಲಾಗಿ ಈ ಗ್ರಂಥವಲ್ಲಿ ವೀರಶೈವರಿಗೆ ಅತ್ಯಾವಶ್ಯಕವಾಗಿ ತಿಳಿದು ಕೊಳ್ಳಬೇಕಾದಂಥಹ ಅನೇಕ ವಿಷಯ ಗಳನ್ನು ಶಾಸ್ತ್ರಿಗಳು ಬಹು ಪರಿಶ್ರಮಪಟ್ಟು ಸಂಗ್ರಹಿಸಿರುವರು. ಸರಳವಾದ ಭಾಷಯಲ್ಲಿ, ಬಿಡಿಗನ್ನಡದಿಂದ ವಿಷಯಗಳನ್ನು ಆಧಾರಪೂರ್ವಕವಾಗಿ ವಿವರಿ ಸಿರುವದರಿಂದ ಪಂಡಿತರೂ ಪಾಮರರೂ ಸಂಗ್ರಹಿಸಲು ಈ ಗ್ರಂಥವು ಯೋಗ್ಯವಾಗಿದೆ. ಶಾಸ್ತ್ರಿಗಳವರು ಇನ್ನೂ ಇಂಥ ಅನೇಕ ಗ್ರಂಥಗಳನ್ನು ಬರೆದು ಯಶೋಭಾಗಿಗಳಾಗಲೆಂದೂ, ಹಾಗೂ ಅಂಥ ಪ್ರತಿಭಾಶಕ್ತಿಯನ್ನು ಉತ್ತರೋತ್ತರವಾಗಿ ದಯಾಮಯನಾದ ಶ್ರೀ ಗುರುಸಿದ್ಧೇಶ್ವರನು ಕರುಣಿಸ ಲೆಂದೂ ಆಶೀರ್ವದಿಸೋಣವಾಗುತ್ತದೆ.

# ಗ್ರಂಥಕರ್ತ



ವೇದಮೂರ್ತಿಗಳಾದ ಪಂಡಿತ ಬ್ರಹ್ಮಶ್ರೀ ಸಿದ್ಧಾಂತಿ

**ಚನವೀರಶಾಸ್ತ್ರಿಗಳು ಸಾಲೀಮಠ**

ಶ್ರೀ ಬಸವರಾಜ ಪಂಚಾಂಗಕರ್ತ

(ಮಂಗಳವಾರ ಪೇಟೆ ಕಲ್ಯಾಣಿಮಠ)

ಹುಬ್ಬಳ್ಳಿ.

ಶ್ರೀ ಗುರುಭ್ಯೋನಮಃ





# ವೀರಶೈವ-ದಶರತ್ನ.

## ॥ ಮಂಗಲಾಚರಣಂ ॥

### ॥ ಶ್ರೀ ಗಜಾನನ ಸ್ತೋತ್ರಂ ॥

ಅಗಜಾನನ ಪದ್ಮಾರ್ಕಂ ಗಜಾನನ ಮಹರ್ನಿಶವರ್ ।
ಅನೇಕ ದಂತಂ ಭಕ್ತಾನಾಮೇಕದಂತ ಮುಪಾಸ್ಮಹೇ ॥ ೧ ॥

### ॥ ಶ್ರೀ ನಿರಂಜನ ಸ್ತೋತ್ರಂ ॥

ಚೈತನ್ಯಂ ಶಾಶ್ವತಂ ಶಾಂತಂ ವ್ಯೋಮಾತೀತಂ ನಿರಂಜನಂ ।
ನಾದಬಿಂದು ಕಲಾತೀತಂ ತಸ್ಮೈ ಶ್ರೀ ಗುರುವೇನಮಃ ॥ ೨ ॥

### ॥ ಶ್ರೀಗುರು ಸ್ತೋತ್ರಮ್ ॥

ಗುರುದೇವೋ ಮಹಾದೇವೋ ಗುರುದೇವೋ ಸದಾಶಿವಃ ।
ಗುರುದೊವಾತ್ಪರಂ ನಾಸ್ತಿ ತಸ್ಮೈ ಶ್ರೀ ಗುರವೇನಮಃ ॥ ೩ ॥

### ॥ ಸ್ವಗೋತ್ರ ಗುರುಸ್ತೋತ್ರಮ್ ॥

ಸದ್ಯೋಜಾತ ಮುಖೋದ್ಭೂತಂ ಸದ್ಯೋ ವೈಭವದಾಯಕಂ ।
ಸಿದ್ಧಿದಂ ಸಿದ್ಧಿ ವೃಂದಸ್ಯ ವಂದೇ ಶ್ರೀ ರೇಣುಕಂ ಗುರುಂ ॥ ೪ ॥

### ॥ ಶ್ರೀ ಬಸವೇಶ್ವರ ಸ್ತೋತ್ರಮ್ ॥

ಏನ ಸಂವರ್ಧಿತಂ ಲೋಕೇ ವೀರಶೈವ ಮತಂ ಪುರಂ ।
ತಂ ವಂದೇ ಶಿವ ಸಿದ್ಧಾಂತ ಕೋವಿದಂ ಬಸವೇಶ್ವರಂ ॥ ೫ ॥

ಶ್ರೀ ಗೌರೀ ತನಯನಾದ ಅನೇಕ ವಿಘ್ನಗಳ ಸಮೂಹವನ್ನು ಸಂಹಾರ ಮಾಡತಕ್ಕವನಾದ ವಿಘ್ನೇಶ್ವರನಿಗೆ ವಂದಿಸಿ, ಶ್ರೀ ಗುರುವಿಗೂ, ನಾದಬಿಂದು ಕಲಾತೀತವಾದ ಶ್ರೀಮನ್ನಿರಂಜನ ಜಗದ್ಗುರು ಮೂರುಸಾವಿರ ಮಠಾಧ್ಯಕ್ಷ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರ ದಿವ್ಯ ಚರಣಾರವಿಂದಗಳಲ್ಲಿಯೂ ಹಾಗೂ ಸ್ವಗೋತ್ರ ಗುರುಗಳಾದ ಶ್ರೀಮದ್ರಂಭಾಪುರೀ ವೀರ ಸಿಂಹಾಸನಾಧೀಶ್ವರರಾದ ಶ್ರೀಜಗದ್ಗುರು ರೇಣುಕಾಚಾರ್ಯರಿಗೂ, ದ್ವಿತೀಯ ಶಂಭುವೆನಿಸಿದ, ಶಿವಸಿದ್ಧಾಂತಕೋವಿದ ಶ್ರೀ ಬಸವೇಶ್ವರನಿಗೂ ಅನಂತ ನಮಸ್ಕಾರಗಳನ್ನು ಸಮರ್ಪಿಸಿ ಈ ವೀರಶೈವ ದಶರತ್ನವೆಂಬ ಗ್ರಂಥವನ್ನು ಬರೆಯಲಾರಂಭಿಸುವೆನು,

# ಪ್ರಥಮ-ರತ್ನ.



## ವೀರಶೈವ ಧರ್ಮದ ಸಾಮಾನ್ಯ ಸ್ವರೂಪ

ವೀಶಬ್ದೇನೋಚ್ಯತೇ ವಿದ್ಯಾ ಶಿವಜೀವೈಕ್ಯಬೋಧಿಕಾ ॥
ತಸ್ಯಾಂರಮಂತೇ ಯೇಶೈವಾ ವೀರಶೈವಾಸ್ತುತೇ ಮತಾ ॥೧॥

ವೇದಾಂತ ಜನ್ಯಂ ಯದ್ ಜ್ಞಾನಂ ವಿದ್ಯೇತಿಪರಿ ಕೀರ್ತಿತೇ।
ವಿದ್ಯಾಯಾಂರಮತೇಯಃ ಸವೀರ ಇತ್ಯಭಿದೀಯತೆ ॥೨॥

ವಿದ್ಯಾಯಾಂ ಶಿವರೂಪಾಯಾಂ ರಮಂತೇ ಯೇ ವಿಶೇಷತಃ ।
ತಸ್ಮಾದೇತೇ ಮಹಾಭಾಗಾ ವೀರಶೈವಾ ಇತಿ ಸ್ಮೃತಾಃ ॥೩॥

ವೀರಶೈವ ಶಬ್ದದ ವ್ಯಾಖ್ಯೆಯು ಬಹು ತಾತ್ವಿಕವಾಗಿದೆ. "ವೀರಶೈವ" ಈ ಶಬ್ದದಲ್ಲಿ "ವೀ" ಎಂಬ ಅಕ್ಷರವು ಲಿಂಗಾಂಗ ಸಾಮರಸ್ಯವೆಂಬ ತಾತ್ವಿಕ ಬೋಧೆ, ಅಂದರೆ ಜೀವಾತ್ಮನು, ಆ ಪರಮಾತ್ಮನಲ್ಲಿ ಹೇಗೆ ಐಕ್ಯವಾಗಿ ಮೋಕ್ಷ ಸಾಮ್ರಾಜ್ಯ ಪದವಿಯನ್ನು ಹೊಂದಬೇಕೆಂಬ ವಿದ್ಯೆಯನ್ನು ಬೋಧಿಸುತ್ತದೆ. ಇಂತಹ ಶಿವಜೀವೈಕ್ಯರ ವಿದ್ಯೆಯನ್ನು ಯಾರು ಪ್ರೀತಿಯಿಂದ ರಮಿಸುತ್ತಾರೆಯೋ ಅಂದರೆ ಪರಿಪಾಲಿಸುತ್ತಾರೆಯೋ ಅವರೇ ವೀರಶೈವರೆಂದು ಹೇಳಲ್ಪಡುತ್ತಾರೆ. ಇನ್ನು "ವೀರ" ಎಂಬ ಶಬ್ದವು ಮನುಷ್ಯನು ತನ್ನ ಪಂಚೇಂದ್ರಿಯಗಳ ಮೂಲಕ ಹೊಂದುವ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ಇಹಲೋಕದ ಸುಖಗಳನ್ನು ಅಳಿದು ಆ ಪಂಚೇಂದ್ರಿಯಗಳನ್ನು ತನ್ನ ನಿಯಂತ್ರಣದಲ್ಲಿಟ್ಟುಕೊಂಡು, ಅವುಗಳ ಮೇಲೆ ತನ್ನ ಪ್ರಭುತ್ವವನ್ನು ಸ್ಥಾಪಿಸಿ, ವಿಜಯ ಸಂಪಾದಿಸಬೇಕೆಂಬ ಅರ್ಥವನ್ನೇ ಭೋಧಿಸುತ್ತದೆ. ಆದರೆ ಪ್ರಪಂಚವನ್ನು ತ್ಯಾಜ್ಯಮಾಡಬೇಕೆಂಬ ಅರ್ಥವಲ್ಲ. ಇಂತಹ ವಿದ್ಯೆಯಲ್ಲಿ ವಿಶೇಷವಾಗಿ ಯಾವನು ಪರಿಪೂರ್ಣತೆಯನ್ನು ಪಡೆಯುವನೋ ಅವನೇ ವೀರಶೈವನೆಂದು ಶ್ರುತಿ ಹಾಗೂ ಆಗಮಗಳು ಬೋಧಿಸುತ್ತವೆ.

ವೀರಶೈವ ಧರ್ಮದ ಮುಖ್ಯ ಸಿದ್ಧಾಂತವೆಂದರೆ ಲಿಂಗಾಂಗ ಸಾಮರಸ್ಯವು ಈ ಲಿಂಗಾಂಗಸಾಮರಸ್ಯ ತತ್ವದಲ್ಲಿ, ಅಂಗನು ಅಂದರೆ ಈ ಜೀವಜಗತ್ತುಗಳು ಮಿಥ್ಯೆಯೆಂದು ಹೇಳಲ್ಪಡುವದಿಲ್ಲ. ದೇಹವನ್ನಾಗಲೀ ಅಥವಾ ತನ್ನ ವೃತ್ತಿಯನ್ನಾಗಲೀ ತುಚ್ಛ ಮಾಡಲಾಗುವದಿಲ್ಲ. ಇಹ ಲೋಕದ ಸುಖೋಪಭೋಗಗಳು ದುಃಖಪ್ರದ

ವೆಂದು ಜರಿಯಲಾಗುವದಿಲ್ಲ. ಆದರೆ ಈ ಜೀವಜಗತ್ತುಗಳು ಶಿವನಾಗಬೇಕೆಂಬುದಕ್ಕೆ ಆತ್ಮನು ತನ್ನ ದೇಹವೆಂಬ ದೇವಾಲಯದಲ್ಲಿ ಲಿಂಗಸ್ವರೂಪಿಯಾದ ಆ ಪರಶಿವನನ್ನು ಸ್ಥಾಪಿಸಿಕೊಂಡು ಪೂಜೆ ಮಾಡುವನು. ಜೀವನದ ಸಕಲ ವೃತ್ತಿಗಳೆಲ್ಲವೂ ಶಿವನ ಪೂಜೆಯೆಂದೆನಿಸುವವು. ಮತ್ತು ಜೀವನದ ಸಕಲ ಭೋಗಗಳೆಲ್ಲವೂ ಆ ಶಿವನ ಪ್ರಸಾದವೆಂದೇ ಹೇಳಲಾಗುವದು ಈ ಪ್ರಸಾದದಿಂದಲೇ ಜೀವನು ಶಿವನಾಗುವನು. ಹೀಗೆ ಜೀವನು ಶಿವನಾಗುವದಕ್ಕೆ ಅಷ್ಟಾವರಣಗಳೂ ಷಟಸ್ಥಲಗಳೂ ಹಾಗೂ ಪಂಚಾಚಾರಗಳೂ ಸಾಧನಗಳಾಗಿವೆ. ಆದ್ದರಿಂದ ಯಾವ ವೀರಶೈವನು ಅಷ್ಟಾವರಣಗಳನ್ನೇ ತನ್ನ ಅಂಗವನ್ನಾಗಿಯೂ, ಪಂಚಾಚಾರವನ್ನೇ ತನ್ನ ಪ್ರಾಣವನ್ನಾಗಿಯೂ ಮಾಡಿಕೊಂಡು ಷಟಸ್ಥಲ ಮಾರ್ಗದಿಂದ ನಡೆಯುವನೋ ಅವನಿಗೇ ಈ ಲಿಂಗಾಂಗ ಸಾಮರಸ್ಯ ತತ್ವ ಸಿದ್ಧಿಯಾಗುವದು.

ಶಿವಜೀವರ ಅಭೇದ್ಯತ್ವವೇ ಲಿಂಗಾಂಗಸಾಮರಸ್ಯವೆಂದು ಹೇಳಲ್ಪಡುವದು. ಇದರಲ್ಲಿ ಲಿಂಗತತ್ವವೇ ಉಪಾಸ್ಯವೆಂದೂ, ಅಂಗ ತತ್ವವೇ ಉಪಾಸಕವೆಂದೂ ಹೇಳಲಾಗುವದು. ಇವೆರಡರಲ್ಲಿಯೂ ಭಿನ್ನ ಭೇದವಿಲ್ಲ. ಮತ್ತು ಇವೆರಡರಲ್ಲಿಯೂ ಆ ಶಿವನು ತನ್ನ ಸ್ವರೂಪಕ್ಕೆ ಚ್ಯುತಿಯಿಲ್ಲದಂತೆಯಿರುವನು. ಉಪಾಸಕವೂ ಶಿವಸ್ವರೂಪಕದಲ್ಲಿದೆ, ಶಿವನ ಸ್ವರೂಪವೂ, ಶಿವೋಪಾಸನೆಯಲ್ಲಿದೆ. ಅಂತೂ ತಾತ್ವಿಕವಿಷಯ ವಿವರಣೆಯೆಂದರೆ ಬೀಜಾಂಕುರನ್ಯಾಯದಂತೆ ಹಾಗೂ ಸುವರ್ಣಕಟಕ ನ್ಯಾಯದಂತೆ ಅಭೇದ್ಯವಾಗಿರುತ್ತದೆ.

ಜೀವನು ಆಣವಾದಿ ಮಲತ್ರಯಗಳಿಂದ ಪರಿಶುದ್ಧನಾಗಬೇಕಾದರೆ ಮೊದಲು ಶಿವ ದೀಕ್ಷೆಯನ್ನು ಪಡೆಯಬೇಕಾಗುವದು. ಅಂಗವು ದೀಕ್ಷೆಯಿಂದ ಶುದ್ಧವಾದರೆ ಪುನರ್ಜಾತವೆನಿಸಿ, ಅಂಗವೇ ಶುದ್ಧಜೀವನಾಗುವನು. ಆ ಶುದ್ಧ ಜೀವನ ಸಕಲೇಂದ್ರಿಯಗಳೆಲ್ಲವೂ. ಆ ಶಿವನ ಚಿಚ್ಛಕ್ತಿಯಿಂದಲೇ ಉಂಟಾದವೆಂದು ತಿಳಿಯಲ್ಪಡುವದು. ಯಾವನು ದೀಕ್ಷೆ ಹೊಂದುವದಿಲ್ಲವೋ ಅವನು ವೀರಶೈವನಾಗಲು ಅನರ್ಹನು. ವೀರಶೈವನಿಗೆ ದೀಕ್ಷೆಯಿಲ್ಲದೆ ಮೋಕ್ಷವಿಲ್ಲಾ. ''ವೀರಶೈವಸ್ತು ದೀಕ್ಷಾಯಾಂ ಭುಕ್ತಿಂ ಮುಕ್ತಿಂಚ ವಿದಂತಿ'' ಎಂಬ ವೀರಾಗಮೋಕ್ತಿಯಂತೆ ವೀರಶೈವನಿಗೆ ದೀಕ್ಷೆಯಿಂದಲೇ ಮೋಕ್ಷ ಪ್ರಾಪ್ತಿಯಾಗುವದು. ದೀಕ್ಷಾಂಗದಿಂದಲೇ ಮೋಕ್ಷಾಂಗ ಸಾಧನವಾಗುವದು. ದೀಕ್ಷೆಯಿಂದ ಶುದ್ಧನಾದವನೇ ಲಿಂಗಾಂಗ ಸಾಮರಸ್ಯವನ್ನು ಪಡೆಯಲು ಅರ್ಹನಾಗುತ್ತಾನೆ.

## ಆಣವಾದಿ ಮಲತ್ರಯ ನಿರ್ಣಯ

ಆಣವಂ ಗರ್ಭ ಸಂಬಂಧಂ ಅಣುರೂಪೇ ವ್ಯವಸ್ಥಿತಂ ।
ಮಾಯಜಂ ಜಾತಿಭೇದೇಷು ಮೋಹ ಇತ್ಯಭಿ ಧೀಯತೇ ॥

ಕಾರ್ಮಿಕಂ ದ್ರವ್ಯ ಸಂಬಂಧ ಮೀಷಣತ್ರಯ ಸಂಯುತಮ್ ।
ಇದಂ ಮಲತ್ರಯಂ ದೋಷಂ ಗುರುಣಾತು ವಿಮುಚ್ಯತೇ ॥
(ಲಿಂಗಪುರಾಣೇ)

ಆಣವ ಮಲವೆಂಬುದು ಅಣುರೂಪವಾಗಿ ಗರ್ಭ ಸಂಬಂಧವಾಗಿರುವದು. ಮಾಯಾಮಲವೆಂಬುದು ಮೋಹರೂಪಕವಾಗಿ ಸ್ವಜಾತಿಗಳಲ್ಲಿರುವದು. ಕಾರ್ಮಿಕವೆಂಬುದು ದ್ರವ್ಯರೂಪವಾಗಿ ಆಶಿಸುತ್ತಿರುವದು. ಈ ಮೂರೂ ಮಲಗಳೆಂಬ ದೋಷವು ಶ್ರೀ ಗುರುಕೃಪೆಯಿಂದ ಬಿಡುಗಡೆ ಹೊಂದುವವು.

## ದೀಕ್ಷೆಯ ಸಾಮಾನ್ಯ ಸ್ವರೂಪ

ದೀಯತೇಚ ಶಿವಜ್ಞಾನಂ ಕ್ಷೀಯತೇ ಪಾಶಬಂಧನಂ ।
ಯಸ್ಮಾದತಃ ಸಮಾಖ್ಯಾತಾ ದೀಕ್ಷೇತಿಯಂ ವಿಚಕ್ಷಣೈಃ ॥
ಸಾದೀಕ್ಷಾ ತ್ರಿವಿಧಾ ಪ್ರೋಕ್ತಾ ಶಿವಾಗಮ ವಿಶಾರದೈಃ
ವೇಧಾರೂಪಾ ಕ್ರಿಯಾರೂಪಾ ಮಂತ್ರರೂಪಾ ಚ ತಾಪಸ ॥
(ಸಿದ್ಧಾಂತ ಶಿಖಾಮಣಿ)

ಯಾವುದರಿಂದ ಶಿಷ್ಯನಿಗೆ ಲಿಂಗಸಂಬಂಧವುಂಟಾಗಿ ಶಿವಜ್ಞಾನವುಂಟಾಗುವದೋ ಮತ್ತು ಆಣವಾದಿ ಮಲತ್ರಯಗಳೂ ಮಲ ಮಾಯಾ ಕರ್ಮ ಬಂಧನವೂ ನಾಶವಾಗುವದೋ ಅದಕ್ಕೆ ಶಾಸ್ತ್ರಜ್ಞರು"ದೀಕ್ಷೆ"ಯೆಂದು ಹೇಳುವರು. ದೀಕ್ಷೆಯಲ್ಲಿ ವೇಧಾ ದೀಕ್ಷೆ-ಮಂತ್ರದೀಕ್ಷೆ-ಕ್ರಿಯಾದೀಕ್ಷೆ ಎಂದು ಮೂರು ಪ್ರಕಾರಗಳಿವೆ.

ಈಮೂರೂ ದೀಕ್ಷೆಗಳ ಸಂಸ್ಕಾರವು ಬೇರೆ ಬೇರೆಯಾಗಿರುವವು. ದೀಕ್ಷಾ ಸಂಸ್ಕಾರವು ಸ್ಥೂಲ ಶರೀರದಲ್ಲಿ ಕ್ರಿಯಾತ್ಮಕವಾಗಿಯೂ ಸೂಕ್ಷ್ಮ ಕಾರಣ ಶರೀರಗಳಲ್ಲಿ ಜ್ಞಾನಾತ್ಮಕವಾಗಿಯೂ ಇರುವದು. ಶ್ರೀಗುರುವು ತನ್ನಲ್ಲಿ ಪ್ರಕಾಶಿಸಲ್ಪಡುವ ಶಿವ ತೇಜಸ್ಸಿನ ಮಹಿಮೆಯಿಂದ ಮಂತ್ರಪೂರ್ವಕವಾದ ಕ್ರಿಯೆಯಿಂದಲೂ, ಲಿಂಗ ಸಂಸ್ಕಾರವನ್ನು ಮಾಡಿ, ಅದರಲ್ಲಿಯ ಶಿಲಾಭಾವವನ್ನು ಕಳೆದು ಶಿವ ಕಳೆಯನ್ನು ತುಂಬುವನು.

ತದನಂತರ ಗುರುವು ಕಾರಣ ಸೂಕ್ಷ್ಮ ಸ್ಥೂಲ ಶರೀರಗಳಲ್ಲಿರುವ ಆಣವಾದಿ ಮಲತ್ರಯಗಳನ್ನು ಕಳೆದು ಕ್ರಮವಾಗಿ ಜ್ಞಾನಗಮ್ಯವಾದ ಭಾವ ಲಿಂಗವನ್ನು ವೇಧಾ ದೀಕ್ಷೆಯಿಂದ ಕಾರಣ ಶರೀರದಲ್ಲೂ ಮಂತ್ರಗಮ್ಯವಾದ ಪ್ರಾಣಲಿಂಗವನ್ನು ಮನುದೀಕ್ಷೆಯಿಂದ ಸೂಕ್ಷ್ಮ ಶರೀರದಲ್ಲಿಯೂ ಕ್ರಿಯಾಗಮ್ಯವಾದ ಇಷ್ಟಲಿಂಗವನ್ನು ಕ್ರಿಯಾ ದೀಕ್ಷೆಯಿಂದ ಸ್ಥೂಲ ಶರೀರದಲ್ಲೂ ಸಂಯೋಗಪಡಿಸಿ

ಆ ಇಷ್ಟಲಿಂಗವೇ ನಿನ್ನಾತ್ಮ ಸ್ವರೂಪವೆಂದು ಭಾವಿಸಬೇಕೆಂದು ಬೋಧಿಸಿ ತಾನು ಸಂಸ್ಕಾರ ಮಾಡಿದ ಇಷ್ಟಲಿಂಗವನ್ನು ದೇಹದಲ್ಲಿ ಸಂಬಂಧ ಮಾಡುವನು. ಇದರಿಂದ ಆಣವಾದಿ ಮಲತ್ರಯಗಳು ಉಪರೋಕ್ತ ತ್ರಿವಿಧ ದೀಕ್ಷೆಯಿಂದ ನಾಶವಾಗಿ ಕಾರಣ ಸೂಕ್ಷ್ಮ ಸ್ಥೂಲ ಶರೀರತ್ರಯಗಳು ಲಿಂಗಮಯವಾಗುವವು.

ಆಗ ಅಂಗನಿಗೆ ಲಿಂಗದೊಡನೆ ಸಾಮರಸ್ಯ ಪ್ರಾಪ್ತ ಪ್ರಾಪ್ತಲಭ್ಯವಾಗುದದು. ಈ ಲಿಂಗಾಂಗ ಸಾಮರಸ್ಯವು ಪ್ರಾಪ್ತವಾಗುವದಕ್ಕೆ ದೀಕ್ಷೆಯೇ ಮೂಲ ಕಾರಣವಾಗಿದೆ. ಈ ದೀಕ್ಷಾ ಸಂಸ್ಕಾರದಿಂದಲೇ ಲಿಂಗಸಂಸ್ಕಾರವು ನಿತ್ಯಸಂಬಂಧವಾಗಿ ಆ ಮೂಲಕ ಸಚ್ಚಿದಾನಂದ ಸ್ವರೂಪವು ಶಿಷ್ಯನಲ್ಲಿ ಒಡಮೂಡುವದು ಆದ್ದರಿಂದ ಪ್ರತಿಯೊಬ್ಬ ವೀರಶೈವನು ದೀಕ್ಷೆಯಾಗಬೇಕಾಗುವದು ಅತ್ಯವಶ್ಯಕವಾಗಿರುವದಲ್ಲದೆ ಮೋಕ್ಷ ಪದವಿಯನ್ನು ಹೊಂದಲು ಅರ್ಹನಾಗುತ್ತಾನೆ.

## "ತತ್ವಮಸಿ" ಎಂಬ ವೇದ ವಾಕ್ಯದ ಅರ್ಥ ವಿವರಣೆ

ದೀಕ್ಷಾಂಗವಾಗಬೇಕಾದರೆ ಗುರು ಜಂಗಮರಿಂದ ಉಪದೇಶ ಮಾಡಲ್ಪಡಲಾಗುವದು. "ತತ್ವಮಸಿ" ಎಂಬ ವೇದದ ವಾಕ್ಯದ ಅರ್ಥವನ್ನು ಗುರುಮುಖವಾಗಿಯೇ ಅರಿತುಕೊಳ್ಳಬೇಕಾಗುವದು.

"ತತ್ವಮಸಿ" ಎಂಬ ಪದದ ಅರ್ಥವು ಶಿವ ಸಿದ್ಧಾಂತದಲ್ಲಿ ಹೀಗೆ ಹೇಳಿದೆ:-

ಲಿಂಗಂತತ್ಪದ ಮಾಖ್ಯಾತ ಮಂಗಂತ್ವಂ ಪದ ಮೀ ರಿತಂ|
ಸಂಯೋಗೋಽಸಿಪದಂಪ್ರೋಕ್ತ ಮನ ಯೋ ರಂಗಲಿಂಗಯೋಃ||

ಎಂಬಂತೆ "ತತ್" ಅಂದರೆ ಇಷ್ಟಲಿಂಗವೇ "ತತ್" ಪದದ ಅರ್ಥವಾಗಿದೆ. ಅಂಗವೇ "ತ್ವಂ" ಪದದ ಅರ್ಥವಾಗಿದೆ.. ಇವೆರಡರ ಸಂಬಂಧವೆಂಬುದೇ "ಅಸಿ" ಪದದ ಅರ್ಥವಾಗಿದೆ. ಈ ಪ್ರಕಾರವಾಗಿ ವೇದವೂ ಸಹ "ತತ್ವಮಸಿ" ಎಂಬುದಾಗಿ ಲಿಂಗಾಂಗ ಸಾಮರಸ್ಯ ಬೋಧೆಯನ್ನು ಮಾಡುವದು. ಈ ತತ್ವಕ್ಕೆ ಸಾಧನಗಳಾದ ಅಷ್ಟಾವರಣ ಪಂಚಾಚಾರ, ಷಟ್‌ಸ್ಥಲಗಳ ವಿಷಯ ವಿವರಣೆಯನ್ನು ಮುಂದೆ ಕ್ರಮವಾಗಿ ಮಾಡಲಾಗುವದು.

## ಅಷ್ಟಾವರಣಗಳ ಮಹಿಮೆ ಹಾಗೂ ಅವುಗಳ ಸಕ್ರಮ ವಿಚಾರವು

ಅಷ್ಟಾವರಣಗಳು ವೀರಶೈವರಿಗೆ ಅಂಗವಾಗಿದ್ದು, ಅವು ವೀರಶೈವ ಧರ್ಮದ ಮುಖ್ಯ ತತ್ವಗಳಾಗಿವೆ. ಅಷ್ಟಾವರಣಗಳಲ್ಲಿ ಬಹಿರಷ್ಟಾವರಣವೆಂದೂ ಮತ್ತು ಅಂತರಷ್ಟಾವರಣವೆಂದೂ ಎರಡು ಪ್ರಕಾರಗಳಿವೆ.

ವೀರಶೈವ ಧರ್ಮವು ಕೇವಲ ಕ್ರಿಯಾತ್ಮಕವೂ ಅಲ್ಲ. ಕೇವಲ ಜ್ಞಾನಾತ್ಮಕವೂ ಅಲ್ಲ. ಆದರೆ ಈ ಧರ್ಮದಲ್ಲಿ ಕ್ರಿಯಾಜ್ಞಾನಗಳೆರಡೂ ಅಂಗೀಕರಿಸಲ್ಪಟ್ಟಿವೆ. ಯಾಕಂದರೆ ಕ್ರಿಯಾರಹಿತವಾದ ಜ್ಞಾನವಾಗಲೀ ಅಥವಾ ಜ್ಞಾನರಹಿತವಾದ ಕ್ರಿಯಾವಾಗಲೀ ಅವು ನಿಜವಾದ ಕ್ರಿಯಾಜ್ಞಾನಗಳೆಂದು ಹೇಳಲಾಗುವದಿಲ್ಲ. ಈ ಕಾರಣದಿಂದಲೇ ಅಷ್ಟಾವರಣಗಳಲ್ಲಿ ಕ್ರಿಯಾರೂಪ ಅಷ್ಟಾವರಣವೆಂದೂ, ಜ್ಞಾನರೂಪ ಅಷ್ಟಾವರಣವೆಂದೂ ಎರಡು ವಿಭಾಗ ಮಾಡಲಾಗಿದೆ. ಇವುಗಳಿಗೇ ಅನುಕ್ರಮವಾಗಿ ಬಹಿರಷ್ಟಾವರಣವೆಂದೂ–ಅಂತರಷ್ಟಾವರಣವೆಂದೂ ಕರೆಯಲಾಗುವದು. ಬಹಿರಷ್ಟಾವರಣಗಳೇ ಧಾರ್ಮಿಕಾಚರಣೆಯುಳ್ಳವೆಂದೂ, ಅಂತರಷ್ಟಾವರಣಗಳೇ ತಾತ್ವಿಕವೆಂದೂ ಹೇಳಲಾಗಿದೆ. ತಣ್ಣೀರಿನಲ್ಲಿ ಉಷ್ಣತೆಯನ್ನು ಬೆರೆಸಬೇಕಾದರೆ ಹೊರಗಿನಿಂದ ಅಗ್ನಿ ಸಂಸ್ಕಾರದ ಅವಶ್ಯಕತೆ ಹೇಗಿರುವದೋ ಹಾಗೆ ಅಂತರಷ್ಟಾವರಣಶುದ್ಧಿಗೆ ಬಾಹ್ಯಾಷ್ಟಾವರಣ ಶುದ್ಧಿಯಾಗುವದು ಅತ್ಯವಶ್ಯಕವಾಗಿದೆ.

೧ ಗುರು. ೨ ಲಿಂಗ. ೩ ಜಂಗಮ. ೪ ಪಾದೋದಕ. ೫ ಪ್ರಸಾದ. ೬ ವಿಭೂತಿ. ೭ ರುದ್ರಾಕ್ಷಿ. ೮ ಮಂತ್ರ ಇವುಗಳಿಗೆ ಅಷ್ಟಾವರಗಳೆಂಬ ಹೆಸರು ಇವುಗಳ ವಿಷಯಗಳನ್ನು ಮುಂದೆ ಕ್ರಮಬದ್ಧವಾಗಿ ವಿವರಿಸಲಾಗುವದು. ಈ ಅಷ್ಟಾವರಣಗಳೇ ವೀರಶೈವರ ಮುಖ್ಯ ಲಕ್ಷಣವಾಗಿದ್ದು ಅವು ಮೋಕ್ಷಪ್ರದವಾಗಿರುವದರಿಂದ ಪ್ರತಿಯೊಬ್ಬ ವೀರಶೈವನು ಅಷ್ಟಾವರಣಗಳ ತತ್ವಾರ್ಥಗಳನ್ನು ಚನ್ನಾಗಿ ಅರಿತುಕೊಂಡು ನಿತ್ಯ ಜೀವನದ ಆಚಾರದಲ್ಲಿ ಅಳವಡಿಸಿಕೊಂಡು ನಡೆದರೆ ಶಿವ ಸಾಯುಜ್ಯವು ಕರತಲಾಗತವಾಗುವದು. ವೀರಶೈವನು ಸಂಪೂರ್ಣ ಅಷ್ಟಾವರಣಾಂಗನಾಗಬೇಕಾದರೆ ಬಹಿರಷ್ಟಾವರಣಗಳೊಡನೆ ಆಚರಿಸಿ ಅಂತರಷ್ಟಾವರಣಗಳಲ್ಲಿಯ ಜ್ಞಾನಸ್ವರೂಪವನ್ನು ಪಡೆಯಬೇಕಾಗುವದು. ಹೀಗೆ ಅಷ್ಟಾವರಣಗಳ ತತ್ವದಿಂದ ವೀರಶೈವ ಧರ್ಮದಲ್ಲಿ ವ್ಯಾಪಕವಾದ ಒಂದು ವೈಶಿಷ್ಟ್ಯವು ವ್ಯಕ್ತವಾಗುತ್ತದೆ.

## ಅಷ್ಟಾವರಣಗಳಲ್ಲಿ ಮೊದಲನೆಯ ಆವರಣದಾದ ಗುರು ಮಹಿಮೆ ವಿಚಾರ

ಗುರು ರೂಪ ಧರೋದೇವೀ ಶಿವಏವ ಮಹೇತತೇ।
ಕರೋತ್ಯನುಗ್ರಹಂ ಶಿಷ್ಯಕುಲಂ ಭಕ್ತ್ಯಾನುಮೋದಿತಃ ॥೧॥

ಎಂಬ ಶಿವ ರಹಸ್ಯ ಗ್ರಂಥಾನುಸಾರವಾಗಿ ಶಿವನೇ ಗುರುರೂಪವನ್ನು ಧಾರಣಮಾಡಿಕೊಂಡು ಶಿಷ್ಯ ಕುಲೋದ್ಧಾರಕ್ಕಾಗಿ ಈ ಭೂಲೋಕದಲ್ಲಿ ಅವತರಿಸಿ

ಸದ್ಭಕ್ತ ವೃಂದಕ್ಕೆ ಅನುಗ್ರಹವನ್ನು ಮಾಡಿ ರಕ್ಷಿಸುತ್ತಾನೆ. ''ಯಃ ಶಿವಃ ಗುರು ಜ್ಞೇಯೋ ಯೋಗುರುಃ ಸ ಶಿವಸ್ಮೃತಃ'' ಎಂಬ ಸಿದ್ಧಾಂತ ಶಿಖಾಮಣಿಯ ಉಕ್ತಿಯಂತೆ ಶಿವನ ಸ್ವರೂಪವೇ ಗುರುವೆಂದೂ, ಗುರುವೇ ಶಿವನ ಸ್ವರೂಪವೆಂದೂ ತಿಳಿದು ಉಭಯತರಲ್ಲಿ ಭಿನ್ನಭೇದವನ್ನು ಗಣಿಸದೆ ಶಿವನೇ ಗುರುವೆಂದು ಭಾವಿಸಿ ಶ್ರೀ ಗುರುವಿನನ್ನೇ ಅನನ್ಯಭಕ್ತಿಯಿಂದ ಪೂಜಿಸಬೇಕು. ''ಯಶ್ಯದೇವೇ ಪರಾಭಕ್ತಿರ್ಯಥಾ ದೇವೇ ತಥಾ ಗುರೌ'' ಶಿವನಂತೆ ಗುರುವಿನಲ್ಲಿಯೂಭಕ್ತಿಯು ಇಡಬೇಕೆಂದು ಶೃತಿಯು ಹೇಳುತ್ತದೆ. ಆದ್ದರಿಂದ ಶ್ರೀ ಗುರುವೇ ಸದ್ಗತಿಗೆ ಕಾರಣವಾಗಿದ್ದರಿಂದ ಶ್ರೀಗುರುವಿಗಿಂತ ಹೆಚ್ಚಿನ ವಸ್ತುವು ಜಗತ್ತಿನಲ್ಲಿ ಬೇರೊಂದು ಇಲ್ಲವೆಂದು ಶಿವ ರಹಸ್ಯದಲ್ಲಿ ಉಲ್ಲೇಖಿಸಲಾಗಿದೆ.

ನಗರೋರಧಿಕಂ, ನಾಗರೋರಧಿಕಂ, ನಾಗರೋರಧಿಕಂ, ವಿದಿತಂ ವಿದಿತಮ್ ||
ವಿದಿತಂ ವಿದಿತಂ, ಶಿವಶಾಸನತಃ ಶಿವಶಾಸನತಃ ಶಿವಶಾಸನತಃ ||೨||

ಅಂದರೆ ಗುರುವಿಗಿಂತ ಅಧಿಕವಿಲ್ಲಾ ಗುರುವಿಗಿಂತ ಅಧಿಕವಿಲ್ಲಾ ಇದು ನಿಶ್ಚಿತವೆಂದೂ, ಹಾಗೂ ನಾರಿ ಸಾರಿ ಘಂಟಾಘೋಷವಾಗಿ ಶ್ರೀಗುರುವಿಗಿಂತ ಅಧಿಕ ವಸ್ತು ಜಗತ್ತಿನಲ್ಲಿಲ್ಲವೆಂದು ಶಿವಾಗಮವು ಹೇಳುತ್ತದೆ.

## ''ಗುರು'' ಶಬ್ದದ ಅರ್ಥ ವಿವರಣೆ

ಗುಣಾತೀತಂ ಗುವರ್ಣಂಚ ರೂಪಾತೀತಂ ರುವರ್ಣಕಂ |
ಗುಣಾತೀತ ಮರೂಪಂಚ ಯೋದದ್ಯಾತ್ ಸದ್ಗುರುಸ್ಮೃತಃ ||೩||
(ಶಿದ್ಧಾಂತ ಶಿಖಾಮಣಿ)

''ಗುರು'' ಎಂಬ ಶಬ್ದದಲ್ಲಿರುವ ''ಗು''ಎಂಬ ಅಕ್ಷರವು ಪ್ರಾಕೃತ ಗುಣ ರಾಹಿತ್ಯವನ್ನೂ, ''ರು''ಎಂಬ ಅಕ್ಷರವು ಪ್ರಾಕೃತಿಕ ರೂಪರಾಹಿತ್ಯವನ್ನೂ ಬೋಧಿಸುತ್ತದೆ. ಇಂತಹ ಪ್ರಾಕೃತ ಗುಣಾತೀತವೂ, ಪ್ರಾಕೃತ ರೂಪಾತೀತವೂ ಆದ ಆ ಪರಶಿವಬ್ರಹ್ಮಸ್ವರೂಪವನ್ನು ಯಾವನು ಅನುಗ್ರಹಿಸುವನೋ ಅವನೇ ಸದ್ಗುರುವೆಂದು ಹೇಳಿಸಿಕೊಳ್ಳುತ್ತಾನೆಂದು ಶಿದ್ಧಾಂತ ಶಿಖಾಮಣಿಯಲ್ಲಿ ಉಲ್ಲೇಖಿಸಿದೆ. ಇನ್ನು ಆಗಮದಲ್ಲಿ ಗುರು ಶಬ್ದದ ಅರ್ಥವನ್ನು ಹೀಗೆ ಮಾಡಲಾಗಿದೆ:-

ಗು ಶಬ್ದ ಸ್ತ್ವಂಧಕಾರಃಸ್ಯಾದ್ರು ಶಬ್ದಸ್ತನ್ನಿರೋಧಕಃ |
ಅಂಧಕಾರ ನಿರೋಧೇನ ಗುರುರುತ್ಯಾಭೀ ದೀಯತೇ ||೪||

''ಗುರು''ಎಂಬ ಶಬ್ದದಲ್ಲಿಯ ''ಗು''ಅಕ್ಷರಾರ್ಥವು ಅಂಧಕಾರ(ಅಜ್ಞಾನ) ವನ್ನು ಸೂಚಿಸುತ್ತದೆ. ''ರ''ಎಂಬ ಅಕ್ಷರವು ಅಂಧಕಾರವನ್ನು ತಡೆಗಟ್ಟುವದು.

ಅಂದರೆ .ಅಜ್ಞಾನವನ್ನು ನಾಶಮಾಡುವದೆಂಬ ಅರ್ಥವನ್ನೂ ಸೂಚಿಸುತ್ತದೆ. ಭಕ್ತನ ಅಜ್ಞಾನವನ್ನು ನಾಶಮಾಡಿ ಆತನಿಗೆ ಶುಜ್ಞಾನವನ್ನುಂಟು ಮಾಡುವದೇ ಶ್ರೀ ಗುರುವಿನ ಮುಖ್ಯ ಲಕ್ಷಣವೆಂದು ಆಗಮದಲ್ಲಿ ಉಲ್ಲೇಖಿಸಲಾಗಿದೆ.

## ಗುರುವೇ ಸರ್ವ ಕಾರ್ಯಗಳಿಗೆ ಕಾರಣನು.

ಗುರುಣಾದೀಯತೇ ಲಿಂಗಂ ಗುರುಣಾದೀಯತೇ ಕ್ರಿಯಾ |
ಗುಗುಣಾದೀಯತೇ ಮಂತ್ರಂ ಸದ್ಗುರುಃ ಸರ್ವ ಕಾರಣಂ || ೫ ||
ಧ್ಯಾನ ಮೂಲಂ ಗುರೋರ್ಮೂರ್ತಿಃ ಪೂಜಾ ಮೂಲಂ ಗೋರೋಃಪದಂ |
ಮಂತ್ರ ಮೂಲಂ ಗುರೋರ್ವಾಕ್ಯಂ ಮುಕ್ತಿಮೂಲಂ ಗುರೋಃಕೃಪಾ ||೬||

ಎಂಬಂತೆ ಸದ್ಗುರುವೇ ಸರ್ವಶ್ರೇಷ್ಠವಾಗಿರುವನು. ಗುರುವಿನ ಉಪದೇಶ ಲಿಂಗದಲೇ ಸತ್ಕ್ರಿಯಾ (ಒಳ್ಳೇ ಕೆಲಸ) ಸಂಪನ್ನನಾಗುವನು ಗುರುವಿನಿಂದಲೇ ಇಷ್ಟಲಿಂಗಪ್ರಾಪ್ತಿಯಾಗುವದು ಗುರುವಿನಿಂದಲೇ ಮಂತ್ರೋಪದೇಶವಾಗುವದು. ಧ್ಯಾನ, ಜಪ, ತಪಾದಿಗಳಿಗೂ ಹಾಗೂ ಪೂಜಾದಿ ಕ್ರಿಯೆಗಳಿಗೂ ಶ್ರೀ ಗುರುವೇ ಕಾರಣನಾಗಿರುವನು ಮತ್ತು ಗುರು ಕೃಪೆಯೇ ಮುಕ್ತಿಗೆ ಮೂಲವಾಗಿರುವದು. ಆದರೆ—

ಇಲ್ಲಿ "ಸದ್ಗುರುಃ ಸರ್ವಕಾರಣಂ"ಎಂಬ ಉಪರೋಕ್ತ ಆಗಮ ಶ್ಲೋಕದಲ್ಲಿ ಪ್ರಯೋಗ ಮಾಡಲ್ಪಟ್ಟಿದ್ದರಿಂದ ಸದ್ಗುರು ಅಂದರೆ ಯಾರು ಎಂಬ ಪ್ರಶ್ನೆಯೊಂದು ಉದ್ಭೂತವಾಗುವದು. ಇದಕ್ಕೆ ವೀರಾಗಮದಲ್ಲಿ ಸದ್ಗುರುವಿನ ಲಕ್ಷಣವನ್ನು ಹೀಗೆ ಹೇಳಲಾಗಿದೆ.

ಪಾಪಭೀರುಂ ಮಹಾಶಾಂತಂ ಲೋಕ ವಂದ್ಯಂ ವಿಚಕ್ಷಣಮ್ |
ವ್ಯಾಪಾರ ರಹಿತಂ ಶುದ್ಧಂ ಶಾಶ್ವತಂ ಶಿವದೀಕ್ಷಿತಮ್ || ೭ ||
ಸರ್ವಾಚಾರ ಸಂಪನ್ನಃ ಪೂಜ್ಯೋ ವಸತಿಪೂತದಃ |
ನಿಮ್ಮತೋ ನಿಷ್ಪ್ರಪಂಚೋಽಯಮಿತಿ ಶ್ರೀಗುರು ಲಕ್ಷಣಮ್ || ೮ ||

ಅಂದರೆ ಯಾವ ಗುರುವು ಪಾಪಕ್ಕೆ ಅಂಜುವನೋ, ಅತ್ಯಂತ ಶಾಂತನಾಗಿ ರುವನೋ, ಸಮಸ್ತ ಪ್ರಾಣಿಗಳಿಂದ ವಂದಿಸಿಕೊಳ್ಳುವನೋ; ಕಪಟವಿಲ್ಲದೆ ವಿವೇಕವುಳ್ಳವನೋ. ಶಿವದೀಕ್ಷೆಯಿಂದ ಪುನೀತನಾಗಿರುವನೋ, ಎಲ್ಲಾ ಸದಾ ಚಾರಗಳಿಂದ ಪರಿಪೂರ್ಣನಾಗಿರುವನೋ ಮತ್ತು ಪಾವನನಾಗಿದ್ದು ಪೂಜ್ಯನಾ ಗಿರುವನೋ, ಆಣವಾದಿ ಮಲತ್ರಯ ರಹಿತನಾಗಿ ನಿಷ್ಪ್ರಹ ಪ್ರಪಂಚಕನಾಗಿ ರುವನೋ, ಮಂತ್ರ ಶಾಸ್ತ್ರಗಳಿಂದ ನಿತ್ಯಾನಿರ್ಮಲವಾಗಿರುವನೋ ಅಂಥವನೇ

ಸದ್ಗುರುವೆಂದು ಹೇಳಿಸಿಕೊಳ್ಳುತ್ತಾನೆ. ಇದನ್ನೇ ಸಂಕ್ಷೇಪವಾಗಿ ಹೇಳಬೇಕಂದರೆ, ಯಾವ ಗುರುವು ಅಷ್ಟಾವರಣಗಳನ್ನೇ ತನ್ನ ಅಂಗವನ್ನಾಗಿಯೂ ಪಂಚಾಚಾರವನ್ನೇ ಪ್ರಾಣವನ್ನಾಗಿಯೂ ಮಾಡಿಕೊಂಡು ಷಟ್‌ಸ್ಥಲ ಮಾರ್ಗದಲ್ಲಿ ನಡೆದು ಲಿಂಗಾಂಗ ಸಾಮರಸ್ಯವನ್ನು ಹೊಂದಿ ವಿಧಿಯುಕ್ತವಾದ ಗುರು ಸಂಸ್ಕಾರವನ್ನು ಪಡೆಯುವನೋ ಅವನೇ ವೀರಶೈವ ಸದ್ಗುರುವೆಂದು ಹೇಳಿಸಿಕೊಳ್ಳುವನು ಇಂತಹ ಸದ್ಗುರುವಿನಿಂದಲೇ ಈ ಮಾಯಾಪ್ರಪಂಚದ ಕರ್ಮಪಾಶವೂ ಈ ಭವಬಂಧನ ಪಾಶವೂ, ಬಿಡುಗಡೆಯಾಗಿ; ಕಾಮ-ಕ್ರೋಧ ಮೊದಲಾದ ಅರಿಷಡ್ವರ್ಗಗಳು ಸಹ ಲಯವಾಗಿ ಅಜ್ಞಾನವೆಂಬ ಕತ್ತಲೆಯು ದೂರಾಗಿ ಶಿವಜ್ಞಾನವೆಂಬ ಸುಜ್ಞಾನವುಂಟಾಗಿ ಸನ್ಮಾರ್ಗಪಿಡಿದು, ಮೋಕ್ಷ ಪದವಿಯನ್ನು ಪಡೆಯುವದು.

ಗುರುವು ತನ್ನ ವಿನೋದಕ್ಕೆ ಸ್ಥಾವರವಾದ
ಗುರುವು ತನ್ನ ವಿನೋದಕ್ಕೆ ಲಿಂಗವಾದ
ಗರುವು ತನ್ನ ವಿನೋದಕ್ಕೆ ಜಂಗಮವಾದ
ಗುರುವು ತನ್ನ ವಿನೋದಕ್ಕೆ ಪ್ರಸಾದವಾದ
ಗುರುವು ತನ್ನ ವಿನೋದಕ್ಕೆ ಗುರುವಾದ
ಕೂಡಲ ಸಂಗಯ್ಯನಲ್ಲಿ ಏಕಾರ್ಥವಾದ ಗುರುವು.

ಹೀಗೆ ಗುರು ಮಹಿಮೆಯನ್ನು ಶ್ರೀ ಬಸವಣ್ಣನವರು ನುಡಿದಿದ್ದಾರೆ.

ಗುರುಭಕ್ತಿ ವಿಹೀನಸ್ಯ ಶಿವಭಕ್ತಿರ್ನಜಾಯತೇ ।
ತತ್ ಶಿವೋಯಥಾ ಭಕ್ತಿಸ್ತಥಾ ಭಕ್ತಿರ್ಗುರವಾಪಿ ॥ ೯ ॥
ವಿನಸ್ಯತ್ಯಂಧಕಾರಸ್ತು ಯಥಾ ಸೂರ್ಯಸ್ಯಸನ್ನಿಧೌ ।
ಗುರೋರ್ನಿರೀಕ್ಷಣಾ ದೇವಸರ್ವ ಪಾಪೈಃ ಪ್ರಮುಚ್ಯತೇ ॥ ೧೦ ॥

ಎಂದು ಆಗಮೋಕ್ತಿಯಂತೆ ಹಾಗೂ "ಶಿವಪಥವನರಿಯಲು ಗುರುಪಥವೇ ಮೊದಲು" ಎಂಬ ಶ್ರೀ ಬಸವಣ್ಣನವರ ವಚನದಂತೆ ಗುರುಭಕ್ತಿಯಿಲ್ಲದೆ ಶಿವಭಕ್ತಿ ದೊರೆಯಲಾರದು ಶ್ರೀ ಗುರುವೇ ಮೋಕ್ಷ ಮಾರ್ಗದರ್ಶಕವಾಗಿರುವದರಿಂದ ಶಿವನಲ್ಲಿದ್ದಂತೆ ಶ್ರೀ ಗುರುವಿನಲ್ಲಿಯೂ ಭಕ್ತಿಯನ್ನಿಡಬೇಕು. ಅಂದರೆ ಸೂರ್ಯ ಪ್ರಕಾಶದಿಂದ ಹೇಗೆ ಕತ್ತಲೆಯು ನಾಶವಾಗುವದೋ ಹಾಗೆ ಶ್ರೀ ಗುರುವಿನ ಕೃಪಾ ಕಟಾಕ್ಷಮಾತ್ರದಿಂದಲೇ ಸರ್ವ ಪಾಪಗಳು ನಾಶವಾಗಿ ಮುಕ್ತಿ ಲಭಿಸುವದೆಂದು ಶಿವಧರ್ಮವು ಬೋಧಿಸುತ್ತದೆ. ಗುರುವು ಕರ್ತವ್ಯ ಭೇದದಿಂದ ದೀಕ್ಷಾಗುರು, ಶಿಕ್ಷಾಗುರು, ಮೋಕ್ಷಗುರುವು ಎಂದು ಮೂರು ಪ್ರಕಾರವಾಗಿ ವಿಭಾಗಿಸಲ್ಪಟ್ಟಿದೆ. ಆದರೆ ಗುರುತ್ವವು ಒಂದೇ ಆಗಿದ್ದು ಭೇಧವಿಲ್ಲದೆ, ನಿತ್ಯವೂ, ವ್ಯಾಪ

ಕವೂ ಆಗಿರುವದು. ಗುರುವಿನಂತೆ ಜ್ಞಾನಜ್ಯೋತಿಯು ಶಿಷ್ಯನಲ್ಲಿ ಒಡಮೂಡಿದಾಗ ಲಿಂಗಾಂಗ ಸಾಮರಸ್ಯದ ತತ್ವವನ್ನು ಅನುಭವಿಸುವದೇ ಅಂತರ ಗುರುತ್ವವಾಗಿದೆ.

ಜ್ಞಾನಹೀನ ಗುರೂ ವಾಸ್ತಿಃ ಶಿಷ್ಯ ಜ್ಞಾನೇನ ಸಿದ್ಧ್ಯತಿ|
ಮೂಲಚ್ಛಿನ್ನೋಯಥಾ ವೃಕ್ಷಃ ಕಥಂ ಪುಷ್ಪ ಫಲೈರ್ಯುತಃ||

ಎಂಬುಕ್ತಿಯಂತೆ ಒಂದು ವೇಳೆ ಶ್ರೀ ಗುರುವಿನಲ್ಲಿ "ಗುರುತ್ವವೇ" ಇರದಿದ್ದರೆ ಅಂಥ ಗುರುವಿನಿಂದ ಶಿಷ್ಯನಿಗೆ ಹೇಗೆ ಜ್ಞಾನವುಂಟಾಗಬೇಕು? ಯಾವ ಗಿಡದ ಬೊಡ್ಡೆಯನ್ನೇ ಕಡಿದ ನಂತರ ಅದರಿಂದ ಫಲಪುಷ್ಪಾದಿಗಳು ಹೇಗೆ ಪ್ರಾಪ್ತವಾಗಬೇಕು? ಇದರಂತೆ ಆಧುನಿಕ ಕಾಲದಲ್ಲಿ ಕಂಡಕಂಡವರಿಗೆ ಗುರುಗಳೆಂದು ನಂಬದೆ ಅವರ ಅಂತರಂಗವನ್ನೂ ಅವರ ಬಾಹ್ಯ ಕೃತಿಗಳನ್ನು ನೋಡಿ ಪರೀಕ್ಷಿಸದೆ, ಗುರುತ್ವವನ್ನು ಕಾಯ್ದುಕೊಳ್ಳದೆ ಕೇವಲ ಆಡಂಬರಯುಕ್ತವಾದ ಗುರುವಿನಿಂದ ಉಪದೇಶ ಹೊಂದಿದ್ದಾದರೆ ಮುಕ್ತಿಯು ಎಲ್ಲಿರುವದೆಂದು ಸರ್ವಜ್ಞಮೂರ್ತಿಯು ನುಡಿದಿದ್ದಾನೆ:—

ಬಳ್ಳಿ ಕುರುಡರು ಕೂಡಿ| ಹಳ್ಳವನು ಬಿದ್ದಂತೆ|
ಒಳ್ಳೆಯ ಗುರುವಿನುಪದೇಶವಿಲ್ಲದಿರೆ|
ಎಲ್ಲಿಹುದು ಮುಕ್ತಿ ಸರ್ವಜ್ಞ||

ಇನ್ನು ಭಕ್ತನೂ ಸಹ ಗುರುದ್ರೋಹಿಯಾಗಬಾರದೆಂದು ಶಿವ ರಹಸ್ಯವು ಹೇಳಿದೆ:—

ಆಜ್ಞಾಭಂಗಾರ್ಥ ಹರಣಂ ಗುರೋರಪ್ರಿಯ ವರ್ತನಮ್|
ಗುರುದ್ರೋಹಮಿತಿ ಪ್ರೋಕ್ತಂ ತತ್ಸಂಸರ್ಗಂ ಪರಿತ್ಯಜೇತ್||

ಗುರುವಿನ ಆಜ್ಞೆಯನ್ನು ಮೀರುವದು ಗುರುವಿನ ಧನವನ್ನು ಅಪಹರಿಸುವದು ಗುರುವಿಗೆ ಅಪಹಾಸ್ಯ ಹಾಗೂ ನಿಂದೆಯನ್ನು ಮಾಡುವದು ಇವು ಗುರುದ್ರೋಹವೆನಿಸುವವು. ಆದ್ದರಿಂದ ಭಕ್ತನೂ ಗುರುದ್ರೋಹಿಯಾಗಬಾರದು. ಒಂದು ವೇಳೆ ಗುರುದ್ರೋಹಿಯಾದರೆ ಗುರುಕೃಪೆಯಾಗದೆಂದು ಶಿವರಹಸ್ಯವು ಬೋಧಿಸುತ್ತದೆ

## ಎರಡನೇ ಆವರಣವಾದ ಲಿಂಗ ಮಹಿಮೆ ವಿಚಾರ

ಲೀಯತೇಲಯ ಸಂಪ್ರೋಕ್ತಃ ಗಕಾರಃ ಸೃಷ್ಟಿರುಚ್ಯತೇ|
ಲಯನಾದ್ಗಮನಾ ಚ್ಚೈವ ಲಿಂಗ ಶಬ್ದಮ ಹೋಚ್ಯತೇ ||೧||
(ಜ್ಞಾನಕಾಂಡ)

ಲೀಯತೇ ಗಮ್ಯತೇ ಯತ್ರ ಯೇನ ಸರ್ವಂಚರಾ ಚರಂ।
ತದೇಲ್ಲಿಂಗ ಮಿತ್ಯಾ ಹುರ್ಲಿಂಗ ತತ್ವಪರಾಯಣಾಃ ॥೭॥
(ಸ್ಕಂದಪುರಾಣ)

ಲೀನಂ ಪ್ರಪಂಚರೂಪಂ ಹಿ ಸರ್ವಮೇತ ಚ್ಚರಾಚರಂ।
ಸರ್ಗಾಣಗಮ್ಯತೇ ಭೂಯಸ್ತಸ್ಮಾಲ್ಲಿಂಗ ಮುದೀರಿತಂ ॥೩॥
(ಸೂಕ್ಷ್ಮಾಗಮ)

ಅಷ್ಟಾವರಣಗಳಲ್ಲಿ ಲಿಂಗಮಹಿಮೆಯು ಎರಡನೆಯದಾಗಿದೆ. ಶ್ರೀಗುರು ಶಬ್ದದಂತೆ "ಲಿಂಗ" ಶಬ್ದದ ಅರ್ಥವೂ ಬಹು ವ್ಯಾಪಕವಾಗಿತೆ. "ಲಿಂಗ" ಈ ಶಬ್ದದಲ್ಲಿಯ "ಲಿ" ಎಂಬ ಅಕ್ಷರಾರ್ಥವು ಲಯಸೂಚಕವಾಗಿದೆ. "ಗ" ಎಂಬ ಅಕ್ಷರಾರ್ಥವು ಸೃಷ್ಟಿಸೂಚಕವಾಗಿದೆ. ಲಯ ಉತ್ಪತ್ತಿಯೇ ಲಿಂಗವೆಂದೆನಿಸುವದು ಅಂದರೆ ಈ ಸಕಲ ಚರಾಚರಾತ್ಮಕವಾದ ಜಗತ್ತು ಲಯ (ಪ್ರಳಯ) ಕಾಲದಲ್ಲಿ ಯಾವುದರಲ್ಲಿ ಲೀನವಾಗುವದೋ, ಹಾಗೂ ಸೃಷ್ಟಿಯ ಆದಿಯಲ್ಲಿ ಯಾವುದರಿಂದ ಉತ್ಪತ್ತಿ ಸ್ಥಿತಿಗಳನ್ನು ಅಂದರೆ ಗತಿಯನ್ನು ಪಡೆಯುವದೋ ಅದೇ ಲಿಂಗವೆಂದು ಹೇಳಿಸಿಕೊಳ್ಳುತ್ತದೆ. ಈ ಸಕಲ ಚರಾಚರಾತ್ಮಕವಾದ ವಿಶ್ವವೇ ಲಿಂಗಸ್ವರೂಪವಾಗಿದೆಂದು ಶಿವರಹಸ್ಯವು ಬೋಧಿಸುತ್ತದೆ. ಹೇಗೆಂದರೆ ಲಿಂಗಪ್ರದಪೀಠವೇ ಶಕ್ತಿ ಎನಿಸುವದು. ಆ ಪರಶಿವನೇ ಲಿಂಗವೆನಿಸುವನು. ಶಿವ ಹಾಗೂ ಶಕ್ತಿ ಇವರ ಸಂಬಂಧವುಳ್ಳ ಆ ಲಿಂಗವು ವಿಶ್ವವೆನಿಸುವದು. ಅರ್ಥಾತ್ ಜಗತ್ತು ಲಿಂಗರೂಪವಾಗಿದೆಯೆಂದು ಸಿದ್ಧಾಂತ ಶಿಖಾಮಣಿ, ಶ್ವೇತಾಶ್ವರ ಶೃತಿ ಮತ್ತು ಶಿವಾಗಮಗಳು ಬೋಧಿಸುತ್ತವೆ ಇಂಥ ವಿಶ್ವರೂಪವಾದ ಲಿಂಗವನ್ನು ವೀರಶೈವನು ಸದಾ ತನ್ನ ದೇಹವೆಂಬ ದೇವಾಲಯದಲ್ಲಿ ಸ್ಥಾಪಿಸಿಕೊಂಡು ಪೂಜಿಸಬೇಕೆಂದು ವೇದಗಳು ಹೇಳುತ್ತವೆ. ಮತ್ತು "ಲಿಂಗಾಂಗ ಸಂಗಿನೋವತ್ಸ ಪುನರ್ಜನ್ಮನ ವಿದ್ಯತೇ" ಎಂಬಂತೆ ಶ್ರೀಗುರುವಿನಿಂದ ಕೊಡಲ್ಪಟ್ಟ ಲಿಂಗಧಾರಣ ಸಂಪನ್ನನಾದ ಶುದ್ಧ ಸದ್ಭಕ್ತನಿಗೆ ಪುನರ್ಜನ್ಮವೂ ಕೂಡಾ ಉಂಟಾಗಲಾರದೆಂದು ಆಗಮಗಳು ಬೋಧಿಸುತ್ತವೆ.

## ಲಿಂಗಧಾರಣ—ಅತ್ಯಾಗತ್ಯ.

ವೀರಶೈವನಿಗೆ ಲಿಂಗಧಾರಣವಾಗಲೇಬೇಕೆಂದು ಋಗ್ವೇದಗಲ್ಲಿ ಉಲ್ಲೇಖಿಸಲಾಗಿದೆ:—

"ಪವಿತ್ರಂತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ।
ಪರ್ಯೇಷಿ ವಿಶ್ವತಃ ಅತಪ್ತತನೂರ್ನ ತದಾಮೋ ಅಶ್ನುತೇ ॥"

ಮತ್ತು ಯಜುರ್ವೇದದಲ್ಲಿಯೂ ಲಿಂಗಧಾರಿಯಾಗಬೇಕೆಂದು ಪ್ರಮಾಣವದೆ:—

"ಯಾತೇ ರುದ್ರಶಿವಾತನೂರಘೋರಾऽ ಪಾಪಕಶಿನೀ |
ತಯಾ ನಸ್ತಾನುವಾಶಂತಮಯಾ ಗಿರಿಶಂತಾಭಿಚಾಕಶೀಹಿ ||"

ಹೀಗೆ ಋಗ್ವೇದ ಯಜುರ್ವೇದಗಳೆರಡೂ ಲಿಂಗಧಾರಣವಾಗಲೇಬೇಕೆಂದು ಬೋಧಿಸುತ್ತವೆ.

## ಲಿಂಗವು ಮೂರು ವಿಧವಾಗಿದೆ.

ಲಿಂಗಂತು ತ್ರಿವಿಧಂ ಪ್ರೋಕ್ತಂ ಸ್ಥೂಲಂ ಸೂಕ್ಷ್ಮಂ ಪರಾತ್ಪರಂ |
ಇಷ್ಟಲಿಂಗಮಿದಂ ಸ್ಥೂಲಂ ಯದ್ಬಾಹ್ಯೇಧಾರ್ಯತೇತನೌ ||

(ಶಿದ್ಧಾಂತ ಶಿಖಾಮಣಿ)

ಲಿಂಗವು. (೧) ಸ್ಥೂಲ (ಇಷ್ಟಲಿಂಗ), (೨) ಸೂಕ್ಷ್ಮ (ಪ್ರಾಣಲಿಂಗ) (೩) ಪರಾತ್ಪರ (ಭಾವಲಿಂಗ) ಎಂಬ ಭೇದದಿಂದ ಮೂರು ಪ್ರಕಾರವಾಗಿರುತ್ತದೆ. ಹೊರಗಿನ ಶರೀರದ ಮೇಲೆ ಧರಿಸಲ್ಪಡುವ ಲಿಂಗವೇ "ಇಷ್ಟಲಿಂಗವೆಂದು ಹೇಳಿಸಿಕೊಳ್ಳುತ್ತದೆ. ೨) ಹೃದಯಕಮಲದಲ್ಲಿ ಭಾವನಾರೂಪವಾಗಿ ಧ್ಯಾನಿಸಲ್ಪಡುವ ಸೂಕ್ಷ್ಮಲಿಂಗವು "ಪ್ರಾಣಲಿಂಗ" ವೆನಿಸುವದು. ೩) ಭಾವಾತೀತವಾಗಿಯೂ ಬಾಹ್ಯೇಂದ್ರಿಯಗಳಿಗೆ ಗೋಚರವಾಗದಂತೆಯೂ, ಪರಶಿವನಾಮವುಳ್ಳ ಪರಾತ್ಪರ ಲಿಂಗವು ಭಾವಲಿಂಗ"ವೆನಿಸುವದು. ಇದರಲ್ಲಿ ಮೊದಲನೆಯದಾದ ಇಷ್ಟಲಿಂವೆಗೇ ಭಕ್ತರ-ಭವವನ್ನೂ, ಅನಿಷ್ಟವನ್ನೂ ಪರಿಹರಿಸಿ, ಅವರ ಇಷ್ಟಾರ್ಥವನ್ನು ಕೊಡುವದರಿಂದಲೇ ಇದಕ್ಕೆ ಇಷ್ಟಲಿಂಗವೆಂಬ ಹೆಸರು. ಈ ಇಷ್ಟಲಿಂಗ ಸ್ವರೂಪವೇ ಸಚ್ಚಿದಾನಂದ ಮಯವಾಗಿದೆ. ಈ ಇಷ್ಟಲಿಂಗವನ್ನು ನಾಭಿಯ ಕೆಳಗೆ ಧರಿಸಬಾರದು. ಅದು ಪಾತಕವೆನಿಸುವದು. ಆಧುನಿಕ ಬಹುಜನರು ನಾಭಿಯ ಕೆಳಗೆ ಲಿಂಗ ಧರಿಸುವರು. ಕಾರಣ ಈ ಪದ್ಧತಿಯನ್ನು ತ್ಯಾಜ್ಯ ಮಾಡಬೇಕು.

## ತ್ರಿವಿಧ ಲಿಂಗಾರ್ಚನೆಯ ಕ್ರಮ.

೧) ಇಷ್ಟಲಿಂಗವನ್ನು ಅಂಗೈಯಲ್ಲಿಟ್ಟುಕೊಂಡು ಅಷ್ಟವಿಧಾರ್ಚನೆ, ಷೋಡಶೋಪಚಾರಗಳಿಂದ ಪೂಜಿಸಿ ದೃಷ್ಟಿಯನ್ನು ಚಲಿಸದಂತೆ ಸ್ಥಿರವಾಗಿಟ್ಟು ಲಿಂಗದಲ್ಲಿಯೇ ನೊಡುತ್ತ ತಲ್ಲೀನವಾಗಿ ಗುರೂಪದೇಶದಂತೆ ಪೂಜಿಸುವದೇ ಇಷ್ಟಲಿಂಗಾರ್ಚನೆ ಅಥವಾ ಉಪಾಸನೆಯೆಂದು ಹೇಳಲ್ಪಡುವದು. ಈ ಇಷ್ಟಲಿಂಗವು ದೃಷ್ಟಿಗ್ರಾಹ್ಯವಾಗಿರುವದು. ೨) ಆ ಇಷ್ಟಲಿಂಗವೇ ಪ್ರಾಣಸ್ವರೂಪವೆಂದು ತಿಳಿದು ಒಂದೇ ಮನಸ್ಸಿನಿಂದ ಧ್ಯಾನ ಮಾಡುವದೇ ಪ್ರಾಣಲಿಂಗಾರ್ಚನೆಯು. ಅಥವಾ ಉಪಾಸನೆಯೆಂದು ಹೇಳಲ್ಪಡುವದು. ಈ ಪ್ರಾಣಲಿಂಗವು ಮನೋಗ್ರಾಹ್ಯವಾಗಿರುವದು.

೩) ಆ ಇಷ್ಟಲಿಂಗವೇ ತನ್ಮಯತ್ವ ಅಂದರೆ ತನ್ನ ಸ್ವರೂಪವೆಂದು ಭಾವಿಸಿ ಆ ಇಷ್ಟಲಿಂಗದಲ್ಲಿಯೇ ಮನಸ್ಸನ್ನು ಲೀನಗೊಳಿಸುವದೇ ಭಾವಲಿಂಗಾರ್ಚನೆಯು ಅಥವಾ ಉಪಾಸನೆಯೆಂದು ಹೇಳಲ್ಪಡುವದು. ಈ ಭಾವಲಿಂಗವು ಭಾವಗ್ರಾಹ್ಯವಾಗಿರುವದು. ಇದರಲ್ಲಿ ಇಷ್ಟಲಿಂಗವು ಬಾಹ್ಯಲಿಂಗವೆಂದೂ, ಪ್ರಾಣಲಿಂಗ ಭಾವಲಿಂಗುಗಳು ಅಂತರಲಿಂಗವೆಂದೂ ಹೇಳಲ್ಪಡುತ್ತವೆ.

## ಅಂತರಶುದ್ಧಿಗೆ ಬಾಹ್ಯಕ್ರಿಯೆ ಅತ್ಯಾವಶ್ಯಕ.

ಘಟ ಮಧ್ಯ ಸ್ಥಿತಿಂತೋಯ ಮಗ್ನಿ ಜ್ವಲತಿ ಬಾಹ್ಯತಃ ।
ಅಗ್ನಿಜ್ವಲನ ಸಂಯೋಗ ಉಷ್ಣಂ ಭವತಿ ವಾರಿಣಾಮ್ ॥

ಅಂದರೆ ಕುಂಭದಲ್ಲಿದ್ದ ನೀರು ಹೊರಗಿನ ಅಗ್ನಿಯ ಜ್ವಲನ ಕ್ರಿಯೆಯಿಂದ ಆದರೊಳಗಿದ್ದ ನೀರಿನಲ್ಲಿ ಉಷ್ಣತೆಯುಂಟಾಗಿ, ನೀರು-ಅಗ್ನಿ ಇವು ಸಂಯೋಗವಾಗಿ ಒಂದೇ ರೂಪ ತಾಳುತ್ತವೆ. ಇದರಂತೆ ಅಂತರಲಿಂಗದಲ್ಲಿ ಜ್ಞಾನಕ್ರಿಯಾತ್ಮಕ ಅನುಭವವನ್ನು ಸಂಸ್ಕಾರ ರೂಪವಾಗಿ ಅಳವಡಿಸಿ ಶುದ್ಧೀಕರಿಸಬೇಕಾದರೆ ಬಹಿರಂಗದ ಕ್ರಿಯಯೇ ಪ್ರಾಮುಖ್ಯವಾಗಿರುವದು ಬಹಿರಂಗವಾಗಿ ಇಷ್ಟಲಿಂಗದಲ್ಲಿ ಆಚರಿಸುವ ಜ್ಞಾನಮಯವಾದ ಕ್ರಿಯೆಯಿಂದಲೇ ಅಂತರ ಲಿಂಗದ ಅನುಭವವುಂಟಾಗುವದು. ಆದ್ದರಿಂದ ಇಷ್ಟಲಿಂಗಕ್ಕೆ ಕ್ರಿಯಾಲಿಂಗವೆಂದು ಮತ್ತೊಂದು ಉಪನಾಮವಿದೆ. ಇಂಥ ಯಾವ ದಿವ್ಯಮಯವಾದ ಇಷ್ಟಲಿಂಗವನ್ನು ನಾಲ್ಕೂ ವೇದ ಬಲ್ಲವನಾದಾಗ್ಯೂ ಶಿವದೀಕ್ಷೆಯನ್ನು ಹೊಂದಿಯೇ ಶ್ರೀ ಗುರುವಿನಿಂದ ಲಿಂಗಧಾರಿಯಾಗಿ ಪೂಜಿಸಬೇಕೆಂದು ಶಿವರಹಸ್ಯವು ಬೋಧಿಸುತ್ತದೆ.

ಆಧುನಿಕ ಕಾಲದಲ್ಲಿ ಕೆಲವರು ಅಂತರಲಿಂಗ ಶುದ್ಧಿಯಿದ್ದರೆ ಸಾಕಾಗುವದು ಬಹಿರಂಗ ಲಿಂಗದ ಅವಶ್ಯಕತೆಯೇನಿದೆ? ಎಂದು ಪ್ರತಿಪಾದಿಸುತ್ತ ಲಿಂಗ ಧರಿಸಿಕೊಳ್ಳದೇ ಅಮಂಗಲವಾಗಿಯೇ ಇರುತ್ತಾರೆ. ಆದರೆ ಮೇಲಿನ ಶಾಸ್ತ್ರೀಯ ವಿವರಣೆಯ ಪ್ರಕಾರ ಬಾಹ್ಯಲಿಂಗ ಕ್ರಿಯೆ ಶುದ್ಧಿಯಿಲ್ಲದಲೇ ಅಂತರಂಗ ಲಿಂಗಕ್ರಿಯೆ ಹೇಗೆ ಶುದ್ಧಿಯಾಗುವದು? ಸಾಕ್ಷರನಾಗಲಿಕ್ಕೆ ಗುರುಶಿಕ್ಷಣವಿಲ್ಲದೇ ವಿಶಾಲವಾದ ಸಾಹಿತ್ಯಕ್ಷೇತ್ರದಲ್ಲಿ ಹೇಗೆ ಪ್ರವೇಶ ಲಭಿಸುವದು? ಒಂದು ವೇಳೆ ಸಾಕ್ಷರನಾಗದೇ ನಾನು ದೊಡ್ಡ ಸಾಹಿತಿ ಇದ್ದೇನೆಂದು ಹೇಳಿವರೆ ಪಂಡಿತರು ಹೇಗೆ ಒಪ್ಪುವರು? ಅಥವಾ ದೊಡ್ಡ ಸಾಹಿತಿಯಾಗಲು ಸಾಕ್ಷರತೆಯ ಅವಶ್ಯಕತೆಯಿರುವದಿಲ್ಲೆಂದು ಪ್ರತಿಪಾದಿಸಿದರೆ ಯಾವ ವಿದ್ವಜ್ಜನರು ಗೌರವಿಸಬಹುದು? ಬಾಹ್ಯಲಿಂಗ ಧರಿಸದೇ ಕ್ರಿಯಾ-ಜ್ಞಾನ ಶುದ್ಧಿ ಮಾಡಿಕೊಳ್ಳದೇ ಅಂತರಲಿಂಗ ಶುದ್ಧಿಯಾಗಿರುವದೆಂದೂ ಅದು ಕಾರಣ ಬಾಹ್ಯಲಿಂಗ ಧರಿಸುವದಿಲ್ಲೆಂದೂ ಹೇಳಿದರೆ ಯಾವ ವೀರಶೈವ ಧರ್ಮತತ್ವವೇತ್ತರು ನಂಬಿ ಮನ್ನಣೆ ಕೊಡಬಹುದು? ಹೀಗೆ ಪ್ರತಿಪಾದಿಸುತ್ತಿ

ರುವದು ಅನುಚಿತವೆಂದೂ ಆಡಂಬರವೆಂದೂ ಸಂದೇಹವಿಲ್ಲದೆ ತಿಳಕೊಳ್ಳ ಬಹುದು. ಆದರೆ ವೀರಶೈವ ಧರ್ಮ ತತ್ವ ಪ್ರಕಾರ ಲಿಂಗಧರಿಸಿ ಬಾಹ್ಯಕ್ರಿಯೆ ಜ್ಞಾನಶುದ್ಧಿ ಮೂಲಕ ಅಂತರಂಗ ಲಿಂಗಶುದ್ಧಿ ಮಾಡಿಕೊಂಡು ಶಿವಸಾಯುಜ್ಯ ಹೊಂದುವದೇ ಸರ್ವೋತ್ಕೃಷ್ಟವಾದ ಮಾರ್ಗವು.

ಶ್ರೀ ಗುರುವಿನಿಂದ ಕೊಡಲ್ಪಟ್ಟ ಇಷ್ಟ ಲಿಂಗವನ್ನು ಶಿಷ್ಯನು ಸದಾ ತನ್ನ ದೇಹದಲ್ಲಿ ಭಕ್ತಿಯಿಂದ ಧಾರಣ ಮಾಡಿಕೊಂಡಿರಬೇಕು. ಲಿಂಗವೇ ಪರಶಿವನ ಸ್ವರೂಪವೆಂದು ವೇದಾಗಮ ಪುರಾಣಗಳು ಸಾರುತ್ತವೆ. ಇಂಥ ಯಾವ ಶಿವನ ಸ್ವರೂಪವೆಂಬ ಲಿಂಗಮೂರ್ತಿಯನ್ನು ಶಿಷ್ಯನು ದೇಹದಲ್ಲಿ ಧರಿಸಿಕೊಂಡ ಬಳಿಕ ಒಂದು ನಿಮಿಷವೂ ಕೂಡಾ ಲಿಂಗವನ್ನು ಬಿಟ್ಟಿರಕೂಡದು ಒಂದು ವೇಳೆ ಅದು ಯಾವುದೇ ಜಲಾಶಯದಲ್ಲಿ ಬಿದ್ದರೆ ಅಥವಾ ಸುಟ್ಟರೆ ಪಂಚಾಕ್ಷರೀ ಮಂತ್ರವನ್ನು ೧೦೮ ಸಾರೆ ಜಪಿಸಿ ಶುದ್ಧೀಕರಣದಿಂದ ಪುನಃ ಲಿಂಗಧಾರಣ ಮಾಡಿಕೊಳ್ಳಬೇಕು. ಅಕಸ್ಮಾತ್ ದೇಹದಿಂದ ಅಗಲಿ ಹೋದರೆ ಮಾತ್ರ ತಕ್ಷಣ ಪ್ರಾಣವನ್ನು ಶಿವಾರ್ಪಣ ಮಾಡಬೇಕೆಂದು ಶಿವರಹಸ್ಯವು ಬೋಧಿಸುತ್ತದೆ. ಕಾರಣ ವೀರಶೈವ ನಾದವನು ನಿಷ್ಟಲಿಂಗದ ವಿಷಯವಾಗಿ ಬಹು ಲಕ್ಷಪೂರ್ವಕವಾಗಿರಬೇಕು.

"ತ್ರಿಕಾಲ ಮರ್ಚಯೇಲ್ಲಿಂಗ ಮೇಕಕಾಲೇತು ಭಾವಿತಂ" ಎಂಬಂತೆ ಉದಯಕಾಲ, ಮಧ್ಯಾನ್ಹಕಾಲ ಹಾಗೂ ಸೂರ್ಯಾಸ್ತ ಕಾಲದಲ್ಲಿ ತನ್ನ ದಿವ್ಯ ಮಯವಾದ ಇಷ್ಟ ಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರಗಳಿಂದ ಸದಾ ತ್ರಿಕಾಲದಲ್ಲಿಯೂ ಪೂಜೆಯನ್ನು ಮಾಡಬೇಕು. ಕೊನೆಗೆ ದ್ವಿಕಾಲದಲ್ಲಾದರೂ ಮಾಡಬೇಕು. ಕನಿಷ್ಟ ಪಕ್ಷ ಏಕಕಾಲ (ಉದಯಕಾಲ) ದಲ್ಲಾದರೂ ಮಾಡಬೇಕು.

"ಅರುಣೋದಯ ವೇಲಾಯಾಂ ರೆಗೋತಿ ಶಿವಪೂಜಾನಮಂ|
ಋಣತ್ರಯ ವಿನಿಮುರ್ಯಕ್ತಸ್ತಸ್ಯಾಂತೇ ಬ್ರಹ್ಮ ತತ್ವದವ್||

ಎಂಬಂತೆ ಸೂರ್ಯೋದಯಕಾಲದಲ್ಲಿ ಲಿಂಗವನ್ನು ಯಿಟ್ಟು ಪೂಜಿಸಿದರೆ ಹುಟ್ಟೇಳು ಜನ್ಮದ ಪಾಪವು ಹಿಂಗಿ ಶಿವಸಾಯುಜ್ಯ ಪದವಿಯನ್ನು ಹೊಂದುವೆ ನೆಂದು ಶಿವರಹಸ್ಯವು ಬೋಧಿಸುತ್ತದೆ. ಹಾಗೂ ಶಿವಪೂಜೆಯೇ ಮುಕ್ತಿಗೆ ಕಾರಣ ವೆಂದು ಶಿವಪೂಜೆಯ ಸಮಾನವಾಗಿ ತ್ರೈಲೋಕ್ಯದಲ್ಲಿ ಯಾವ ಪುಣ್ಯ ಇಲ್ಲವೆಂದು

ಪೂಜಾಯಾಂ ಭಕ್ತ್ರಿ ಮಾಪ್ನೋತಿ ಪೂಜಾಯಾ ಮುಕ್ತಿ ಮಾಪ್ನುಯಾತ್|
ಪೂಜಾಯಾ ಸದೃಶಂ ಪುಣ್ಯಂನಾಸ್ತಿ ಲೋಕತ್ರಯೇಷ್ವಪಿ|| ಎಂದು

ಲಿಂಗ ಪುರಾಣವು ಬೋಧಿಸುತ್ತದೆ. ಇನ್ನು ಸರ್ವಜ್ಞನು ಈ ವಿಷಯವಾಗಿ ಹೀಗೆ ಹೇಳಿದ್ದಾನೆ:—

ಶಿವಪೂಜೆ ಮಾಡಿದೊಡೆ। ಶಿವನ ಕೊಂಡಾಡಿದಡೆ।
ಶಿವನೊಳು ನೆನೆಹ ನೆರಿಸಿದಡೆ ಶಿವಲೋಕ।
ವವಗೆ ಕಾಣಯ್ಯ ಸರ್ವಜ್ಞ॥

ಎಂಬ ಸರ್ವಜ್ಞ ಮೂರ್ತಿಯ ವಚನದಂತೆ ಶಿವಲೋಕವು ದೊರೆಯ ಬೇಕಾದರೆ ಶಿವಪೂಜೆ ಶಿವಸ್ತುತಿ ಶಿವಭಜನೆ ಶಿವಭಕ್ತಿ ಸದಾ ಶಿವವನ ನಾವು ಸ್ಮರಣೆ ಮೊದಲಾದ ಸದ್ಭಾವನೆಯ ಆಚರಣೆಯುಳ್ಳವರಾಗಿರಬೇಕು.

## ಲಿಂಗಾರ್ಚನೆಯನ್ನು ಏಕಾಂತವಾಗಿ ಮಾಡಬೇಕು

ಸದ್ಭಕ್ತರು ಲಿಂಗಾರ್ಚನೆಯ ಮಾಡುವ ಕಾಲದಲ್ಲಿ ಕದವಂ ಮುಚ್ಚಿ ಸಮಾಧಾನದಲ್ಲಿ ಲಿಂಗಾರ್ಚನೆಯ ಮಾಡುವದು. ಅಥವಾ ಗುಪ್ತವಾಗಿ ಶಿವಪೂಜೆ ಮಾಡಬೇಕಾದಲ್ಲಿ ತೆರೆಯ ಕಟ್ಟುವದು. ಶಿವ ಪೂಜೆಯ ಕಾಲದಲ್ಲಿ ಪಾಪಿಯು ಕೋಪಿಯು, ಶಿವಾಚಾರ ಭ್ರಷ್ಟನು, ಅಲಿಂಗಿಗಳು, ಅನಾಚಾರಿಯು,ಮೂರ್ಖನು ಗುರುನಿಂದಕನು ಇಂಥವರುಗಳನ್ನು ಕಾಣಬಾರದು. ಒಂದುವೇಳೆ ಕಂಡರೆ ತಾ ಮಾಡಿದ ಲಿಂಗಾರ್ಚನೆಯು ನಿಷ್ಫಲವಾಗುವದು. ಇದನ್ನರಿತು ಸಕಲೇಶ್ವರನಾದ ಲಿಂಗಮೂರ್ತಿಗೆ ಏಕಾಂತದಲ್ಲಿ ಏಕಮನಸ್ಸಿನಿಂದ ಪೂಜಿಸುವ ಭಜಿಸುವ ಭಕ್ತನಿಗೆ ಶಿವನು ಓ ಎಂದು ಅನ್ನದಿರನು.

## ಸ್ಥಾವರ ಲಿಂಗಪೂಜಾ ಮಾಡಬಾರದು

ಗುರುಕಟ್ಟಿದ ಲಿಂಗವ ಬಿಟ್ಟು ಬೆಟ್ಟದಲ್ಲಿದ್ದ ಲಿಂಗಪೂಜೆ ಮಾಡಬಾರದೆಂದು ಶ್ರೀ ಬಸವಣ್ಣನವರೂ ಹೇಳಿರುವರಲ್ಲದೆ, ಶ್ರೀ ಗುಹೇಶ್ವರನೂ ಹೀಗೆ ಹೇಳಿದ್ದಾನೆ-

ಅಂಗದ ಮೇಲಣ ಲಿಂಗವಹಿಂಗಿ।
ಸ್ಥಾವರ ಲಿಂಗಕ್ಕೆರಗುವ ಈ ಭಂಗಿತರ ಮುಖವ ನೋಡಲಾಗದು।
ಅದೆಂತೆಂದಡೆ ತನ್ನ ಗಂಡನ ಬಿಟ್ಟು ಅನ್ಯಗಂಡರಿಗೆರಗುವ।
ಹಾದರಗಿತ್ತಿಯಂತೆ ಅವಂದಿರ ಭಕ್ತಿ।
ಅಂತಪ್ಪ ಪಂಚ ಮಹಾಪಾತಕರ ಮುಖದತ್ತ ತೋರದಿರು ಗುಹೇಶ್ವರಾ॥

ಕೆಲವರು ಆಡಂಬರಕ್ಕೆ ಲಿಂಗವನ್ನು ಕಟ್ಟಿಕೊಂಡು ಹೆಸರಿಗೆ ಮಾತ್ರ ಲಿಂಗ ಧಾರಿಯೆನಿಸಿ, ಇಷ್ಟ ಲಿಂಗದ ಹೊರತಾಗಿ ಇಷ್ಟಲಿಂಗದ ಮಹಿಮೆಯನರಿಯದೆ ಸ್ಥಾವರ ದೇವಾಲಯಗಳಿಗೆ ಹೋಗಿ ಉದ್ದ-ಅಡ್ಡ ಬಿದ್ದು ತಮ್ಮ ಕೊರಳಲ್ಲಿಯ ಲಿಂಗಮೂರ್ತಿಯನ್ನು ಸಹ ನೆಲದ ಮೇಲೆ ಕೆಡವುಹರು. ಇದು ಕೇವಲ ಅಧರ್ಮದ ಕಾರ್ಯವುಇಂಥ ಕಾರ್ಯವನ್ನು ಮಾಡಬಾರದು.

ಮತ್ತೆ ಕೆಲವರು ಹೆಸರಿಗೆ ವೀರಶೈವರಾಗಿ ನಾಗಪ್ಪ ಹನುಮಪ್ಪ ಭರಮಪ್ಪ ಯಲ್ಲವ್ವ ದುರಗವ್ವ ದ್ಯಾಮವ್ವ ಮುಂತಾದ ಅನೇಕ ಸ್ಥಾವರ ಮೂರ್ತಿಗಳಿಗೆ ಪೂಜಿಸಿ ಹರಿಕೆ ಹೊತ್ತು ತಮ್ಮ ದಿವ್ಯ ಶಿವಾಚಾರವನ್ನು ಬಿಟ್ಟು. ಅನ್ಯ ದೇವರಿಗೆ ನಡೆದುಕೊಂಡರೆ, ತಮ್ಮ ಅವರೌಲ್ಯವೇಳೆಯೂ ನಿರರ್ಥಕವಾಗುವದಲ್ಲದೇ ಅಂಥ ವರಿಗೆ ನರಕವು ತಪ್ಪಲಾರದು.

ಲಿಂಗವೊಂದೇ ನಾಮಂಗಳು ಬೇಕಾಗಿಹವಯ್ಯಾ
ಪರಮ ಪತಿವ್ರತೆಗೆ ಗಂಡನೊಬ್ಬನೇ
ಮತ್ತೊಬ್ಬರ ಬಳಿಗೆ ಹೋದರೆ ತನ್ನ ಗಂಡ
ಕಿವಿ ಮೂಗು ಕೊಯ್ಯದೇ ಮಾಂಬನೇ?
ಹಲವು ಲಿಂಗಪ್ರಸಾದವ ಹಂಚಿಕೊಂಡು ತಿಂಬ
ಈ ಕುನ್ನಿ ಮಾನವರ ಕೂಗಿಡೆ, ಕೂಗಿಡೆ ನರಕದಲ್ಲಿಕ್ಕದೆ
ಮಾಂಬನೆ ನಮ್ಮ ಕೂಡಲಸಂಗಮದೇವರು।

ದೇವನೊಬ್ಬನಾಗಿ ನಾಮ ಹಲವುಗಳಿರುವವು. ಪರಮ ಪಾತಿವ್ರತೆಗೆ ಗಂಡನೊಬ್ಬನೇ ಎನ್ನುವ ಶ್ರೀ ಬಸವಣ್ಣನವರ ವಚನದ ತತ್ವವನರಿತು ಇಷ್ಟ ಲಿಂಗದ ಹೊರ್ತಾಗಿ ಅನ್ಯ ದೇವರನ್ನು ಎಂದೂ ಪೂಜಿಸಬಾರದು.

## ಇಷ್ಟಲಿಂಗದಲ್ಲಿಯೇ ಸರ್ವ ತೀರ್ಥಗಳಿವೆ

"ಇಷ್ಟಲಿಂಗಮ ವಿಶ್ವಸ್ಯ ತೀರ್ಥಲಿಂಗನು ವಸ್ತ್ರೃತಃ" ಎಂಬ ಶಿವ ಪುರಾಣೋಕ್ತಿಯಂತೆ ಇಷ್ಟಲಿಂಗದಲ್ಲಿ ಸರ್ವ ಪುಣ್ಯ ತೀರ್ಥಗಳಿವೆ. ಹೇಗೆಂದರೆ–

ಹಾಲ ಹಿಡಿದು ಬೆಣೆಯನರ ಸಲುಂಟೆ।
ಲಿಂಗವ ಹಿಡಿದು ಪುಣ್ಯತೀರ್ಥಕ್ಕೆ ಹೋಗಲುಂಟೇ।
ಲಿಂಗದ ಪಾದತೀರ್ಥ ಪ್ರಸಾದವ ಕೊಂಡು।
ಅನ್ಯಬೋಧೆ ಅನ್ಯಾಶಾಸ್ತ್ರಕ್ಕೆ ಹಾರೈಸಲೇತಕ್ಕೆ।
ಇಷ್ಟಲಿಂಗವಿದ್ದಂತೆ ಸ್ಥಾವರಲಿಂಗಕ್ಕೆ ಶರಣೆಂದಡೆ।
ತಪ್ಪದೇ ಹುಟ್ಟಿಸುವ ಶ್ವಾನಗರ್ಭದಲ್ಲಿ।
ಇದನರಿತು ಗುರುಕೊಟ್ಟ ಲಿಂಗದಲ್ಲಿಯೇ ಎಲ್ಲಾ ತೀರ್ಥಂಗಳು।
ಎಲ್ಲಾ ಕ್ಷೇತ್ರಗಳೂ ಇದ್ದಾವೆಂದು ಭಾವಿಸಿ ಮುಕ್ತರಪ್ಪದಯ್ಯ
ಇಂತಲ್ಲದೆ ಗುರುಕೊಟ್ಟ ಲಿಂಗ ಕಿರಿದು ಮಾಡಿ।
ತೀರ್ಥಲಿಂಗವ ಹಿರಿದು ಮಾಡಿ ಹೋದಾತಂಗೆ।
ಅಘೋರ ನರಕ ತಪ್ಪದು ಕಾಣಾ ಚನ್ನಮಲ್ಲಿಕಾರ್ಜುನಾ॥

ಎನ್ನುವಂತೆ ಇಷ್ಟಲಿಂಗವನ್ನು ಕಿರಿದು ಮಾಡಿ ತೀರ್ಥಲಿಂಗವ ಹಿರಿದು ಮಾಡಿ ಪೂಜಿಸಿದರೆ ಅಂಥ ಭಕ್ತನಿಗೆ ಅಘೋರ ನರಕ ತಪ್ಪದೆಂದು ವಚನಗಳು ಬೋಧಿಸುತ್ತವೆ.

ಬ್ರಹ್ಮ ವಿಷ್ಣು ಮೊದಲಾದ ದೇವತೆಗಳೂ ಸಹ ಲಿಂಗಾರ್ಚನೆಯನ್ನು ಮಾಡುತ್ತಾರೆ. ಇದರಂತೆ ಪೂರ್ವಜರಾದ-ದೂರ್ವಾಸ, ಉಪಮನ್ಯು,ದಧೀಚಿ,ಜಮದಗ್ನಿ, ಮಾರ್ಕಂಡೇಯ ಪರಾಶರ ಮೊದಲಾದ ಋಷಿಗಳೆಲ್ಲರೂ ಶಿವಾರ್ಚನೆಯನ್ನು ಮಾಡಿದ್ದಾರೆ. ಇದರಂತೆ ಮತ್ಸ್ಯ ಕೂರ್ಮ, ವರಾಹ, ನಾರಸಿಂಹ, ರಾಮೇಶ್ವರ ಎಂಬ ದಶಾವತಾರದಲ್ಲಿ ಶಿವಲಿಂಗ ಪ್ರತಿಷ್ಠೆಯನ್ನು ಮಾಡಿ ಶಿವಲಿಂಗಾರ್ಚನೆಯನ್ನು ಮಾಡಿದರು. ಹಾಗೂ ಶಂಕರಾಚಾರ್ಯರೂ, ವಿಭೀಷಣನೂ, ತಾರಕ, ರಾವಣಾದಿಗಳೆಲ್ಲರೂ ಲಿಂಗಧಾರಿಗಳಾಗಿ ಶಿವಲಿಂಗಾರ್ಚನೆಯನ್ನು ಮಾಡಿದರು. ಇಂಥವರೆಲ್ಲರೂ ಮರುಳಲ್ಲರೆಂದು ತಿಳಿದು ನಾವೇ ಬುದ್ಧಿವಂತರೆಂದು ಭಾವಿಸಿ ನಡೆಯುವ ಭಕ್ತನಿಗೆ ಎಲ್ಲಿರುವದು ಮುಕ್ತಿ? ಮರುಳಿ ಮರುಳಿ ಈ ಭವ ಚಕ್ರದಲ್ಲಿ ಜನ್ಮ ತಾಳಬೇಕಾಗುವದು. ''ಅಂಗದಮೇಲೆ ಲಿಂಗವಿದ್ದವನೇ ಸಂಗಮನಾಥನೆಂಬೆ'' ಎಂದು ಶ್ರೀ ಬಸವಣ್ಣನವರು ಸರ್ವೋತ್ಕೃಷ್ಟ ವಚನವನ್ನು ನುಡಿದಿದ್ದಾರೆ.

''ಜೀವಿತಂ ಶಿವಭಕ್ತಾನಾಂ ವರಂ ಪಂಚದಿನಾನಿಚ ।
ಅಜಕಲ್ಪ ಸಹಸ್ರೇಭ್ಯೋ ಭಕ್ತಿಹೀನಸ್ಯಂ ಶಾಂಕರಿ ॥''

ಎಂಬ ಶಿವಧರ್ಮೋಕ್ತಿಯಂತೆ ಹಾವು, ಹದ್ದು, ಕಾಗೆ, ಗೂಗೆಗಳಂತೆ ಅನಂತಕಾಲ ಬದುಕಿದರೇನು ? ಲೇಸೆನಿಸಿಕೊಂಡು ಶಿವಭಕ್ತನಾಗಿ, ಲಿಂಗನಿಷ್ಠೆಯುಳ್ಳವನಾಗಿ ಐದು ದಿನವಾದರೂ ಬದುಕಿದರೆ ಸಾಲದೇ ? ಹೀಗೆಂದು ಶ್ರೀ ಬಸವಣ್ಣನವರು ಹೇಳಿದ್ದಾರೆ.

ಲಿಂಗಮಧ್ಯೇ ಜಗತ್ಸರ್ವಂ ತ್ರೈಲೋಕ್ಯಂ ಸ ಚರಾಚರಮ್ ।
ಲಿಂಗ ಬಾಹ್ಯಾತ್ಪರಂ ನಾಸ್ತಿ ತಲ್ಲಿಂಗಂ ಪ್ರ ಪೂಜಯೇತ್ ॥

ಎಂಬ ಗರುಡ ಪುರಾಣೋಕ್ತಿಯಂತೆ ಲಿಂಗ ಮಧ್ಯದಲ್ಲಿ ಈ ಚರಾಚರಾತ್ಮಕವಾದ ತ್ರೈಲೋಕ್ಯವೇ ಇರುವದರಿಂದ ಲಿಂಗದ ಹೊರಗೆ ಯಾವ ವಸ್ತುವೂ ಸಹ ಇಲ್ಲೆಂದು ಚನ್ನಾಗಿ ಅರಿತು-ನುರಿತು-ವಿಚಾರ ಮಾಡಿ ಸದಾ ಇಷ್ಟಲಿಂಗ ಪೂಜಾಸಕ್ತನಾಗಿ ''ಲಿಂಗ ಪತಿ ಅಂಗ ಸತಿ'' ಎಂಬ ಲಿಂಗಾಂಗ ಸಾಮರಸ್ಯಕ್ಕೆ ಕಳಂಕ ತರದಂತೆ ಲಿಂಗೋಪಭೋಗಿಯಾಗಿ, ಲಿಂಗನಿಷ್ಠೆಯುಳ್ಳವನಾಗಿ ಭಕ್ತಿಯಿಂದ ಪೂಜಿಸಿ ಮುಕ್ತನಾಗಬೇಕೆಂದು ಶಿವ ರಹಸ್ಯವು ಬೋಧಿಸುತ್ತದೆ. ಇದೇ ವಿಷಯಕ್ಕೆ ಅಖಂಡೇಶ್ವರನೂ ಹೀಗೆ ಹೇಳುತ್ತಾನೆ:—

'ಹಾಲ ಹರವಿಯಮೇಲೆ ಮಜ್ಜಿಗೆಯ ತುಂಬಯೆರಿಸಿದರೆ ಹೆಪ್ಪಾಗಬಲ್ಲದೇನಯ್ಯ ? ಸಂಮಿಶ್ರದಿಂದಲ್ಲದೆ. ಅಂಗದಮೇಲೆ ಲಿಂಗ ಧಾರಣ ಮಾಡಿದರೆ ಸಂಗ ಸಮರಸವಾಗಬಲ್ಲದೇನಯ್ಯ ಶಿವಭಕ್ತಿ ಶಿವಜ್ಞಾನವಿಲ್ಲದೆ ಅಖಂಡೇಶ್ವರಾ'



# ಮೂರನೆಯ ಆವರಣದಾದ ಜಂಗಮದ ಮಹಿಮೆಯ ವಿಚಾರ

ಅಷ್ಟಾವರಣದಲ್ಲಿ ಜಂಗಮದ ಮಹಿಮೆಯು ಮೂರನೆಯದಾಗಿದೆ. ಗುರು-ಲಿಂಗದ ವ್ಯಾಖ್ಯೆಯಂತೆ ಜಂಗಮ ವ್ಯಾಖ್ಯೆಯೂ ಬಹು ವ್ಯಾಪಕವಾಗಿದೆ. ಹೇಗೆಂದರೆ:—

ಜ್ಞಾನಂತ್ಯತಿ ಶಯಾದ್ಯೇತು ಶಿವಂ ವಿಶ್ವ ಪ್ರಕಾಶಂ |
ಸ್ವಸ್ವರೂಪ ತಯಾತೇತು ಜಂಗಮಾ ಇತಿಕೀರ್ತಿತಾಃ ||

(ಸಿದ್ಧಾಂತ ಶಿಖಾಮಣಿ)

ಜ್ಞಾನಶಕ್ತಿ ಮತ್ತು ಕ್ರಿಯಾಶಕ್ತಿ ಅಂದರೆ ಭಕ್ತಿ-ಹಾಗೂ ವಿರಕ್ತಿಗಳ ಸಂಮಿಶ್ರಣವೇ ಜಂಗಮತ್ವವು. ಈ ಜ್ಞಾನಶಕ್ತಿ ಕ್ರಿಯಾಶಕ್ತಿಗಳಿಂದ ಸಂಪೂರ್ಣ ಶಿವ ಸ್ವರೂಪವು ಯಾವಾತನಲ್ಲಿ ಒಡಮೂಡುವದೋ ಆತನೇ ಜಂಗಮನೆಂದು ಹೇಳಿಸಿಕೊಳ್ಳುವನು.

ಜಂಗಮನಲ್ಲಿ ೧) ಬಹಿರಂಗ ಜಂಗಮತ್ವ ೨) ಅಂತರಂಗದ ಜಂಗಮತ್ವವೆಂದು ಎರಡು ಪ್ರಕಾರಗಳಿವೆ. ಬಹಿರಂಗ ಜಂಗಮತ್ವದಲ್ಲಿ ೧) ಸ್ವಯಂ ಜಂಗಮ, ೨) ಚರಜಂಗಮ, ೩) ಪರಜಂಗಮ ಹೀಗೆ ಸಾಮಾನ್ಯವಾಗಿ ಜಂಗಮನ ಕರ್ತವ್ಯ ದೃಷ್ಟಿಯಿಂದ ಮೂರು ವಿಭಾಗ ಮಾಡಲ್ಪಟ್ಟಿದೆ. (೧) ಸ್ವಯಂ ಜಂಗಮನಲ್ಲಿ ಭಕ್ತಿ ಪ್ರಾಧಾನ್ಯವಾಗಿರುವದು. ಈ ವಿಭಾಗದಲ್ಲಿ ಜ್ಞಾನಶಕ್ತಿ ಹಾಗೂ ವಿರಕ್ತಿಗಳು ಭಕ್ತಿಯ ಅಂಗಗಳಾಗಿರುವವು. ಈ ಸ್ವಯಂ ಜಂಗಮನು ಮಠದಲ್ಲಿಯೇ ಇದ್ದುಕೊಂಡು ತನ್ನಲ್ಲಿಗೆ ಭಕ್ತರು ತಂದು ಕೊಟ್ಟ ಕಾಣಿಕೆ ಹಾಗೂ ಪದಾರ್ಥಗಳನ್ನು ಶಿವ ಪ್ರಸಾದವೆಂದು ಸ್ವೀಕರಿಸಿ, ಅದು ತನ್ನದೆಂದು ಭಾವಿಸದೆ, ಭಕ್ತ ಸಮೂಹಕ್ಕೆ ಹಂಚಿಬಿಡುವನು. ಇದೇ ಸ್ವಯಂ ಜಂವಮನ ಕರ್ತವ್ಯವಾಗಿದೆ. (೨) ಇನ್ನು ಚರ ಜಂಗಮನಲ್ಲಿ ಜ್ಞಾನಶಕ್ತಿ ಪ್ರಾಧಾನ್ಯವಾಗಿರುವದು. ಈ ವಿಭಾಗದಲ್ಲಿ ವಿರಕ್ತಿ ಹಾಗೂ ಭಕ್ತಿಗಳು ಜ್ಞಾನ ಶಕ್ತಿಯ ಅಂಗಗಳಾಗಿರುವವು. ಈ ಚರ ಜಂಗಮನು ಭಕ್ತ ಸಮೂಹದಲ್ಲಿ ಸಂಚರಿಸುತ್ತ, ಅವರಿಗೆಶಿವಾನುಭವವನ್ನು ಬೋಧೆ ಮಾಡುತ್ತ ಅವರವರ ಆಚರಣೆಯಲ್ಲಿದ್ದ ಲೋಪ-ದೋಷಗಳನ್ನೂ, ಕುಂದು-ಕೊರತೆಗಳನ್ನೂ ಹೋಗಲಾಡಿಸಿ, ತಿಳಿಹೇಳಿ, ಅವರನ್ನು ಉದ್ಧಾರ ಮಾಡುವನು. ಹಾಗೂ ಈ ಸಂಚಾರ ಕಾಲದಲ್ಲಿ ಭಕ್ತರು ತಾವಾಗಿಯೇ ಕೊಟ್ಟ ಕಾಣಿಕೆ ಪದಾರ್ಥಗಳನ್ನು ಶಿವ ಪ್ರಸಾದವೆಂದು ತಿಳಿದು ಭಕ್ತ ಸಮೂಹಕ್ಕೆ ಹಂಚಿಬಿಡುವನು. ಇದು ಚರ ಜಂಗಮನ ಕರ್ತವ್ಯವಾಗಿದೆ. ೩) ಇನ್ನು ಮೂರನೆಯದಾದ ಪರ ಜಂಗಮದಲ್ಲಿ ವಿರಕ್ತಿಯು

ಪ್ರಾಧಾನ್ಯವಾಗಿರುವದು. ಈ ವಿಭಾಗದಲ್ಲಿ ಜ್ಞಾನಶಕ್ತಿ ಹಾಗೂ ಭಕ್ತಿಗಳು ವಿರಕ್ತಿಯ ಅಂಗಗಳಾಗಿರುವವು. ಈ ಪರಜಂಗಮನು ಸ್ವಯಂ ಜಂಗಮ ಹಾಗೂ ಚರ ಜಂಗಮರ ಕರ್ತವ್ಯವನ್ನು ತನ್ನ ಮನಸ್ಸು ಬಂದರೆ ಮಾಡಬಲ್ಲನು. ಇಲ್ಲವಾದರೆ ತನ್ನ ಐಚ್ಛಿಕ ಪ್ರಕಾರ ಸಂಚಾರ ಮಾಡುತ್ತ ತನ್ನ ಅನೇಕ ಲೀಲೆಯನ್ನು ಪ್ರದರ್ಶನ ಮಾಡುವನು ಹಾಗೂ ಉಳಿದ ಜಂಗಮರಂತೆ ಈತನಿಗೆ ಕರ್ತವ್ಯ ಬಂಧನವಿಲ್ಲ. ಆದರೆ ತನ್ನ ದರ್ಶನ ಹಾಗೂ ಸ್ಪರ್ಶನ ಇತ್ಯಾದಿಗಳಿಂದಲೇ ಭಕ್ತ ಸಮೂಹವನ್ನು ಉದ್ಧಾರ ಮಾಡಿ ಮಹಾ ಮಹಿಮಾಶಾಲಿಯಾಗುವನು.

## ಅಂತರ ಜಂಗಮದ ಮಹತ್ವ

ಇನ್ನು ಅಂತರಂಗದ ಜಂಗಮತ್ವದ ಲಕ್ಷಣವೇನಂದರೆ–ಶಿಷ್ಯನು ಶ್ರೀ ಗುರುವಿನಿಂದ ಪಡೆದ ಅನುಭವವನ್ನು ಲಿಂಗ ಮುಖಾಂತರ ಮಾಡಿಕೊಂಡು, ಅನುಭವದಿಂದ ಉತ್ಪನ್ನವಾದ ಆನಂದವೆಂಬ ಪ್ರಸಾದವನ್ನು ಜಂಗಮನೊಡನೆ ಅನುಭವಿಸುವದೇ ಅಂತರಂಗದ ಜಂಗಮತ್ವವು. ಆದ್ದರಿಂದ ಅರಿವೇ ಗುರುವು, ಅನುಭವವೇ ಲಿಂಗ, ಆನಂದವೇ ಜಂಗಮ ಎಂಬ ಲೋಕರೂಢಿಯ ಮಾತು ಯೋಗ್ಯವಾಗಿದೆ.

ಶ್ರೀ ಗುರುವಿನಿಂದ ದೀಕ್ಷೆಯಲ್ಲಿ ಲಿಂಗವನ್ನು ಪಡೆದು ಆ ಗುರುವಿನ ಉಪದೇಶದಂತೆಯೇ ಶಿಷ್ಯನು ಲಿಂಗ ಪೂಜೆ–ಲಿಂಗ ಧ್ಯಾನ ಮೊದಲಾದವುಗಳನ್ನು ಮಾಡುವನು, ಆದ್ದರಿಂದ ಶ್ರೀ ಗುರುವಿಗೆ ದೀಕ್ಷಾಮೂರ್ತಿಯೆಂತಲೂ, ಲಿಂಗಕ್ಕೆ ಪೂಜಾಮೂರ್ತಿಯೆಂತಲೂ ಹೇಳುವದುಂಟು. ಇನ್ನು ಲಿಂಗದ ಮುಖವೇ ಜಂಗಮನೆಂದು ಶಿವರಹಸ್ಯವು ಹೇಳುವದರಿಂದ ಲಿಂಗತೃಪ್ತಿಯೇ ಜಂಗಮ ತೃಪ್ತಿ ಎನಿಸುವದು. ಲಿಂಗಪೂಜೆ–ಲಿಂಗಧ್ಯಾನಗಳ ಫಲವಾಗಿ ಪಾದೋದಕ ಪ್ರಸಾದ ದೊರೆಯುವದು. ಈ ಪಾದೋದಕ ಪ್ರಸಾದ ಕ್ರಿಯೆಯಲ್ಲಿ ಜಂಗಮನಿಗೆ ಅಧಿಕ ಪ್ರಾಧಾನ್ಯತೆಯಿರುವದು. ಆದ್ದರಿಂದಲೇ ಜಂಗಮನಿಗೆ ಭೋಗಮೂರ್ತಿಯೆಂದೂ ಲಿಂಗವು ಪೂಜಾಮೂರ್ತಿಯೆಂದೂ, ಶ್ರೀ ಗುರುವು ದೀಕ್ಷಾ ಮೂರ್ತಿಯೆಂದೂ ಹೇಳುವದು ಯೋಗ್ಯವಾಗಿದೆ.

ಭಕ್ತೋ ದಾಸೋಹ ಭಾವಶ್ಚ ಸೋಹ ಭಾವಶ್ಚ ಜಂಗಮಃ।
ಭಾವೇ ಭೇದ ದ್ವಯಂ ನಾಸ್ತಿ ದರ್ಪಣ ಪ್ರತಿಬಿಂಬವತ್॥

ಎಂಬ ಶಿವರಹಸ್ಯ ತತ್ವಾನುಸಾರನಾಗಿ ಭಕ್ತನು ದಾಸೋಹಂಭಾವವು ಹಾಗೂ ಜಂಗಮನುಸೋಹಂಭಾವವು. ಈ ಎರಡಕ್ಕೂ ಕನ್ನಡಿಯೊಳಗೆ ಕಾಣುವ ಪ್ರತಿಬಿಂಬದಂತೆ ಭೇದವಿರುವದಿಲ್ಲ. ಶಿಷ್ಯನು ಎಲ್ಲ ಆಚಾರ ವಿಶೇಷದಿಂದಲೂ ಎಲ್ಲ ಶೀಲ ವಿಶೇಷದಿಂದಲೂ, ಎಲ್ಲ ವ್ರತ ವಿಶೇಷದಿಂದಲೂ, ಗುರುಲಿಂಗ ಜಂಗ

ಮಕ್ಕೆ ದಾಸೋಹ ಮಾಡುವದೇ ಸರ್ವೋತ್ಕೃಷ್ಟವಾದುದು. ಭಕ್ತನು ನನಗೆ ಅಥವಾ ನಾನು ದುಡಿಯುತ್ತೇನೆಂದು ಅಹಂಕಾರ ಹಾಗೂ ಮಮಕಾರಗಳಿಂದ ದುಡಿಯದೇ, ದಾಸೋಹಂಭಾವದಿಂದ ದುಡಿದು, ಅದನ್ನು ತನುಮನ ಧನದಿಂದ ಗುರು ಲಿಂಗ ಜಂಗಮಕ್ಕೆ ಅರ್ಪಿಸಬೇಕು. ಹೀಗೆ ದಾಸೋಹಂ ಭಾವದಿಂದ ಅರ್ಪಿಸುವ ಕಾರಣ ಭಕ್ತನಲ್ಲಿರುವ ಅಹಂಕಾರ, ಮಮಕಾರಗಳು ನಾಶವಾಗುವವು. ಹಾಗೂ ಆ ಜಂಗಮ ಪ್ರಸಾದವನ್ನು ಪಡೆದು ಸ್ವೀಕರಿಸುವದರಿಂದ ಭಕ್ತನ ಶರೀರವು ಪ್ರಸಾದ ಕಾಯವಾಗುವದು.

ಲಿಂಗಾರ್ಚನೆಯ ಮಾಡುವನಯ್ಯಾ
ಜಂಗಮವು ಮನೆಗೆ ಬರಬೇಕೆಂದು।
ಜಂಗಮವು ಬಂದರೆ ಲಿಂಗಾರ್ಚನೆಯಂ ಬಿಟ್ಟು
ಜಂಗಮಾರ್ಚನೆಯ ಮಾಡುವೆನಯ್ಯಾ।
ಲಿಂಗದಲ್ಲೇನುಂಟು ಜಂಗಮದಲ್ಲೇನುಂಟೆಂದರೆ
ಲಿಂಗದಲ್ಲಿ ಕುಲವುಂಟು ಛಲವುಂಟು।
ಫಲವುಂಟು ಪದವುಂಟು ಭವವುಂಟು।
ಆ ಜಂಗಮದಲ್ಲಿ ಕುಲಂನಾಸ್ತಿ ಛಲಂ ನಾಸ್ತಿ
ಫಲಂನಾಸ್ತಿ ಪದಂನಾಸ್ತಿ ಭವಂನಾಸ್ತಿ-
ಇದು ಕಾರಣ ನಮ್ಮ ಬಸವಂಣನು
ಜಂಗಮವೇ ಲಿಂಗವೆಂದು ನಂಬಿದ ಕಾರಣ
ಸ್ವಯಂ ಲಿಂಗವಾದ ಕಾಣಾ ಕೂಡಲ ಚೆನ್ನಸಂಗಮದೇವಾ॥

ಗುರುಲಿಂಗ ಜಂಗಮರಲ್ಲಿ ಕ್ರಿಯಾಭೇದದಿಂದ ಅಂತರವು ಕಂಡುಬರುವದು. ಆದರೆ ಸಾಮರಸ್ಯದಲ್ಲಿ ಈ ಅಂತರವು ಲೀನವಾಗಿ ಏಕವಾಗುತ್ತದೆ. ಬಾಹ್ಯಾವರ್ಣದಲ್ಲಿ ಮಾತ್ರ ಗುರು-ಲಿಂಗ-ಜಂಗಮರು ಪರಸ್ಪರ ಕ್ರಿಯಾ ಭೇದದಿಂದ ಸಮಯಾನುಸಾರ ಪ್ರಾಧಾನ್ಯತೆಯನ್ನು ಪಡೆಯುವದು. ಆದರೆ ಬಾಹ್ಯಾವರಣಗಳಲ್ಲಿ ಪಾದೋದಕ ಪ್ರಸಾದ ಕ್ರಿಯೆಯಲ್ಲಿ ಜಂಗಮನಿಗೆ ಹೆಚ್ಚು ಪ್ರಾಮುಖ್ಯವಿದೆ.

ಜಂಗಮನು ಜಗಚ್ಚರಿತನೆಂದೂ, ಆತನೇ ಜಗದ್ಗುರುವೆಂದೂ ಹೇಳಲಾಗುವದು ಇಂಥ ಯಾವ ದಿವ್ಯ ಜಂಗಮ ಮೂರ್ತಿಯನ್ನು ನೋಡಿದರೆ, ಸಂಭಾಷಣೆ ಮಾಡಿದರೆ ಗಂಗಾ ತೀರ್ಥ ಸ್ನಾನಕ್ಕಿಂತ ಅಧಿಕ ಪುಣ್ಯ ಲಭಿಸುವದೆಂದೂ ಉದಯ ಕಾಲದಲ್ಲಿ ಜಂಗಮದರ್ಶನ ಪಡೆದುಕೊಂಡು ಭಕ್ತಿಯಿಂದ ದೀರ್ಘದಂಡ ನಮಸ್ಕಾರ ಮಾಡಿದರೆ ಅಗಣಿತ ಲಿಂಗದರ್ಶನ ಫಲವೂ, ಸಮಸ್ತ ತೀರ್ಥ ಸ್ನಾನದ ಫಲವೂ ದೊರೆಯುವದು ಜಂಗಮನು ಪಾದವಿಟ್ಟ ಗೃಹಸ್ಥಾಶ್ರಮಗಳ ಮನೆ ಪವಿತ್ರವಾಗುವದು. ''ಸ್ಪರ್ಶನಂ ಪಾಪನಾಶನಂ ಪೂಜನಂ ಮುಕ್ತಿ ಸಾಧನಂ'' ಎಂಬಂತೆ ಸ್ಪರ್ಶದಿಂದ ಪಾಪನಾಶವೂ ಪೂಜೆಯಿಂದ ಮುಕ್ತಿಯೂ ಲಭಿಸುವದು.

ಜಂಗಮನಿಂದೆಯು ಮಹಾ ಪಾತಕವಾಗಿದೆ. "ಜಂಗಮ ನಿಂದೆಯ ಮಾಡಿ ಲಿಂಗವ ಪೂಜಿಸುವ ಭಕ್ತನ ಅಂಗವಣಿಯೆಂತೋ ಶಿವಶಿವ! ನಿಂದಿಸುವ ಪೂಜಿಸುವ ಪಾತಕ ಕೇಳಲಾಗದು! ಗುರುವಿನ ಗುರು ಜಂಗಮವೆಂದು ಕೂಡಲಸಂಗಯ್ಯನ ವಚನ- ಈ ಪ್ರಕಾರವಾಗಿ ಶ್ರೀ ಬಸವಣ್ಣನವರು ನುಡಿದಿದ್ದಾರೆ. ಅಂತೂ ಭಕ್ತನು ದಾಸೋಹಂಭಾವನೆಯುಳ್ಳವನಾದರೆ ಈಶನಾಗುತ್ತಾನೆ.



# ನಾಲ್ಕನೆಯ ಅವರಣವಾದ ಪಾದೋದಕ ಮಹಿಮೆಯ ವಿಚಾರ.

ಪಾದೋದಕಂ ಯಥಾ ಭಕ್ತ್ಯಾ ಸ್ವೀ ಕರೋತಿ ಮಹೇಶಿತುಃ ।
ತಥಾ ಶಿವಾತ್ಮನೋರ್ನಿತ್ಯಂ ಗುರು ಜಂಗಮಯೋರಪಿ ॥
( ಶಿ. ಶಿ. ಉಕ್ತಿ )

ಶಿವಭಕ್ತನ ಶಿವ (ಲಿಂಗ) ಪಾದೋದಕವನ್ನು ಹೇಗೆ ಭಕ್ತಿಯಿಂದ ಸ್ವೀಕರಿಸುವನೋ, ಹಾಗೆಯೇ ಶಿವಸ್ವರೂಪವಾದ ಗುರು ಜಂಗಮರ ಪಾದೋದಕವನ್ನು ನಿತ್ಯದಲ್ಲಿ ಸ್ವೀಕರಿಸಬೇಕು. "ರುದ್ರೇಣಾತ್ತಮಶ್ನಂತಿ ರುದ್ರೇಣ ಪೀತಂ ಪಿಬಂತಿ ರುದ್ರೇಣಾಘ್ರಾತಂ ಜಿಘ್ರಂತಿ" ಎಂಬ ಜಾಬಾಲ ಶ್ರುತಿಯ ವಚನದಂತೆ ಭಕ್ತನು ಗುರುಲಿಂಗ ಜಂಗಮಕ್ಕೆ ಅರ್ಪಿತವಾದ ಅನ್ನೋದಕಗಳನ್ನೇ ಸ್ವೀಕರಿಸಬೇಕು. ಅನರ್ಪಿತ ವಸ್ತುಗಳನ್ನು ಎಂದೂ ಸ್ವೀಕರಿಸಬಾರದು.

## ಪಾದೋದಕ ಪ್ರಕಾರಗಳು.

ಗುರುಲಿಂಗ ಜಂಗಮರಿಂದ ಪಡೆದ ತೀರ್ಥವೇ ಪಾದೋದಕವೆನಿಸುವದು. ಈ ಪಾದೋದಕದಲ್ಲಿ ೧) ಬಹಿರಂಗ ಪಾದೋದಕವೆಂದೂ, ೨) ಅಂತರಂಗದ ಪಾದೋದಕವೆಂದೂ ಎರಡು ವಿಧವಾಗಿದೆ. ಬಹಿರಂಗ ಪಾದೋದಕದಲ್ಲಿ ಮಾತ್ರ ಮತ್ತೆ ಮೂರು ಪ್ರಕಾರಗಳಿವೆ. ೧) ಗುರು ಪಾದೋದಕ ಇದಕ್ಕೆ ದೀಕ್ಷಾ ಪಾದೋದಕವೆಂತಲೂ ಅನ್ನುವರು. ಇದರಿಂದ ಸಂಚಿತ ಕರ್ಮವು ನಾಶ ಹೊಂದುವದು. ೨) ಲಿಂಗ ಪಾದೋದಕ ಇದಕ್ಕೆ ಕ್ರಿಯಾ ಪಾದೋದಕವೆಂತಲೂ ಶಿಕ್ಷಾ ಪಾದೋದಕವೆಂತಲೂ ಅನ್ನುವರು. ಇದರಿಂದ ಪ್ರಾರಬ್ಧ ಕರ್ಮವು ನಾಶ ಹೊಂದುವದು. ೩) ಜಂಗಮ ಪಾದೋದಕ ಇದಕ್ಕೆ ಜ್ಞಾನಪಾದೋದಕವೆಂದೂ ಅನ್ನುವರು. ಇದರ ಸೇವನೆಯಿಂದ ಆಗಾಮೀಕರ್ಮ ಅಂದರೆ ಮುಂದೆ ಬರತಕ್ಕ ಕರ್ಮವು ನಾಶಹೊಂದುವದು. ಹೀಗೆ ಮೂರು ಪ್ರಕಾರಗಳಿದ್ದರೂ ಪ್ರತಿಯೊಂದ

ರಲ್ಲಿ ಉಳಿದವೆರಡು ಕೂಡಿಯೇ ಇರುತ್ತವೆ. ಹೇಗಂದರೆ:— ೧) ಗುರುಪಾದೋದಕದಲ್ಲಿ ಲಿಂಗ ಜಂಗಮ ಪಾದೋದಕಗಳೆರಡೂ, ೨) ಲಿಂಗ ಪಾದೋದಕದಲ್ಲಿ ಗುರು ಜಂಗಮ ಪಾದೋದಕಗಳೆರಡೂ, ೩) ಜಂಗಮ ಪಾದೋದಕದಲ್ಲಿ ಗುರುಲಿಂಗ ಪಾದೋದಕಗಳೆರಡೂ ಕೂಡಿ ಪ್ರತಿಯೊಂದು ಪ್ರಕಾರದಲ್ಲಿ ಮೂರು ಮೂರು ವಿಭಾಗಗಳಿವೆ. ಈ ತ್ರಿವಿಧ ಪಾದೋದಕವನ್ನು ನಿತ್ಯ ಸೇವನೆ ಮಾಡುವದರಿಂದ ''ಭವಂ ನಾಸ್ತಿ'' ಅಂದರೆ ಈ ಮಾಯಾ ಪ್ರಪಂಚದ ಜಾಲವು ಪರಿಹರಿದು ಮುಕ್ತಿ ದೊರೆಯುವದು.

''ತ್ರಿಪಾದದೂರ್ಧ್ವ ಉದೈತ್ಪುರುಷಃ" ॥ ಎಂಬ ವೇದಮಂತ್ರ ಪ್ರಕಾರವಾಗಿ ಶಿವನು ಗುರು ಲಿಂಗ ಜಂಗಮರೆಂಬ ತ್ರಿಪಾದಸ್ವರೂಪನಾಗಿರುವನು. ಪೂಜಿಸಿಕೊಳ್ಳುವದರ ಸಲುವಾಗಿ ಶಿವನು ಗುರುಲಿಂಗ ಜಂಗಮರ ರೂಪವನ್ನು ಧಾರಣ ಮಾಡಿದಂತೆ ಪೂಜೆಯ ಪ್ರತಿಫಲವನ್ನು ಕೊಡುವದಕ್ಕೋಸ್ಕರವಾಗಿಯೂ ಆ ಪರಶಿವನ ಚಿಚ್ಛಕ್ತಿಯು ಉಪರೋಕ್ತ ತ್ರಿವಿಧ ಮುಕ್ತಿಯು ಪಾದೋದಕ ಸ್ವರೂಪವನ್ನು ಹೊಂದಿರುವದು. ಪೂಜ್ಯನಾದ ಗುರುವಿನ ಹಸ್ತ ಪೂಜಕನಾದ ಭಕ್ತನ ಮಸ್ತಕ ಇವುಗಳ ಸಮ್ಮಿಲನ ಕ್ರಿಯೆಗಳಿಂದ ಶಿವಕಲೆಯು ಇಷ್ಟಲಿಂಗದಲ್ಲಿ ಒಡಮೂಡಿದಂತೆ, ಪೂಜ್ಯ ಗುರುಜಂಗಮರ ಪಾದಪೂಜಕ ಭಕ್ತನ ಹಸ್ತ ಇವುಗಳ ಸಮ್ಮಿಲನ ಕ್ರಿಯೆಯಿಂದ ಪೂಜ್ಯರ ಜ್ಞಾನಾಮೃತವು ಪಾದೋದಕದಲ್ಲಿ ಒಡಮೂಡುವದು. ಈ ಯಾವ ಪಾದೋದಕವನ್ನು ತಯಾರಪಡಿಸಬೇಕಾದರೆ ಗುರು ಜಂಗಮರ ಪಾದಪೂಜೆಗೈಯಬೇಕಾಗುವದು. ಈ ಪಾದಪೂಜಾ ಸಮಯದಲ್ಲಿ ಗುರುಜಂಗಮರ ಪಾದದ ಬಲ ಅಂಗುಷ್ಠದ ಮೇಲೆ ಎರೆಯುವದೇ ಗುರು ಪಾದೋದಕವೆನಿಸುವದು. ಇದರಂತೆ ಎಡ ಅಂಗುಷ್ಠದ ಮೇಲೆ ಎರೆಯುವದು ಲಿಂಗ ಪಾದೋದಕವೆನಿಸುವದು. ಈ ಎರಡೂ ಅಂಗುಷ್ಠಗಳ ಮಧ್ಯದಲ್ಲಿ ಎರೆಯುವದೇ ಜಂಗಮ ಪಾದೋದಕವೆನಿಸುವದು. ಈ ಸಂದರ್ಭದಲ್ಲಿ ಅಂತರ ಲಿಂಗಗಳಿಗೂ ಸಂಬಂಧವಾಗಿರುವದೆಂದು ತಿಳಿಯಬೇಕು. ಹೀಗೆ ಸಿದ್ಧವಾದ ಪಾದೋದಕವನ್ನು ಐದು ಬೆರಳುಗಳಿಂದ ತನ್ನ ಇಷ್ಟಲಿಂಗದ ಮೇಲೆ ಗುರು ಲಿಂಗ ಜಂಗಮಕ್ಕೆ ಎರೆಯುವೆನೆಂದು ಭಾವಿಸಿ ನಾಲ್ಕು ಅಂಗುಲ ಪ್ರಮಾಣ ಎತ್ತರವಾಗಿ ಎರೆದು ಜಾಗ್ರತೆಯಿಂದ ಸ್ವೀಕರಿಸಬೇಕು. ಹೀಗೆ ಸ್ವೀಕರಿಸುವಾಗ ಅಂಗುಲಗಳಿಂದ ಸ್ವೀಕರಿಸುವದು. ಗುರು ಪಾದೋದಕವೆನಿಸುವದು. ಆ ಬಳಿಕ ಎಡಗೈಯಲ್ಲಿದ್ದ ಪಾದೋದಕವನ್ನು ಸ್ವೀಕರಿಸುವದೇ ಲಿಂಗ ಪಾದೋದಕವೆನಿಸುವದು. ಈ ಪಾದೋದಕ ಸ್ವೀಕರಿಸಿದ ನಂತರ ಸಂಕ್ಷಿಪ್ತವಾಗಿ ಇಷ್ಟಲಿಂಗಕ್ಕೆ ಪೂಜೆ ಮಾಡಿ ತನ್ನ ಕರಡಿಗೆಯಲ್ಲಿ ಲಿಂಗಮೂರ್ತಿಯನ್ನು ಇಟ್ಟುಕೊಳ್ಳಬೇಕು. ಈ ಪಾದೋವಕವನ್ನು ಗುರು ಶಿಷ್ಯರಿಬ್ಬರೂ ಸ್ವೀಕರಿಸಬೇಕಾಗುವದು. ಆದ್ದರಿಂದ ಇಲ್ಲಿ ಅಭೇದ್ಯ ತತ್ವವುಂಟಾಗುವದು. ಈ ಅಭೇದ್ಯತತ್ವವೇ ಸಾಮರಸ್ಯ ತತ್ವವಾಗಿದೆ.

ಇಂಥ ಯಾವ ದಿವ್ಯ ಪಾದೋದಕವನ್ನು ಸ್ವೀಕರಿಸುವಾಗ ಒಂದುಹನಿಯು ಮಾತ್ರ ಅಕಸ್ಮಾತ್ ಅಲಕ್ಷದಿಂದಲೋ ಮರಿವೆಯಿಂದಲೋ ಯಾವ ದೃಷ್ಟಿಯಿಂದಾದರೂ ಕೆಳಗೆ ಬಿದ್ದರೆ ರೌರವ ನರಕ ತಪ್ಪದು. ಈ ಪಾದೋದಕ ಸ್ವೀಕಾರದಿಂದಲೇ:-

''ಅಕಾಲಮೃತ್ಯು ಮಥನಂ ಸರ್ವ ವ್ಯಾಧಿ ನಿವಾರಣಂ |
ಸರ್ವ ಪಾಪೌಘ ಶಮನಾ ಶಂಭೋಃ ಪಾದೋದಕಂ ಶುಭಮ್ ||

ಎಂಬ ಶಿವಪುರಾಣೋಕ್ತಿಯಂತೆ ಅಕಾಲ ಮೃತ್ಯುವನ್ನು ಪಲಾಯನ ಮಾಡುವದು. ಸರ್ವ ರೋಗಗಳ ಕಾಟವನ್ನು ತಪ್ಪಿಸುವದು. ಮತ್ತು ಸಮಸ್ತ ಪಾಪಗಳನ್ನು ಪರಿಹರಿಸಿ ಇಷ್ಟಾರ್ಥಸಿದ್ಧಿಯನ್ನು ಮಾಡುವದು. ಆದ್ದರಿಂದ ಪ್ರತಿಯೊಬ್ಬ ವೀರಶೈವನು ಪಾದೋದಕವನ್ನು ನಿತ್ಯದಲ್ಲಿ ಸ್ವೀಕರಿಸಿ ಪುನೀತನಾಗಬೇಕು.

## ಅಂತರಂಗದ ಮೂರು ಪಾದೋದಕಗಳು

ಮೇಲೆ ವಿವರಿಸಿದಂತೆ ಬಾಹ್ಯ ಪಾದೋದಕ ಸ್ವೀಕಾರದಿಂದ ಸಿದ್ಧಿಯಾದ ಜ್ಞಾನಕ್ರಿಯೆಯ ಆನಂದವು ಅಂತರಂಗದಲ್ಲಿ ಚಿರಕಾಲ ಸ್ಥಿರವಾಗಿ ಉಳಿಯುವದೇ ಅಂತರಂಗದ ಪಾದೋದಕವೆನಿಸುವದು. ಈ ಜ್ಞಾನಕ್ರಿಯೆಯ ಆನಂದವು ಚಿರಕಾಲ ಸ್ಥಿರವಾಗಿ ಉಳಿದಿದ್ದರ ಪರಿಣಾಮಗಳೇ (೧) **ಕರುಣಜಲ** ಇದು ಅಂತರಂಗದ ಗುರು ಪಾದೋದಕವು. (೨) **ವಿನಯಜಲ** ಇದು ಅಂತರಂಗದ ಲಿಂಗಪಾದೋದಕವು. (೩) **ಸಮತೆಜಲ** ಇದು ಅಂತರಂಗದ ಜಂಮ ಪಾದೋದಕವು. ಹೀಗೆ ದಯೆ, ವಿನಯ, ಸಮತೆಗಳನ್ನು ವ್ಯಕ್ತ ಮಾಡುವ ಉದಕದ ಅರುವಿನಿಂದ ಉಂಟಾದ ಆನಂದವೇ ಅಂತರಂಗದ ಪಾದೋದಕವೆಂದು ತಿಳಿಯಬೇಕು. ಹೀಗೆ **ಅಂತರಂಗದ** ತ್ರಿವಿಧ ಪಾದೋದಕ ಸ್ವೀಕಾರ ಸಿದ್ಧಿಯಾದ ಬಳಿಕ ವೀರಶೈವನಿಗೆ ಪುನರ್ಜನ್ಮವಿಲ್ಲೆಂದು ಶಿವರಹಸ್ಯವು ಬೋಧಿಸುತ್ತದೆ.



## ಐದನೆಯ ಆವರಣವಾದ ಪ್ರಸಾದ ಮಹಿಮೆ ವಿಚಾರವು

ಅಷ್ಟಾವರಣದಲ್ಲಿ ಪ್ರಸಾದಮಹಿಮೆಯು ಬಹು ಮಹದ್ದಾಗಿರುವದಲ್ಲದೆ ಅತ್ಯಂತಆಳವಾದ ವಿಚಾರದಿಂದೊಡಗೂಡಿದೆ. ಇದರ ವಿವರಣೆಯೇ ಒಂದು ದೊಡ್ಡ ಹೊತ್ತಿಗೆಯಾಗುವದು ಕಾರಣ ಈ ವಿಚಾರವನ್ನು ಸಾಮಾನ್ಯವಾಗಿ ಸರ್ವರಿಗೆ ತಿಳಿಯುವಂತೆ ಇಲ್ಲಿ ಪ್ರಸಾದ ಮಹಿಮೆಯನ್ನು ಉಲ್ಲೇಖಿಸಲಾಗುವದು.

ಶಿವಲಿಂಗ ಪ್ರಸಾದಸ್ಯ ಸ್ವೀಕಾರಾದ್ಯತ್ಫಲಂಭಜೇತ್|
ತಥಾ ಪ್ರಸಾದ ಸ್ವೀಕಾರಾದ್ಗುರು ಜಂಗಮಯೋರಪಿ||
ತಸ್ಮಾದ್ಗುರುಂ ಮಹಾದೇವಂ ಶಿವಯೋಗಿ ನಮೋವಚ|
ಪೂಜಯೇ ತ್ತತ್ಪ್ರಸಾದಾನ್ನಂ ಭುಂಜೀತ ಪ್ರತಿವಾಸರಂ||
(ಶಿ. ಶಿ. ಉಕ್ತಿ

ಶಿವಲಿಂಗ ಪ್ರಸಾದ ಸ್ವೀಕಾರದಿಂದ ಯಾವ ಫಲವು ದೊರೆಯುವದೋ ಅದು ಗುರು ಜಂಗಮರ ಪ್ರಸಾದ ಸ್ವೀಕಾರದಿಂದ ದೊರೆಯುವದು. ಆದ್ದರಿಂದ ಗುರುವಿನನ್ನೂ, ಜಂಗಮನನ್ನೂ ಪೂಜಿಸಿ ಅವರಿಂದ ಪ್ರಾಪ್ತವಾದ ಪ್ರಸಾದವನ್ನು ಪ್ರತಿ ದಿವಸ ಸೇವಿಸಬೇಕು.

ಭಕ್ತನು ತನ್ನ ಆಹಾರಕ್ಕಾಗಿ ನಿತ್ಯದಲ್ಲಿ ಕಾಯಕ ಮಾಡಿ ಸಂಪಾದಿಸಬಹುದು. ತನ್ನದೆಂದು ಅಹಂಕಾರ ಮಮಕಾರಗಳ ಭಾವನೆಯಿಂದ ಊಟ ಮಾಡದೆ ಅದು ತನ್ನ ಪೂಜ್ಯ ಗುರುಲಿಂಗ ಜಂಗಮರ ದಯೆಯಿಂದ ದೊರೆತಿರುವದೆಂದು ತಿಳಿದು,ಅವರಿಗೆ ಅರ್ಪಿಸಿ ಅವರಿಂದಲೇ ಪ್ರಾಪ್ತವಾದುದನ್ನು ದಾಸೋಹಂ ಭಾವದಿಂದ ಊಟ ಮಾಡುವ ಆಹಾರವೇ ಪ್ರಸಾದವೆನಿಸುವದು. ಇದರಂತೆ ತನ್ನ ನಿತ್ಯೋಪಯುಕ್ತ ಭೋಗ್ಯ ಪದಾರ್ಥಗಳನ್ನೂ ಸಹ ಗುರುಲಿಂಗಜಂಗಮಕ್ಕೆ ಅರ್ಪಿಸಿ ಪ್ರಸಾದವಾಗಿ ಮಾಡಿಕೊಂಡು ಉಪಭೋಗಿಸಬೇಕಾಗುವದು. ಇದರಿಂದ ಭಕ್ತನೂ ಶಿವನಂತೆ ಪ್ರಸಾದಸ್ವರೂಪನಾಗುವನು.

ಜಂಗಮ ಪ್ರಸಾದಂ ಗ್ರಾಹ್ಯಂ ಸರ್ವ ದೇವೈರನುಷ್ಠಿತಮ್ ।
ತೇನೋಚ್ಛಿತಸ್ಯಂ ನಸಂಪ್ರಾಪ್ಯಭವೋನ್ಮುಕ್ತಿಸ್ತಥಾ ಭವೇತ್॥
(ವೀರಾಗಮ)

ಗುರುಲಿಂಗ ಜಂಗಮಕ್ಕೆ ಅರ್ಪಿಸಿದ ಪ್ರಸಾದವೇ ಶಿವಪ್ರಸಾದವೆನಿಸುವದು. ಇಂಥ ಯಾವ ಶಿವಪ್ರಸಾದವನ್ನು ಪಡೆಯದೆ ಇದ್ದ ಅಥವಾ ಸ್ವೀಕರಿಸದೆ ಇದ್ದ ವೀರಶೈವನಿಗೆ ಮುಕ್ತಿಯಿಲ್ಲವು. ಅರ್ಥಾತ್ ನಿತ್ಯ ಶಿವಪ್ರಸಾದ ಸ್ವೀಕರಿಸುವದರಿಂದಲೇ ಜೀವೋನ್ಮುಕ್ತಿಯಾಗುವದೆಂದು ವೀರಾಗಮವು ಬೋಧಿಸುತ್ತದೆ. ಭವರೋಗ ಮೊದಲಾದ ಎಲ್ಲ ರೋಗಗಳಿಗೂ ಶಿವಪ್ರಸಾದವೇ ಔಷಧವೆಂದು ಯಜುರ್ವೇದವು ಬೋಧಿಸುತ್ತದೆ. ಕೋಟಿ ಯಜ್ಞಂಗಳನು ಮಾಡಿದರೂ ಸಹಸ್ರ ಅಶ್ವಮೇಧ ಯಜ್ಞ ಮಾಡಿದರೂ ಇನ್ನುಳಿದ ಅನೇಕ ಯಜ್ಞಗಳನ್ನು ಮಾಡಿರೂ ಶಿವಪ್ರಸಾದಕ್ಕೆ ಸಮವಾಗಲಾರವೆಂದೂ, ಲಿಂಗ ಪುರಾಣವು ಬೋಧಿಸುತ್ತದೆ. ಹಾಗೂ ಜಪ ತಪ-ಧ್ಯಾನ. ಇವುಗಳಿಂದ ಆಗುವ ಪ್ರಯೋಜನವೂ ಸಹ ಶಿವಪ್ರಸಾದಕ್ಕೆ ಸರಿಯಾಗಲಾರದೆಂದೂ ಶಿವರಹಸ್ಯವು ಬೋಧಿಸುತ್ತದೆ. ಇಂಥ ಯಾವ ದಿವ್ಯ ಶಿವಪ್ರಸಾದವನ್ನು ಕೆಳಗೆ ಚಲ್ಲದಂತೆ ಬೀಳದಂತೆ ಜಾಗ್ರತೆಯಿಂದಲೂ ಸೇವಿಸಿದ ಭಕ್ತನೂ ಈಶನಾಗುತ್ತಾನೆಂದು ಸರ್ವಜ್ಞಮೂರ್ತಿಯು ಬೋಧಿಸುತ್ತಾನೆ.

ಈಶಪ್ರಸಾದವನು। ಸೂಸದಲೆ ತಾ ಕೊಳ್ಳೆ।
ಶಾಶ್ವತದ ಪದವಿ ತಾನಕ್ಕು। ಜಗಕೆಲ್ಲ ಈಶ್ವರನೇ ಅಕ್ಕು ಸರ್ವಜ್ಞ॥

ಹೀಗೆ ವೀರಶೈವ ಸಿದ್ಧಾಂತದಲ್ಲಿ ಪ್ರಸಾದ ತತ್ವ ವಿಷಯದಲ್ಲಿ ಬಹು ವಿಶಾಲವಾದ ಭಾವನೆಯಿದೆ. ಇನ್ನು ಅಂತರಂಗದ ಪ್ರಸಾದ ಸ್ವರೂಪವೆಂದರೆ ವೀರ

ಶೈವನು ಅಹಂಕಾರ ಮಮಕಾರಗಳನ್ನು ತೊರೆದು ಆತ್ಮ ಪರಿಶುದ್ಧತೆಯನ್ನೂ, ಪ್ರಸನ್ನತೆಯನ್ನೂ ಪಡೆಯುವದೇ ಅಂತರಂಗದ ಪ್ರಸಾದವಾಗಿದೆ. ಈ ಪ್ರಸಾದ ಸಿದ್ಧಿಯಿಂದಲೇ ಆತ್ಮನು ಜೀವನ್ಮುಕ್ತಿ ಪಡೆಯುವನೆಂದು ಆಗಮಗಳು ಬೋಧಿಸುತ್ತವೆ.

## ಆರನೇ ಆವರಣವಾದ ವಿಭೂತಿ ಮಹಿಮೆಯ ವಿಚಾರ

ಅಷ್ಟಾವರಣದಲ್ಲಿ ವಿಭೂತಿಯ ಮಹಿಮೆಯು ಆರನೆಯದಾಗಿದೆ. ಇದರ ಹೆಚ್ಚಿನ ವಿಚಾರಗಳನ್ನೂ ಮತ್ತು ವಿಭೂತಿಯನ್ನೂ ತಯಾರಿಸು ಕ್ರಮವನ್ನೂ ಮುಂದೆ ವೀರಶೈವ-ಆಚಾರ ಪ್ರಕರ್ಣದಲ್ಲಿ ಸವಿಸ್ತಾರವಾಗಿ ಉಲ್ಲೇಖಿಸಲಾಗುವದು.

### ಭಸ್ಮದ-ಎರಡು ಪ್ರಕಾರಗಳು ಹಾಗೂ ಅವುಗಳ ಉಪಯೋಗವು

"ಭಸ್ಮಧಾರಣ-ಸಂಯುಕ್ತ: ಪವಿತ್ರೋ ನಿಯತಾಶಯಃ!"

ಎಂಬ ಶಿದ್ಧಾಂತ ಶಿಖಾಮಣಿಯೋಕ್ತಿಯಂತೆ ಭಸ್ಮಧಾರಣದಿಂದ ಕೂಡಿದ ವೀರಶೈವನು ಪವಿತ್ರನೂ, ನಿಶ್ಚಯಚಿತ್ತನೂ ಆಗುವನು. ಭಸ್ಮದಲ್ಲಿ ೧) ನಿರುಪಾದಿಕ ಭಸ್ಮವೆಂದೂ, ೨) ಸೋಪಾದಿಕ ಭಸ್ಮವೆಂದೂ ಎರಡು ಪ್ರಕಾರಗಳಿವೆ—

(೧) ಜ್ಯೋತಿಸ್ವರೂಪನಾದ ಆ ಪರಶಿವನ ದಿವ್ಯ ತೇಜಸ್ಸೇ ನಿರುಪಾಧಿಕ ಭಸ್ಮವೆನಿಸುವದು. ಹಾಗೂ ಇದೇ ಚಿದ್ಭಸಿತವೆಂದು ಹೇಳಲ್ಪಡುವದು. ಅಂತರಂಗದಲ್ಲಿ ಶಿವಜ್ಞಾನದಿಂದುಂಟಾದ ಚಿದ್ಭಸಿತವೇ ಅಂತರಷ್ಟಾವರಣದ ಭಸ್ಮವೆನಿಸುವದು. ಇದೇ ನಿರುಪಾಧಿಕವು.

(೨) ಪಂಚಬ್ರಹ್ಮ ಮಂತ್ರನ್ಯಾಸಾದಿಗಳ ಸಂಬಂಧದಿಂದ ಯಾವದು ಶಿವಾಗ್ನಿ ಸಂಸ್ಕಾರದಿಂದ ಉತ್ಪನ್ನವಾಗುವದೋ ಅದು "ಸೋಪಾದಿಕ ಭಸ್ಮ"ವೆಂದು ಹೇಳಲ್ಪಡುವದು, ಈ ಸೋಪಾದಿಕ ಭಸ್ಮವೇ ಬಾಹ್ಯಾಷ್ಟಾವರಣದಲ್ಲಿ ಉಪಯೋಗಿಸಲ್ಪಡುವದು. ನಿರುಪಾದಿಕ ಭಸ್ಮಧಾರಣಕ್ಕಾಗಿಯೇ ಸೋಪಾದಿಕ ಭಸ್ಮ ಧಾರಣ ಅತ್ಯಾವಶ್ಯಕತೆಯಿರುವದು.

### ಭಸ್ಮ ಲೇಪನ-ಪ್ರಕಾರಗಳು ಹಾಗೂ ತ್ರಿಪುಂಡ ಧಾರಣ ಮಹತ್ವ

ಈ ಸೋಪಾಧಿಕ ಭಸ್ಮವನ್ನು ೧) ಸ್ನಾನ. ೨) ಉದ್ಧೂಲನ. ೩) ಧಾರಣ ವೆಂಬ ಮೂರು ಬಗೆಯಿಂದ ಉಪಯೋಗ ಮಾಡಲಾಗುವದು.

೧) ವೀರಶೈವನು ಸ್ವಚ್ಛವಾದ ನೀರಿನಿಂದ ಸ್ನಾನ ಮಾಡಿ ಮಡಿಬಟ್ಟೆ

ಯನ್ನುಟ್ಟುಕೊಂಡು ಯೋಗ್ಯ ಆಸನದಲ್ಲಿ ಕುಳಿತು ಪ್ರಾಣಾಯಾದಿಗಳನ್ನು ಮಾಡಿ ಭಸ್ಮಸ್ನಾನ ಸಂಕಲ್ಪವನ್ನು ಮಾಡಬೇಕು. ತದನಂತರ ಭಸ್ಮವನ್ನು ಎಡಗೈಯ ಅಂಗೈಯಲ್ಲಿಟ್ಟುಕೊಂಡು ಅದನ್ನು ಬಲದೊಡೆಯ ಮೇಲಿರಿಸಿ. ಮೇಲೆ ಬಲ ಹಸ್ತವನ್ನು ಮುಚ್ಚಿ ಮೂಲಮಂತ್ರದಿಂದ ಎಂಟು ಸಾರೆ ಅಭಿಮಂತ್ರಿಸಿ, ಈಶಾನ ಮಂತ್ರದಿಂದ ಶಿರಸ್ಸಿನಲ್ಲಿಯೂ ತತ್ಪುರುಷಮಂತ್ರದಿಂದ ಮುಖದಲ್ಲಿಯೂ, ಅಘೋರ ಮಂತ್ರದಿಂದ ಹೃದಯದಲ್ಲೂ, ವಾಮದೇವ ಮಂತ್ರದಿಂದ ಗುಹ್ಯಸ್ಥಾನ ದಲ್ಲೂ, ಸದ್ಯೋಜಾತ ಮಂತ್ರದಿಂದ ಪಾದದಲ್ಲಿಯೂ ಓಂಕಾರದಿಂದ ಸರ್ವಾಂಗದ ಲ್ಲಿಯೂ ಭಸ್ಮಲೇಪನ ಮಾಡಿಕೊಳ್ಳಬೇಕು ಇದೇ ಭಸ್ಮಸ್ನಾನವೆನಿಸಿಕೊಳ್ಳುವದು.

(೨) ಭಸ್ಮವನ್ನು ಮೂಲಮಂತ್ರದಿಂದ ಏಳು ಸಲ ಅಭಿಮಂತ್ರಿಸಿ ಅದರಿಂದ ದೇಹದ ಸರ್ವಾಂಗದಲ್ಲಿಯೂ ಲೇಪನ ಮಾಡಿಕೊಳ್ಳುವದೇ ಉದ್ಧೂಳನವೆನಿಸುತ್ತದೆ.

(೩) ತನ್ನ ಬಲಹಸ್ತದ ಮಧ್ಯದ ಮೂರು ಬೆರಳುಗಳಿಂದಾಗಲೀ ಇಲ್ಲವೇ ಮಧ್ಯ-ಅನಾಮಿಕ ಬೆರಳುಗಳಿಂದಲೂ ಎಡದಿಂದ ಬಲಕ್ಕೆ ಎರಡು ರೇಖೆಗಳೂ ಆ ಎರಡರ ಮಧ್ಯದಲ್ಲಿ ಹೆಬ್ಬೆರಳಿನಿಂದ ಬಲದಿಂದ ಎಡಕ್ಕೆ ಒಂದು ರೇಖೆಯೂ ಬರುವಂತೆ ಹಣೆಯಲ್ಲಿ ಸರಳವಾಗಿಯೂ ದಟ್ಟವಾಗಿಯೂ, ಛಿನ್ನವಿಛಿನ್ನವಾಗ ದಂತೆಯೂ ಆರು ಅಂಗುಲಲದ ಪ್ರಮಾಣದಲ್ಲಿ ತ್ರಿಪುಂಡ ಧಾರಣ ಮಾಡಿಕೊಳ್ಳ ಬೇಕು. ಇದೇ ಧಾರಣ ಕ್ರಮವೆನಿಸಿಕೊಳ್ಳುವದು. ವೀರಶೈವನು ಸದಾ ಉದಯ ಕಾಲ, ಮಧ್ಯಾಹ್ನಕಾಲ ಸಾಯಂಕಾಲದಲ್ಲಿ ಭಸ್ಮ ತ್ರಿಪುಂಡ ಧಾರಣವನ್ನು ಮಾಡ ಬೇಕು. ಇಂಥ ಯಾವ ದಿವ್ಯ ಭಸ್ಮವನ್ನು ಜಾಗ್ರತೆಯಿಂದಲೂ ಭಕ್ತಿಯಿಂದಲೂ ಧರಿಸಬೇಕು. ಒಂದು ವೇಳೆ ಭಸ್ಮದ ಒಂದು ಕಣವು ಕೆಳಗೆ ಬಿದ್ದರೆ ರೌರವ ನರಕ ತಪ್ಪದು. ಮತ್ತು ಶಿವತತ್ವವಿಲ್ಲದ ವಿದ್ಯೆಯನ್ನೂ ಹಾಗೂ ವಿಭೂತಿಯಿಲ್ಲದ ಹಣೆಯನ್ನು ಸುಡು ಸುಡು ಎಂಬುದಾಗಿ ಶಿವರಹಸ್ಯವು ಬೋಧಿಸುತ್ತದೆ.

## ಭಸ್ಮದ-ಮಹತ್ವ

ಪಾತಕೀ ಪಾಪಕಾನ್ಮುಕ್ತೋ ಭವಿಷ್ಯತಿ ನ ಸಂಶಯಃ।
ಭಸ್ಮನಾ ಸದೃಶಂನಾಸ್ತಿ ಕಿಂಚಿ ಲೋಕೇಷ್ವಪಿ ತ್ರಿಷು॥
(ವಶಿಷ್ಟ ಋಷಿ ಉವಾಚ)

ಎಂಬಂತೆ ಪಾಪ ಮಾಡಿದವನು ವಿಭೂತಿಯನ್ನು ಧರಿಸಿದರೆ ಆ ಪಾಪಗಳೆ ಲ್ಲವೂ ಸಂದೇಹವಿಲ್ಲದೆ ತೊಲಗುವವು. ಇಂಥ ಯಾವ ವಿಭೂತಿಯ ಸಮಾನ ವಾದ ವಸ್ತುಗಳು ಈ ಮೂರು ಲೋಕದಲ್ಲಿಲ್ಲವೆಂದು ವಶಿಷ್ಟ ಋಷಿಗಳು ಬೋಧಿಸು ತ್ತಾರೆ. ಸೂರ್ಯೋದಯಕ್ಕಿಂತ ಮುನ್ನವೇ ಎದ್ದು ಜಳಕನನ್ನು ಮಾಡಿ ಭಸ್ಮ ಧಾರಣ ಮಾಡಿಕೊಂಡು ಯಾವನು ಹೊರಗೆ ತನ್ನ ಅಡಿಗಳನ್ನಿಡುತ್ತಾನೆಯೋ ಅವನ ಸಕಲ ಪಾಪಗಳೂ ನಾಶವಾಗಿ ಶಿವಸಾಯುಜ್ಯ ಪಡೆಯುವನು.

ಸರ್ವ ತೀರ್ಥೇಷು ಯತ್ಪುಣ್ಯಂ ಸರ್ವ ಯಜ್ಞೇಷುಯತ್ಫಲಮ್।
ತತ್ಫಲಂ ಕೋಟಿ ಗುಣಿತಂ ಭಸ್ಮ ಸ್ನಾನಂ ನ ಸಂಶಯಃ॥

ಸಕಲ ತೀರ್ಥಗಳಲ್ಲಿ ಸ್ನಾನ ಮಾಡಿದ ಪುಣ್ಯ ಫಲಕ್ಕಿಂತಲೂ ಎಲ್ಲಾ ಯಜ್ಞಂಗಳನು ಮಾಡಿದ ಪುಣ್ಯ ಫಲಕ್ಕಿಂತಲೂ, ಕೋಟಿಪಾಲು ಹೆಚ್ಚಿನ ಪುಣ್ಯವು ಭಸ್ಮ ಸ್ನಾನ ಮಾಡುವದರಿಂದ ಸಂಶಯವಿಲ್ಲದೆ ಪ್ರಾಪ್ತಿಯಾಗುವದೆಂದು ಆಗಮವು ಬೋಧಿಸುತ್ತದೆ. ಮತ್ತು ಈ ಭಸ್ಮಧಾರಣ ಸಮಾನವಾಗಿ ಯಾವ ತಪೋಬಲವೂ, ಮಂತ್ರಬಲವೂ, ಯಜ್ಞಬಲವೂ ಇಲ್ಲವೆಂದು ಲಿಂಗಪುರಾಣವು ಬೋಧಿಸುತ್ತದೆ. ಇದೇ ವಿಷಯದಲ್ಲಿ ಶ್ರೀ ಬಸವಣ್ಣನವರು ಹೀಗೆ ನುಡಿದಿದ್ದಾರೆ:—

ಅನೇಕ ಜನ್ಮದಲ್ಲಿ ಮಾಡಿದ ಪಾಪವು ಹೇಗೆಹೋಹವೋ ಎಂದುಚಿಂತಿಸಬೇಡ।
ಕಹಿಸೋರೆಯ ಕಾಯ ತಂದು ವಿಭೂತಿಯ ತುಂಬಿದರೆ ಸಿಹಿಯಾಗದೇ
ಮೂರು ದಿವಸಕ್ಕೆ ॥
ಹಲವು ಕಾಲ ಕೊಂದ ಸೊನೆಗಾರನ ಕೈಯಕತ್ತಿಯಾದಡೇನು ।
ಪರುಷ ಮುಟ್ಟಲು ಹೊನ್ನಾಗದೇ ಅಯ್ಯಾ ಲಲಾಟದಲ್ಲಿ ವಿಭೂತಿಯ ಧರಿ
ಸಲ್ಕೆ ಪಾಪಂಗಳು ಬೆಂದು ಹೋಂಗದಿಹವೇ ಕೂಡಲ ಸಂಗಮದೇವ ॥

ಹಾಗೂ "ನಾರಿಗೆ ಗುಣವೇ ಶೃಂಗಾರ, ನಮ್ಮ ಶರಣರ ನೊಸಲಿಗೆ ವಿಭೂತಿಯೇ ಶೃಂಗಾರ"ವೆಂದು ಮತ್ತೊಂದು ವಚನದಲ್ಲಿ ಶ್ರೀ ಬಸವಣ್ಣನವರು ಹೇಳಿದ್ದಾರೆ.

ಬ್ರಹ್ಮನೇ ಮೊದಲಾದ ಸಮಸ್ತ ದೇವತೆಗಳೂ, ನಾರದ ಮುನಿಗಳೂ, ಸನಕಾದಿ ಯೋಗಿಗಳೂ, ಬಾಣನೇ ಮೊದಲಾದ ದಾನವರು ಭಸ್ಮ ಸ್ನಾನ ಸಂಪನ್ನನಾಗಿ, ಶಿವಭಕ್ತಿ ತತ್ಪರರಾಗಿ ಸಕಲ ಪಾಪ ಸಮೂಹಗಳಿಂದ ಬಿಡುಗಡೆಯಾಗಿ ನಿತ್ಯ ಶುದ್ಧರೂ ಪಾವನರೂ ಆಗಿರುತ್ತಾರೆಂದು ಸಿದ್ಧಾಂತ ಶಿಖಾಮಣಿ ಗ್ರಂಥದ ಭಸ್ಮಸ್ಥಲದಲ್ಲಿ ಉಲ್ಲೇಖಿಸಿದೆ. ಈ ದೃಷ್ಟಾಂತದಿಂದ ಭಸ್ಮದ ಮಹತ್ವವು ಎಷ್ಟಿರುವದೆಂದು ಬೇರೆ ಹೇಳಬೇಕಾಗಿಲ್ಲ. ಹೀಗೆ ಭಸ್ಮದ ಮಹಿಮೆಯು ಅತ್ಯಾಗಧವಾಗಿದೆ. ಆದ್ದರಿಂದ ವೀರಶೈವರು ಸರ್ವಶ್ರೇಷ್ಠವಾದ ಭಸ್ಮವನ್ನು ಧರಿಸಿ ಪುನೀತರಾಗಬೇಕು.

## ಏಳನೆಯ ಆವರಣವಾದ
## ರುದ್ರಾಕ್ಷ ಮಹಿಮೆಯ ವಿಚಾರ

ಅಷ್ಟಾವರಣದಲ್ಲಿ ರುದ್ರಾಕ್ಷ ಮಹಿಮೆಯು ಏಳನೆಯದಾಗಿದೆ. ಇದರ ಹೆಚ್ಚಿನ ವಿಚಾರಗಳನ್ನು ಮುಂದೆ ವೀರಶೈವಾಚಾರ ಪ್ರಕರಣದಲ್ಲಿ ಬರೆಯಲಾಗಿದೆ ಇಲ್ಲಿ ಮಾತ್ರ ರುದ್ರಾಕ್ಷ ಧಾರಣದಿಂದಾಗುವ ಫಲ, ಧಾರಣ ಕ್ರಮ ಹಾಗೂ ಅವುಗಳ ಉತ್ಪತ್ತಿಯ ವಿಚಾರಗಳನ್ನು ಉಲ್ಲೇಖಿಸಲಾಗುವದು.

## ರುದ್ರಾಕ್ಷಿಯ ಮಹತ್ವ

ರುದ್ರಾಕ್ಷ ಧಾರಣಾದ್ರುದ್ರೋ ಭವೇತ್ಯಾತ್ರನ ಸಂಶಯಃ ।
ರುದ್ರಾಕ್ಷ ಧಾರಣಾದೇವ ಸರ್ವಪಾತ್ಯೈರ್ವಿ ಮುಚ್ಯತೇ ॥
(ವಶಿಷ್ಠ ಋಷಿ ಉವಾಚ)

ಪ್ರತಿ ನಿತ್ಯದಲ್ಲಿಯೂ ರುದ್ರಾಕ್ಷ ಧಾರಣ ಮಾಡುವದರಿಂದ ನಿಸ್ಸಂದೇಹ ವಾಗಿ ರುದ್ರನೇ ಆಗುವನಲ್ಲದೆ ಸರ್ವಪಾಪಗಳೂ ಬಿಡುಗಡೆಯಾಗಿ ಪವಿತ್ರನಾಗುತ್ತಾನೆ. ಆದ್ದರಿಂದ ರುದ್ರಾಕ್ಷಗಳನ್ನು ಸದಾ ದೇಹದಲ್ಲಿ ಧಾರಣ ಮಾಡಿಕೊಳ್ಳಬೇಕೆಂದೂ ವಶಿಷ್ಠ ಋಷಿಗಳ ಉಲ್ಲೇಖವಿದೆ. ಮತ್ತು ಹೀಗೆ ನಿತ್ಯದಲ್ಲಿ ರುದ್ರಾಕ್ಷಗಳನ್ನು ಧರಿಸಿಕೊಳ್ಳುವದರಿಂದ ಒಂದು ಕೋಟಿ ಆಕಳುಗಳನ್ನು ದಾನ ಮಾಡಿದರೆ ಯಾವ ಫಲವು ಪ್ರಾಪ್ತವಾಗುವದೋ ಅಂಥ ಫಲವು ದೊರೆಯುವದೆಂದೂ ಹಾಗೂ ಮರಣ ಕಾಲದಲ್ಲಿ ಶಿವನನ್ನು ಧ್ಯಾನಿಸುತ್ತ ರುದ್ರಾಕ್ಷಿಯನ್ನು ತೇಯ್ದು, ಆ ನೀರನ್ನು ಪಾನ ಮಾಡುವದರಿಂದ ಅವನು ಶಿವಲೋಕವನ್ನು ಹೊಂದುತ್ತಾನೆಂದೂ, ಶಿದ್ಧಾಂತ ಶಿಖಾಮಣಿಯು ಬೋಧಿಸುತ್ತದೆ.

## ದೇಹದಲ್ಲಿ ರುದ್ರಾಕ್ಷ ಧಾರಣ ಕ್ರಮವು

ರುದ್ರಾಕ್ಷಗಳಿಗೆ ಒಂದರಿಂದ ಹದಿನಾಲ್ಕರ ವರೆಗೂ ಮುಖಗಳಿರುತ್ತವೆ. ಸುಜ್ಞಾನಿಯಾದವನು ಒಂದು ಮುಖದ ರುದ್ರಾಕ್ಷವನ್ನು ಶಿಖೆಯಲ್ಲಿ ಧರಿಸಬೇಕು. ೨-೩-೧೨ ಮುಖದವುಗಳನ್ನು ಶಿರಸ್ಸಿನಲ್ಲಿ ಧರಿಸಬೇಕು. ೧೧ ಮುಖದ ೩೬ ರುದ್ರಾಕ್ಷಿಗಳನ್ನು ಮಸ್ತಕದಲ್ಲಿ (ಶಿರಸ್ಸಿನ ಸುತ್ತಲೂ)ಧರಿಸಬೇಕು. ೫-೭-೧೦ ಮುಖದವುಗಳನ್ನು ಎರಡೂ ಕಿವಿಗಳಲ್ಲಿಯೂ, ೬, ೧೬, ೨೮ ಮುಖದ ೧೬, ಹೀಗೆ ೩೨ನ್ನು ಕೊರಳಲ್ಲಿಯೂ; ೪ ಮುಖದ ೫೦ನ್ನು ಎದೆಯ ಮೇಲೆಯೂ, ೯ ಮುಖದವುಗಳನ್ನು ಹನ್ನೆರಡು-ಹನ್ನೆರಡರಂತೆ ಎರಡೂ ಮುಂಗೈಯಲ್ಲೂ; ಇನ್ನು ೧೪ ಮುಖದ ೧೦೮ ನ್ನು ಮಾಲೆ ಮಾಡಿ ಯಜ್ಞೋಪವೀತದಂತೆಯೂ; ಸಕ್ರಮವಾಗಿ ಧಾರಣ ಮಾಡಿಕೊಳ್ಳಬೇಕೆಂದು ಶಿದ್ಧಾಂತ ಶಿಖಾಮಣಿ ಶಿವಪುರಾಣ ಹಾಗೂ ವೀರಾಗಮ ಗ್ರಂಥಗಳಲ್ಲಿ ಉಕ್ತವಾಗಿದೆ. ಹೀಗೆ ರುದ್ರಾಕ್ಷಗಳನ್ನು ಧಾರಣ ಮಾಡಿಕೊಂಡು ಶಿವಪೂಜೆಯನ್ನು ಮಾಡದಿದ್ದರೆ ಮಹಾ ನಿಷ್ಫಲವೆಂದು ಶಿವ ರಹಸ್ಯವು ಬೋಧಿಸುತ್ತದೆ.

''ಸದ್ಯೋಜಾತ ವಾಮದೇವ. ಅಘೋರ ತತ್ಪುರುಷ ಈಶಾನ್ಯ-
ಪಂಚಬ್ರಹ್ಮ ಮೊದಲಾದ ಪಂಚ ಮುಖದ ರುದ್ರಾಕ್ಷಿಯ
ಹಸ್ತ. ಬಾಹು ಕರ್ಣ ಕಂಠ ಉರ ಮಸ್ತಕಂಗಳಲ್ಲಿ-
ಧರಿಸಿದಾತನೇ ರುದ್ರನು, ಆ ಭಕ್ತನ ಸ್ಪರ್ಶನವ-ದರ್ಶನ
ಮಾಡಿದವರಿಗೆ ಭವರೋಗ ದುರಿತ ಮುಟ್ಟಲಮ್ಮವು ನೋಡಾ''

ಎಂಬ ವಚನ ಶಾಸ್ತ್ರದಂತೆ "ಮೇಲೆ ವಿವರಿಸಿದ ಒಂದರಿಂದ ೧೪ ಮುಖ ದೊಳಗಿನ ರುದ್ರಾಕ್ಷಗಳು ದೊರೆಯದಿದ್ದ ಪಕ್ಷದಲ್ಲಿ" ಕೊನೆಗೆ ಐದು ಮುಖದ ರುದ್ರಾಕ್ಷಗಳನ್ನು ಸಾಧ್ಯವಾದಷ್ಟು ಧಾರಣ ಮಾಡಿಕೊಳ್ಳಬೇಕು, ಹಾಗೂ ಒಂದ ನೂರಾ ಎಂಟರ ರುದ್ರಾಕ್ಷ ಮಾಲೆಯನ್ನು ಜಪಕ್ಕೆ ಉಪಯೋಗಿಸಲ್ಪಡಬೇಕು.

"ಯಸ್ಯಾಂಗೇ ನಾಸ್ತಿ ರುದ್ರಾಕ್ಷೋ ಏಕೋಽಪಿ ಬಹುಪುಣ್ಯದಃ। ತಸ್ಯ ಜನ್ಮ ನಿರರ್ಥಂಸ್ಯಾ ತ್ರಿಪುಂಡ ರಹಿತೋ ಯಥಾ"ಎಂಬಂತೆ ತ್ರಿಪುಂಡ(ಭಸ್ಮ)ಧಾರಣವಿಲ್ಲದ ಶಿವ ಭಕ್ತನ ಜನ್ಮವು ಹೇಗೆ ನಿಷ್ಫಲವೆಂದು ಹೇಳಲಾಗುವದೋ ಹಾಗೆ ಬಹು ಪುಣ್ಯವನ್ನುಂಟುಮಾಡುವ ರುದ್ರಾಕ್ಷಿಯನ್ನು ದೇಹದಲ್ಲಿ ಒಂದನ್ನಾದರೂ ಧಾರಣ ಮಾಡದಿದ್ದರೆ ಅವನ ಜನ್ಮವು ನಿರರ್ಥಕವೆಂದು ಹೇಳಲಾಗುವದು.

## ರುದ್ರಾಕ್ಷಿಗಳ ಉತ್ಪತ್ತಿಯು ವಿಚಾರ

ಪೂರ್ವದಲ್ಲಿ ತ್ರಿಪುರ ಸಂಹಾರ ಮಾಡುವ ಸಮಯಕ್ಕೆ ತ್ರಿಣೇತ್ರಧಾರಿಯಾದ ಆ ಪರ ಶಿವನು; ತನ್ನ ಸೂರ್ಯ-ಚಂದ್ರ-ಅಗ್ನಿಗಳೆಂಬ ಮೂರು ಕಣ್ಣುಗಳನ್ನು ಅರಳಿಸಿ ತ್ರಿಪುರಾಸುರನನ್ನು ದಿಟ್ಟಿಸಿ ಮೇಲ್ಭಾಗದಲ್ಲಿ ನೋಡಿದನು. ಆಗ ಆ ಪರಶಿವನ ನೇತ್ರಗಳಿಂದ ಕಂಬನಿಗಳು ಉದುರಿದವು. ಹೀಗೆ ಉದುರಿದ ಕಂಬನಿಗಳೇ ರುದ್ರಾಕ್ಷಿಗಳೆಂದು ಹೇಳಲ್ಪಟ್ಟವು.

ಆ ಶಿವನ ಮೂರು ಕಣ್ಣುಗಳಿಂದ ಮೂರು ಪ್ರಕಾರದ ರುದ್ರಾಕ್ಷಿಗಳು ಉತ್ಪನ್ನವಾದವು. ೧) ಸೂರ್ಯ ನೇತ್ರದಿಂದ ಕಪಿಲ ವರ್ಣದ ಹನ್ನೆರಡು ಪ್ರಕಾರದ ರುದ್ರಾಕ್ಷಿಗಳು ಹುಟ್ಟಿದವು. ಚಂದ್ರ ನೇತ್ರದಿಂದ ಬಿಳಿ ಬಣ್ಣದ ೧೬ ಪ್ರಕಾರದ ರುದ್ರಾಕ್ಷಿಗಳು ಹುಟ್ಟಿದವು. ಮೂರನೆಯ ಕಣ್ಣಾದ ಅಗ್ನಿ ನೇತ್ರದಿಂದ ಕಪ್ಪು ಬಣ್ಣದ ೧೦ ಪ್ರಕಾರದ ರುದ್ರಾಕ್ಷಿಗಳು ಹುಟ್ಟಿದವು. ಈ ಪ್ರಕಾರವಾಗಿ ಉತ್ಪತ್ತಿ ಭೇದದಿಂದ ರುದ್ರಾಕ್ಷಿಗಳು ಅನೇಕ ಪ್ರಕಾರವಾಗಿ ಹೇಳಲ್ಪಟ್ಟಿವೆ. ಆದರೆ ಬಂಗಾರ ವರ್ಣಕ್ಕೆ ಸಮಾನವಾದ ಕಾಂತಿಯುಳ್ಳ; ನೆಲ್ಲಿಕಾಯಿ ಗಾತ್ರವುಳ್ಳ ಛಿದ್ರವಿಛಿದ್ರವಿಲ್ಲದ, ಅನ್ಯರಿಂದ ಧರಿಸಲ್ಪಡದೇ ಇದ್ದ ರುದ್ರಾಕ್ಷಿಗಳನ್ನೇ ಯಾವಾಗಲೂ ಶಿವ ಪೂಜಾ ನಿರತನಾದ ವೀರಶೈವನು ಧರಿಸಬೇಕು. ಇನ್ನು ಶಿವ ಜ್ಞಾನದೃಷ್ಟಿಯು ಅಂತರಂಗದಲ್ಲಿ ಆಳವಾಗಿ ಅಳವಟ್ಟ ನಂತರ "ಚಿತ್"ಎಂಬ ಶಕ್ತಿಯು ರುದ್ರಾಕ್ಷ ರೂಪ ಧಾರಣ ಮಾಡುವದು. ಇದೇ ಅಂತರಂಗದ ಚಿದ್ರುದ್ರಾಕ್ಷಿಯೆಂದು ಹೇಳಲ್ಪಡುವದು ಇದಕ್ಕೇ ಬಾಹ್ಯ ರುದ್ರಾಕ್ಷಧಾರಣದ ಅವಶ್ಯಕತೆಯಿದೆ.

ರುದ್ರಾಕ್ಷಗಳನ್ನೂ ವಿಭೂತಿಯನ್ನೂ ಧರಿಸುವದರಿಂದ ಶಿವನು ತಾನಿದ್ದ

ಲ್ಲಿಯೇ ಬರುವನೆಂದು "ರುದ್ರಾಕ್ಷಿ ಭಿಸಿತವನು ಹೊದ್ದಿಕೊಂಡಿರಲು ದೇಹದೊl ಳಿದ್ದ ಪಾಪಗಳು ಬಯಲಾಗಿ ಶಿವನು ತಾನಿದ್ದಲ್ಲಿಯೇ ಬರುವ ಸರ್ವಜ್ಞ" ಎಂಬು ದಾಗಿಯೂ ಶ್ರೀ ಸರ್ವಜ್ಞ ಮೂರ್ತಿಯು ಚನ್ನಾಗಿ ನುಡಿದಿದ್ದಾನೆ.

## ಎಂಟನೇ ಆವರಣವಾದ ಮಂತ್ರ ಮಹಿಮೆಯ ವಿಚಾರ

ಅಷ್ಟಾವರಣದಲ್ಲಿ ಮಂತ್ರಮಹಿಮೆಯೇ ಕೊನೆಯದಾಗಿದೆ. ಮಂತ್ರಗಳು ಅನೇಕವಾಗಿಯೂ, ಅಗಣಿತವಾಗಿಯೂ ಇದ್ದರೂ ಸಹ, ಅವೆಲ್ಲವುಗಳಲ್ಲಿ ಪಂಚಾ ಕ್ಷರೀ ಮಹಾ ಮಂತ್ರವೇ ಶ್ರೇಷ್ಠವಾದುದೆಂದು ವೇದಾಗಮ-ಉಪನಿಷತ್ತುಗಳು ಪ್ರತಿಪಾದಿಸಲ್ಪಡುತ್ತವೆ. ಶಿವತತ್ವಕ್ಕಿಂತ ಶ್ರೇಷ್ಠವಾದ ತತ್ವಗಳು ಹೇಗಿಲ್ಲವೋ ಹಾಗೆ ಪಂಚಾಕ್ಷರೀ ಮಹಾಮಂತ್ರಕ್ಕಿಂತಲೂ ಶ್ರೇಷ್ಠವಾದ ಅನ್ಯ ಮಂತ್ರಗಳು ಯಾವೂ ಇರುವದಿಲ್ಲ. "ನಮಃ ಶಿವಾಯ" ಎಂಬುದೇ ಪಂಚಾಕ್ಷರೀ ಮಹಾ ಮಂತ್ರವು. "ಓನಮಃ ಶಿವಾಯ" ಎಂಬುದೇ ಷಡಕ್ಷರ ಮಹಾಮಂತ್ರವು. ಇದರಲ್ಲಿ ಮೂಲ ಪಂಚಾಕ್ಷರೀ, ಸ್ಥೂಲ ಪಂಚಾಕ್ಷರೀ, ಸೂಕ್ಷ್ಮ ಪಂಚಾಕ್ಷರೀ, ಪ್ರಸಾದ ಪಂಚಾಕ್ಷರೀ, ಮಾಯಾ ಪಂಚಾಕ್ಷರೀ ಹೀಗೆ ಐದು ಪ್ರಕಾರಗಳಿವೆ. ಇವುಗಳನ್ನು ಕ್ರಮವರಿತು ಜಪಿಸಬೇಕಾಗುವದು. ಈ ಸಕಲ ಚರಾ ಚರಾತ್ಮಕ ವಾದ ಜಗತ್ತು ಹೇಗೆ ಪಂಚಭೂತ ಸ್ವರೂಪವಾಗಿ ಪ್ರಕಾಶಿಸಲ್ಪಡುವದೋ ಅಂದರೆ "ಪೃಥ್ವ್ಯಾದಿ ಪಂಚತತ್ವಗಳು ಗಂಧ, ರೂಪ, ರಸ, ಸ್ಪರ್ಶ, ಶಬ್ದಗಳೆಂಬ ಪಂಚ ತನ್ಮಾತ್ರಗಳು, ೩) ಪಂಚಜ್ಞಾನೇಂದ್ರಿಯಗಳು, ೪) ಪಂಚಕರ್ಮೇಂದ್ರಿಯಗಳು, ೫) ಪಂಚಕೃತ್ಯಗಳು" ಹಾಗೆ ಪಂಚ ಅಕ್ಷರಗಳಿಂದ ಪಂಚಾಕ್ಷರೀ ಮಹಾಮಂತ್ರವು ಪ್ರಕಾಶಿಸಲ್ಪಡುವದು.

## ಮಂತ್ರೋಚ್ಚಾರ ಹಾಗೂ "ಓಂ"ಕಾರ ಉತ್ಪತ್ತಿ

"ನಮಃ" ಎಂಬ ಶಬ್ದವನ್ನು ಮೊದಲು ಉಚ್ಚರಿಸಿ ತದನಂತರ "ಶಿವಾಯ" ಎಂಬ ಶಬ್ದವನ್ನು ಉಚ್ಚರಿಸಬೇಕು. ಇದೇ ಪಂಚಾಕ್ಷರೀ ಮಹಾ ಮಂತ್ರ ವೆನಿಸುವದು. ಆ ಪರಶಿವನು "ಓಂ' ಕಾರಸ್ವರೂಪವಾಗಿರುವನು. ಆದ್ದರಿಂದ ಶಿವನು "ಸೋಹಂ" ಭಾವವುಳ್ಳವನೆಂದು ಹೇಳಲಾಗುವದು. "ಸೋಹಂ" ಎಂಬುದು ಸನಾತನವಾದ ಮಂತ್ರವಾಗಿತ್ತು. ಇದರಲ್ಲಿಯ ಸಕಾರವು ಚಂದ್ರ ಬೀಜವೆಂದೂ ಹಕಾರವು ಸೂರ್ಯಬೀಜವೆಂದೂ ಹೇಳಲ್ಪಡುತ್ತದೆ. ಆದರೆ ಈ ಸಕಾರ ಮತ್ತು ಹಕಾರಗಳು ಪೂರಕ-ಕುಂಭಕ-ರೇಚಕವೆಂಬ ಪ್ರಾಣಾಯಾಮದ

ತತ್ವ ಲಕ್ಷಣದ ಮಧ್ಯೆದಲ್ಲಿರುವ ಕುಂಭಕದಲ್ಲಿ ಲೋಪವಾಗುವದು. ಇದರಿಂದ ''ಓಂ'' ಎಂಬ ಅಕ್ಷರವು ಉತ್ಪನ್ನವಾಯಿತು. ಈ ''ಓಂ'' ಕಾರವು ನಿಷ್ಕಲಯಿ ಶಿವನೆಂದು ಹೇಳಲ್ಪಡುವದು. ಪಂಚಾಕ್ಷರ ಮಂತ್ರವು ಪಂಚಬ್ರಹ್ಮ ಸ್ವರೂಪನಾದ ಶಿವನೆಂದು ಹೇಳುವದು. ನಿಷ್ಕಲ ಶಿವನು ಶುದ್ಧಜ್ಞಾನ ಸ್ವರೂಪನಾಗಿರುವನು ಸಕಲೇಶನು ಪಂಚಸ್ವರೂಪನಾಗಿರುವನು. ಈ ಪ್ರಕಾರವಾಗಿ ಉಭಯ ಸ್ವರೂಪ ನಾದ ಆ ಪರಶಿವನು ''ಓಂ ನಮಃ ಶಿವಾಯ" ಎಂಬ ಷಡಕ್ಷರ ಮಂತ್ರದಲ್ಲಿ ಅಡಕವಾಗಿರುವನು.

ವೇದವು ''ಅಣೋ ರಣಿಯಾನ್ ಮಹತೋ ಮಹಿಯಾನ್'' ಎಂದು ಹೇಳುವರಿಂದಲೂ ಮತ್ತು ಮೇಲಿನ ವಿವರಣೆಯಿಂದಲೂ "ಓಂ" ಅಂದರೆ ಈ ಸರ್ವ ಜಗತ್ತೆಂದು ಹೇಳಲಾಗುವದು. ''ನಮಃ=ನಮಮ'' ಅಂದರೆ ನ್ನನ್ನದಲ್ಲವೆಂದೂ ''ಶಿವಾಯ'' ಎಂಬುದಕ್ಕೆ ಶಿವನಿಗೋಸ್ಕರವೆಂತಲೂ, ಹೀಗೆ ಶತಕ ತ್ರಯದಲ್ಲಿ ಶ್ರೀ ಮಗ್ಗಿ ಮಾಯದೇವರು ಅರ್ಥ ಮಾಡಿದ್ದಾರೆ. ಈ ಅರ್ಥ ವಿವರಣೆಯಿಂದ ಈ ಯಾವ ಜಗತ್ತು ಶಿವನ ಭೋಗ್ಯವಸ್ತುವಾಗಿದ್ದು, ಅದನ್ನೇ ಪುನಃ ಶಿವನಿಗೆ ಅರ್ಗಿಸಿ, ತಾನು ಆ ಪರಶಿವನ ಭೋಗೋಪಭೋಗಿಯಾಗಿರಬೇಕೆಂದು ಅರ್ಥ ಬೋಧಕವಾಗುತ್ತದೆ. ಇದರಿಂದ ಓಂಕಾರವೆಂಬುದು ಪಂಚಾಕ್ಷರೀ ಮಂತ್ರದ ಬೀಜವಾಗಿರುವದೆಂದು ಹೇಳಲಾಗುವದು ಕಾರಣ ಓಂ ಎಂಬುದು ಮೊದಲು ಉಚ್ಚರಿಸಿ ನಮಃ ಶಿವಾಯಃ ಎಂಬುದನ್ನು ನಂತರ (ಓಂ ನಮಃ ಶಿವಾಯಎಂದು) ಉಚ್ಚರಿಸಬೇಕು.

ಮೇಲಿನ ಅರ್ಥ ವಿವರಣೆಯಿಂದ ನಿಷ್ಕಲ ಶಿವನು ನಿಷ್ಕಲ ಲಿಂಗವೆಂದು ಹೇಳಲಾಗುದದು. ಸಕಲೇಶನು ಸಕಲಲಿಂಗವೆಂದು ಹೇಳಲಾಗುವದು. ಆದ್ದರಿಂದ ''ಓಂ'' ಎಂಬ ನಿಷ್ಕಲಲಿಂಗವು ಭಾವಲಿಂಗ ಸೂಚಕವಾಗಿದೆ. "ನಮಃ ಶಿವಾಯ" ಎಂಬ ಸಕಲ ಲಿಂಗವು ಇಷ್ಟಲಿಂಗ ಸೂಚಕವಾಗಿದೆ. ಓಂನಮಃ ಶಿವಾಯ ಎಂಬುದೂ ಪ್ರಾಣಲಿಂಗ ಸೂಚಕವಾಗಿದೆ. ಹೀಗೆ ಮಂತ್ರದಲ್ಲಿ ಲಿಂಗ ತ್ರಯ ಅರ್ಥವೂ ಅಡಕವಾಗಿದೆ. ಈ ಪ್ರಕಾರವಾಗಿ ''ಓಂ ನಮಃ ಶಿವಾಯ" ಎಂಬ ಮಂತ್ರದ ಅರ್ಥವಾಗಿದ್ದು ಈ ಪಂಚಾಕ್ಷರೀ ಮಂತ್ರದಲ್ಲಿ ಮೂಲ ಪಂಚಾಕ್ಷರೀ, ಸ್ಥೂಲ ಪಂಚಾಕ್ಷರೀ, ಸೂಕ್ಷ್ಮ ಪಂಚಾಕ್ಷರೀ, ಪ್ರಸಾದ ಪಂಚಾಕ್ಷರೀ, ಮಾಯಾ ಪಂಚಾಕ್ಷರೀ ಎಂದು ಹೀಗೆ ಐದು ಪ್ರಕಾರಗಳಿವೆ. ಆದರೆ ಬಹಿರಂಗ ಲಿಂಗವೇ ಅಂತರ ಲಿಂಗದ ಅನುಭವವಾಗಿ ಪರಿಣಮಿಸುವಂತೆ ಬಹಿರಂಗದ ಮಂತ್ರವೇ ಅಂತರಂಗ ಮಂತ್ರವಾಗಿ ಪರಿಣಮಿಸುವದು. ಆದ್ದರಿಂದ ಗುರುವು ದೀಕ್ಷಾಕಾಲದಲ್ಲಿ ಮಾಂಸಮಯ ಶರೀರವನ್ನಳಿದು ಮಂತ್ರಮಯ ಶರೀರವನ್ನಾಗಿ ಮಾಡುವನು.

ಇನ್ನು ಜಪಲಕ್ಷಣ–ಜಪೋಚ್ಚಾರಗಳನ್ನು ಮುಂದೆ ವೀರಶೈವ ಆಚಾರ ಪ್ರಕರಣದಲ್ಲಿ ಹೇಳಲಾಗಿದೆ. ( ಅಲ್ಲಿ ನೋಡಬೇಕು ) ಆದರೆ ಪಂಚಾಕ್ಷರೀ ಮಹಾಮಂತ್ರವನ್ನು ಲಿಂಗಪೂಜೆಯ ನಂತರ ಏಕಾಗ್ರಚಿತ್ತದಿಂದ ಒಂದುಸಾವಿರ ಅಥವಾ ಐದು ನೂರು, ಇಲ್ಲವೆ ಎರಡು ನೂರಾಐವತ್ತು, ಅಥವಾ ನೂರೆಂಟು ಇಲ್ಲವೆ ಸಾವಿರದಾ ಎಂಟು ಸಾರೆ ಜಪಿಸಬೇಕ. ಹೀಗೆ ಭಕ್ತಿಯಿಂದ ಜಪಮಾಡು ವದರಿಂದ ಶಿವಸಾಯುಜ್ಯ ಪದವಿಯನ್ನು ಹೊಂದುತ್ತಾನೆ.

## ಪಂಚಾಕ್ಷರೀ ಮಂತ್ರದ ಮಹತ್ವ

ಈ ಪಂಚಾಕ್ಷರೀ ಮಹಾಮಂತ್ರದ ಮಹಿಮೆಯನ್ನು ಎಷ್ಟು ವರ್ಣಿಸಿದರೂ ಅಲ್ಪವೆಂದು ಹೆಳಬಹುದು. ಸಪ್ತ ಕೋಟಿ ಮಹಾ ಮಂತ್ರಗಳಲ್ಲಿಯೂ, ಅಗ ಣಿತ ಉಪಮಂತ್ರಗಳಲ್ಲಿಯೂ, ಪಂಚಾಕ್ಷರೀ ಮಹಾಮಂತ್ರವೇ ಅತ್ಯಂತ ಶ್ರೇಷ್ಠ ವಾದುದೆಂದು ವೇದಾಗಮಗಳೂ–ಉಪನಿಷತ್ತುಗಳೂ ಪ್ರತಿಪಾದಿಸಲ್ಪಡುತ್ತವೆ.

ಮಮಪಂಚಾಕ್ಷರೀ ಮಂತ್ರಂ ಪಾಠ ಮಾತ್ರೇಣ ಸಿದ್ಧಿದಮ್ ।
ಸರ್ವಲೋಕವಶೀಕಾರಂ ಸೌಭಾಗ್ಯಂ ಜ್ಞಾನ ವರ್ಧನಮ್ ॥

ಎಂಬಂತೆ ಪಂಚಾಕ್ಷರಿಯ ಮಂತ್ರ ಪಠಣ ಮಾತ್ರದಿಂದಲೇ ಮಹಾಸಿದ್ಧಿ ಯಾಗುವದು. ಸರ್ವ ಲೋಕವು ವಶೀಕರಣವಾಗುವದು. ಸೌಭಾಗ್ಯ–ಐಶ್ವ ರ್ಯಗಳು ಅಭಿವೃದ್ಧಿ ಹೊಂದುವವು. ಸುಜ್ಞಾನವು ವಿಕಾಸಗೊಳ್ಳುವದು. ಈ ಪ್ರಕಾರವಾಗಿ ಶಿವರಹಸ್ಯವು ಹೆಳುತ್ತದೆ. ಮತ್ತು ಈ ಚತುರ್ದಶ ಭುವನಗಳೂ ಮೂವತ್ತುಮೂರುಕೋಟಿ ದೇವತೆಗಳೂ ಅನೇಕ ಮಹರ್ಷಿಗಳ ಧರ್ಮವೂ, ನಾಲ್ಕು ವೇದಗಳೂ, ಪಂಚಾಕ್ಷರ ಮಂತ್ರ ಸಾಮರ್ಥ್ಯದಿಂದಲೇ ಇಂದಿಗೂ ವಿರಾಜಮಾನವಾಗಿವೆ. ಹಾಗೂ ಈ ಮಂತ್ರ ಫಲದ ಕೋಟ್ಯಾಂಶದೊಳಗಿನ ಒಂದಂಶ ಫಲಕ್ಕೂ ಅನೇಕ ಯಜ್ಞ–ಜಪಗಳ ಫಲವು ಸರಿಯಾಗಲಾರದು. ಅಗ್ರಜನಾಗಲೀ, ಅಂತ್ಯಜನಾಗಲೀ, ಮೂರ್ಖನಾಗಲೀ, ಪಂಡಿತನಾಗಲೀ ಯಾರೇ ಆಗಲಿ ಪಂಚಾಕ್ಷರೀ ಮಹಾಮಂತ್ರವನ್ನು ಭಕ್ತಿಯಿಂದ ಜಪಿಸಿದರೆ ಕೋಟಿ ಮಹಾ ಪಾತಕಗಳೂ ನಾಶವಾಗಿ ಶಿವಜ್ಞಾನವು ಸಿದ್ಧಿಯಾಗಿ ಶಿವಸಾ ಯುಜ್ಯವು ಪ್ರಾಪ್ತಿಯಾಗುವದೆಂದು ಲಿಂಗಪುರಾಣವೂ ವಶಿಷ್ಠ, ವಾಮದೇವ ಮೊದಲಾದ ಸಪ್ತರ್ಷಿಗಳಿಗೆ ಹಿರಿದ ಪಾಪಗಳೆಲ್ಲವೂ ನಾಶವಾದವುಗಳಲ್ಲದೆ, ಬ್ರಹ್ಮ, ವಿಷ್ಣು ಮೊದಲಾದವರಿಗೆ ಸೃಷ್ಟಿ ರಕ್ಷಣೆಯ ಆಧಿಪತ್ಯವು ಸಾಧ್ಯವಾಯಿ ತೆಂದು ಬ್ರಹ್ಮಾಂಡ ಪುರಾಣ ವಿಷ್ಣುಪುರಾಣ ಹಾಗೂ ಕೂರ್ಮ ಪುರಾಣಗಳು ಹೇಳುತ್ತವೆ. ಮತ್ತು ಇದೇ ವಿಷಯವನ್ನು ಸಿದ್ಧಾಂತ ಶಿಖಾಮಣಿಯಲ್ಲೂ ಪ್ರತಿಪಾದಿಸಲ್ಪಟ್ಟಿದೆ.



# ದ್ವಿತೀಯ-ರತ್ನ

## ಪಂಚಾಚಾರಗಳ-ವಿಚಾರ

### ೧ ಲಿಂಗಾಚಾರ

ಪಂಚಾಚಾರಗಳಲ್ಲಿ ಲಿಂಗಾಚಾರವೇ ಮೊದಲನೆಯದಾಗಿದೆ. ಈ ಲಿಂಗಾಚಾರದ ಅರ್ಥವು ಬಹು ತಾತ್ವಿಕವೂ ನಿತ್ಯ ಸಂಬಂಧವೂ ಆಗಿದೆ, ಅಂಗನು ಲಿಂಗಸ್ವರೂಪನಾಗುವದಕ್ಕೆ ಬೇಕಾಗುವ ಯೋಗ್ಯ ಆಚಾರವೇ ಲಿಂಗಾಚಾರವೆಂದು ಹೇಳಲ್ಪಡುವದು. ಅಂಗವು ಮೊದಲು ದೀಕ್ಷೆಯ ಸಂಸ್ಕಾರದಿಂದ ಪರಿಶುದ್ಧವಾಗಬೇಕು. ನಂತರ ಆ ಅಂಗವು ಲಿಂಗಮಯವಾಗುವದಕ್ಕೆ ಲಿಂಗಪೂಜೆ ಲಿಂಗಧ್ಯಾನ ಮೊದಲಾದವುಗಳಿಂದ ಸದಾ ಲಿಂಗದಲ್ಲಿ ಭಕ್ತಿ ತತ್ಪರನಾಗಿ, ಲಿಂಗದ ಹೊರ್ತಾಗಿ ಅನ್ಯ ದೇವರನ್ನು ಪೂಜಿಸದೆ, ಭಜಿಸದೆ "ಲಿಂಗಪತಿ ಅಂಗಸತಿ" ಎಂಬ ಸದ್ಭಾವನೆಯಿಂದ ಲಿಂಗದ ಗುಣಗಳನ್ನು ಅಂಗನು ತನ್ನಲ್ಲಿ ಅಳವಡಿಸಿಕೊಳ್ಳುವದೇ **ಲಿಂಗಾಚಾರದ ಮುಖ್ಯ ಧ್ಯೇಯವಾಗಿದೆ.** ಮತ್ತು ಶಿವನಸ್ವರೂಪಿಗಳಾದ ಗುರು-ಜಂಗಮರ ಹೊರತಾಗಿ ಏನನ್ನೂ ಪೂಜಿಸದೆ ಅವರಲ್ಲಿ ಪೂಜ್ಯ ಭಕ್ತಿಯನ್ನಿಟ್ಟು ನಡೆಯಬೇಕು ಈ ಸದ್ಗುಣಗಳನ್ನುಂಟುಮಾಡುವದೇ ಲಿಂಗಾಚಾರದ ಮುಖ್ಯ ಪ್ರಯೋಜನವೆಂದು ಹೇಳಲಾಗುವದು. ಲಿಂಗಾಚಾರವು ನೀತಿಮಯವಾಗಿದ್ದರೇ ಮೇಲಿನ ಸದ್ಗುಣಗಳು ಉಂಟಾಗುತ್ತವೆ ಲಿಂಗದ ಹೊರ್ತಾಗಿ ಅನ್ಯ ದೇವರನ್ನು ಪೂಜಿಸಬಾರದೆಂಬ ನೀತಿಯೇ ಇಲ್ಲಿ ಪ್ರಾಧಾನ್ಯವಾಗಿರುವದು. ಆದ್ದರಿಂದಲೇ ಶ್ರೀ ಬಸವಣ್ಣನವರು ಹೀಗೆ ನುಡಿದಿದ್ದಾರೆ:—

ನಂಬಿದ ಹೆಂಡತಿಗೆ ಗಂಡನೊಬ್ಬನೇ ಕಾಣಿರೋ।
ನಂಬಬಲ್ಲ ಬಕ್ತಂಗೆ ದೇವನೊಬ್ಬನೇ ಕಾಣಿರೋ।
ಬೇಡ ಬೇಡ ಅನ್ಯ ದೈವದ ಸಂಗ ಹೊಲ್ಲ।
ಅನ್ಯದೈವವೆಂಬುದು ಹಾದರ ಕಾಣಿರೋ।
ಕೂಡಲ ಸಂಗಮ ದೇವರು ಕಂಡರೆ ಮೂಗ ಕೊಯ್ಯುವ ಕಾಣಿರೋ॥

ಹೀಗೆ ಶ್ರೀ ಬಸವಣ್ಣನವರೂ ಸಹ ಬೋಧಿಸಿರುವರು. ಇದೇ ಲಿಂಗಾಚಾರದ ಮುಖ್ಯ ನಡತೆಯಾಗಿದೆ.

  

### ೨ ಸದಾಚಾರ

ಪಂಚಾಚಾರಗಳಲ್ಲಿ ಸದಾಚಾರವು ಎರಡನೆಯದಾಗಿದೆ. 'ಲಿಂಗಾಚಾರಕ್ಕಿಂತಲೂ ಸದಾಚಾರವು ಬಹು ಮುಖ್ಯವಾಗಿಯೂ, ನೀತಿ ಪ್ರಾಧಾನ್ಯವಾಗಿಯೂ ಇರುವದು,

"ಯೇನ ಮಾರ್ಗೇಣ ಸರ್ವೋsಪಿ ಸಜ್ಜನ ಶಿವಭಕ್ತಿ ಮಾನ್।
ತೋsಸ್ಯತಿಸ್ತುತ್ಯತಿ ಪ್ರೀತ್ಯಾ ಸದಾಚಾರಃ ಸಉಚ್ಯತೇ"ಎಂಬ ಲಿಂಗಪುರಾಣೋಕ್ತಿಯಂತೆ ಲಿಂಗದ ಗುಣಗಳನ್ನು ತನ್ನಲ್ಲಿ ಅಳವಡಿಸಿಕೊಂಡು ಷಟ್ ಸ್ಥಲ ಸಂಪನ್ನರಾದ ಸದ್ಭಕ್ತರು ಒಪ್ಪುವಂತೆ ಹಾಗೂ ಸ್ತುತಿಸುವಂತೆ ಆಚರಿಸುವ ಮಾರ್ಗವೇ ಸದಾಚಾರವೆಂದು ಹೇಳಲ್ಪಡುವದು. ಇದು ಬಹು ವ್ಯಾಪಕವಾಗಿಯೂ, ವಿಶಾಲವಾಗಿ ಬೆಳೆಯುತ್ತ ಹೋಗುವದೇ ಈ ಸದಾಚಾರದ ಪ್ರಯೋಜನವಾಗಿದೆ. ಯಾಕಂದರೆ ಅಂಗನು ನಿಜಕಾಯಕವನ್ನು ಮಾಡಿ ಸತ್ಯತನದಿಂದ ಸಂಪಾದಿಸಿದ ಧನ-ಕನಕಾದಿಗಳನ್ನು ಗುರು ಲಿಂಗ ಜಂಗಮಕ್ಕೆ ದಾಸೋಹಂ ಭಾವದಿಂದ ಸಮರ್ಪಿಸಬೇಕು. ಮತ್ತು ಆ ಧನ ಕನಕಾದಿಗಳನ್ನು ದಾನಧರ್ಮ ಮೊದಲಾದ ಒಳ್ಳೇ ಯೋಗ್ಯ ಕಾರ್ಯಗಳಲ್ಲಿ ಸದ್ವಿನಿಯೋಗ ಮಾಡಬೇಕು. ತನ್ನಂತೆ ಪರರಿಗೆ ಸುಖ ದುಃಖಗಳುಂಟಾಗುತ್ತವೆಂದು ತಿಳಿದು ಅನ್ಯವಸ್ತು ಮತ್ತು ಪರದ್ರವ್ಯ ಅಪಹರಿಸದೆ ಪರರಿಗೆ ಹಿತವಾಗುವಂತೆಯೂ, ಅವರ ಆತ್ಮೋನ್ನತಿಗೆ ಮಾರ್ಗದರ್ಶಕವಾಗುವಂತೆಯೂ, ಅಂತರಂಗ ಹಾಗೂ ಬಹಿರಂಗದಲ್ಲಿ ಭಿನ್ನ ಭೇದವನ್ನು ಮಾಡದೆ ಸತ್ಯ ಮಾರ್ಗದಿಂದಲೂ ನಡೆಯಬೇಕು. ಆದರೆ ಲಿಂಗಾಚಾರವು ಕೇವಲ ಲಿಂಗಾಚಾರಿಯ ವೈಯಕ್ತಿಕ ಆತ್ಮೋನ್ನತಿಗೆ ಸಾಧನವಾಗಿರುವಂತೆ ಈ ಸದಾಚಾರವು ಮಾತ್ರ ತನ್ನ ವ್ಯಕ್ತಿತ್ವ ಮಾತ್ರಕ್ಕೆ ಇರದೆ ತನ್ನ ಸಂತತಿಯ ಅಭಿವೃದ್ಧಿಗೋಸ್ಕರವಾಗಿಯೂ, ಸಮಾಜಕ್ಕೋಸ್ಕರವಾಗಿಯೂ, ಸಮಾಜದ ಮುಖಾಂತರವಾಗಿ ದೇಶದ ಸಲವಾಗಿಯೂ ಹಿತಾಭಿವೃದ್ಧಿಯ ಸಾಧನವಾಗಿ ಪರೋಪಕಾರದಿಂದ ವರ್ತಿಸುವದೇ **ಸದಾಚಾರದ** ಲಕ್ಷಣವಾಗಿದೆ.



## ೩. ಶಿವಾಚಾರ

ಪಂಚಾಚಾರಗಳಲ್ಲಿ ಶಿವಾಚಾರವು ಮೂರನೆಯದಾಗಿದೆ. ಲಿಂಗಾಚಾರಿಯಾದ ಮತ್ತು ಸದಾಚಾರಿಯಾದ ವೀರಶೈವನು ಕೇವಲ ತನ್ನೊಬ್ಬನನ್ನೇ ಶಿವಸ್ವರೂಪವೆಂದು ಭಾವಿಸದೆ, ತನ್ನಂತೆ ವೀರಶೈವರೆಲ್ಲರೂ ಶಿವ ಸ್ವರೂಪರೆಂದು ತಿಳಿದು ವಯಸ್ಸು ಹಾಗೂ ಲಿಂಗಾದಿ ಭೇದವನ್ನು ನೋಡದೆ ಮತ್ತು ಮೇಲು-ಕೀಳೆಂಬ ಭಾವನೆಯನ್ನು ತಾಳದೇ ವ್ಯಾಪಾರ-ಉದ್ಯೋಗ ಮುಂತಾದ ಯಾವದೇ ಜೀವನ ವೃತ್ತಿಯನ್ನು ವಿಚಾರಿಸದೇ, ಕೇವಲ ಅವರವರ ಆಚಾರ-ವಿಚಾರಗಳನ್ನು ಮಾತ್ರ ವಿಚಾರಿಸಿ (ಸದಾಚಾರ ಶೀಲನೂ ಶಿವಭಕ್ತಿ ಸಂಪನ್ನನೂ ಆಗಿದ್ದರೆ) ಅಂಥ ವೀರಶೈವನ ಒಳಪಂಗಡವನ್ನು ಲೆಕ್ಕಿಸದೆ, ಭಿನ್ನ ಭೇದ ಬುದ್ಧಿಯಿಂದ ವರ್ತಿಸದೆ ಆಚರಿಸುವದೇ **ಶಿವಾಚಾರವು.** ಈ ಶಿವಾಚಾರಕ್ಕೆ ತನ್ನ ವೀರಶೈವ ಮತವಷ್ಟೇ ಪಾರಿಮಾರ್ಜಿತವಾಗಿರಬಾರದು. ಆದರೆ ಇತರೇ ಧರ್ಮದ ಮಹಾನುಭಾವಿಗಳೂ ಶಿವ ಸ್ವರೂಪವೆಂದೇ ತಿಳಿದು ವಿಧಾಯಕವಾಗಿ ಸರ್ವರನ್ನೂ ಈ ಸರ್ವ

ಜಗತ್ತು ಲಿಂಗಮಯವಾಗಿರುವದೆಂಬ ವಿಶಾಲ ಭಾವನೆಗೆ ಕರೆತಂದು ವಿಶ್ವಬಾಂಧವ್ಯವನ್ನುಂಟುಮಾಡುವದೇ **ಶಿವಾಚಾರದ** ಮುಖ್ಯ ಲಕ್ಷಣವಾಗಿದೆ.

ಭಕ್ತರ ಕುಲವನ್ನು ಆರಿಸದೆ ಅಂಗದ ಮೇಲೆ ಲಿಂಗವಿದ್ದ ಶಿವಭಕ್ತನೇ ಶಿವಸ್ವರೂಪವೆಂದು ಭಾವಿಸಿ ಅವರವರ ಮನೆಗಳಲ್ಲಿ ಭಿನ್ನಭೇದವಿಲ್ಲದೆ ಏಕ ಬಳಿಕೆಯಿಂದ ಊಟೋಪಚಾರಾದಿಗಳನ್ನು ಮಾಡುತ್ತ ವರ್ತಿಸುವದೇ ಶಿವಾಚಾರವೆಂದು ಶ್ರೀ ಬಸವಣ್ಣವರು ನುಡಿದಿದ್ದಾರೆ. ಆದ್ದರಿಂದ:- "ದೇವ ಸಹಿತ ಭಕ್ತ ಮನೆಗೆ ಬಂದರೆ ಕಾಯಕವಾವುದೆಂದು ಬೆಸಗೊಂಡನಾದೊಡೆ ನಿಮ್ಮಾಣೆ ನಿಮ್ಮ ಪುರಾತನರಾಣೆ| ತಲೆದಂಡ ತಲೆದಂಡ ಕೂಡಲಸಂಗಮದೇವಾ ಭಕ್ತರಲ್ಲಿ ಕುಲವನಾರಿಸಿದರೆ ನಿಮ್ಮ ರಾಣೀವಾಸದಾಣೆ" ಎಂದು ಶ್ರೀ ಬಸವಣ್ಣನವರು ನಿರೂಪಿಸಿದ್ದಾರೆ.

## ೪. ಗಣಾಚಾರ

ಶಿವಭಕ್ತ ಪ್ರತೀನಿಂದಾ ನ ಶ್ರಾವ್ಯಾಶ್ರೂಯತೇಯದಿ ।
ನಿಂದಕಾ ನ್ನಿ ಕ್ಷಯಾ ಮೀತಿ ಗಣಾಚಾರೋಽಯ ಮೀರಿತಮ್ ॥

ಎಂಬಂತೆ ಶಿವಭಕ್ತರ ನಿಂದೆ ಹಾಗೂ, ವೀರ ಮಾಹೇಶ್ವರರ, ಸದ್ದೈವಂಗಳ ನಿಂದೆಯನ್ನು ಯಾರು ಮಾಡುವರೋ ಅಂಥವರ ಸಂಗವನ್ನು ತ್ಯಾಗಮಾಡಬೇಕಲ್ಲದೆ ಆ ನಿಂದೆಯನ್ನು ಕಿವಿಯಿಂದ ಸದ್ಭಕ್ತರು ಕೇಳಲಾಗದು. ಒಂದು ವೇಳೆ ಯಾವದೇ ರೀತಿಯಿಂದ ನಿಂದೆಯನ್ನು ಕೇಳಿದರೆ ಅದನ್ನು ತಿರಸ್ಕರಿಸಿ ನಿಂದಕರಿಗೆ ಶಿಕ್ಷಿಸುವದೇ **ಗಣಾಚಾರದ** ಲಕ್ಷಣವೆಂದು ಹೇಳಲ್ಪಡುವದು.

ನಿಂದಕರ ಸಂಗವನ್ನು ತ್ಯಾಗಮಾಡಿದ ನಂತರ ಅವರನ್ನು ಪುನಃ ದಂಡಿಸಬೇಕಾದುದೇತಕ್ಕೆ? ಅಥವಾ ಅವರನ್ನು ದಂಡಿಸಿದರೆ ಶಿವಭಕ್ತರಲ್ಲಿ ಆಚಾರವು ಹೇಗೆ ಉಳಿಯುವದೆಂಬ ಪ್ರಶ್ನೆಗಳು ಇಲ್ಲಿ ಉತ್ಪನ್ನವಾಗುತ್ತವೆ.

ವೀರಶೈವ ಧರ್ಮದಲ್ಲಿ ವೀರಶೈವನು ಶಿವಾಚಾರಿಯಾಗಿ ಕೇವಲ ತನ್ನ ವೈಯಕ್ತಿಕ ಆತ್ಮೋನ್ನತಿಯನ್ನು ಮಾಡಿಕೊಳ್ಳದೇ ತನ್ನವರನ್ನೂ ಹಾಗೂ ತನ್ನ ಸಮಾಜದವರನ್ನೂ ಮತ್ತು ಸಮಸ್ತ ಮಾನವ ಜನಾಂಗವನ್ನೂ ಸಹ ತನ್ನಂತೆ ಶಿವಸ್ವರೂಪವೆಂದು ಭಾವಿಸಿ ಅವರೆಲ್ಲರನ್ನೂ ವಿಧಾಯಕವಾಗಿ ಈ ನಶ್ವರ ಜಗತ್ತು ಲಿಂಗಮಯವೆಂಬ ವಿಶಾಲ ತತ್ವಕ್ಕೆ ಕರೆತಂದು ಅವರ ಆತ್ಮೋನ್ನತಿಗೆ ಮಾರ್ಗದರ್ಶನ ಮಾಡಿ ಅವರಲ್ಲಿ ಪರಸ್ಪರ ವಿಶ್ವ ಬಾಂಧವ್ಯವನ್ನು ಸ್ಥಾಪಿಸಬೇಕೆಂದು ಹೇಳಿರುವದು. ಇಂಥ ಯಾವ ವಿಶಾಲ ಭಾವನೆಗೆ ಕರೆತರಬೇಕಾದರೆ ಗಣಾಚಾರ ದ್ರೋಹಿಗಳಿಗೆ ದಂಡನೆ ಮಾಡುವದು ಅವರ ವೈಯಕ್ತಿಕ ಶರೀರ ನಷ್ಟಮಾಡುವದಕ್ಕೆಂದಲ್ಲ. ಆದರೆ ಅವರಲ್ಲಿದ್ದ ವ್ಯಕ್ತಿಗತ ನಿಂದಕ ವೃತ್ತಿ ಮೊದಲಾದ ದುಷ್ಟ

ಗುಣಗಳನ್ನು ನಾಶಮಾಡಿ ಸುಗುಣಗಳನ್ನುಂಟುಮಾಡಬೇಕಾಗುವದು. ಆದ್ದರಿಂದ ಈ ನಾಲ್ಕನೆಯ ಆಚಾರದಲ್ಲಿ ಈ ಜಗತ್ತಿನ ಮಾನವ ಜನಾಂಗದಲ್ಲಿ ಲಿಂಗವಿಲ್ಲದ ಭವಿಗಳನ್ನು ಲಿಂಗವುಳ್ಳವರನ್ನಾಗಿ ಮಾಡುವದೇ ಗಣಾಚಾರವುಳ್ಳವನ ಮುಖ್ಯ ಕರ್ತವ್ಯವೆಂದು ಹೇಳಲಾಗಿದೆ. ಇಲ್ಲವಾದರೆ ಈ ಮೇಲೆ ವಿವರಿಸಿದ ವೀರಶೈವ ವಿಶಾಲ ಭಾವ ತತ್ವಕ್ಕೆ ಚ್ಯುತಿ ಬರುವದು ಆದ್ದರಿಂದ ವೈಯಕ್ತಿಕ ಗುಣ ದೋಷಗಳನ್ನು ನಿವಾರಿಸಲು ದಂಡಿಸಬೇಕಾಗುವದು. ಮಾತ್ರ ಈ ದಂಡನೆಯು ಹಿಂಸೆಯಿಂದೊಡಗೂಡದೆ ನೀತಿಮಯವಾಗಿರಬೇಕು. ಹೀಗೆ ನೀತಿಮಯವಾದ ದಂಡನೆಯಿಂದ ಶಿವ ತತ್ವಕ್ಕೆ ಯಾವ ಬಾಧೆಯುಂಟಾಗಲಾರದೆಂದು ಭಾವಿಸಬೇಕು.

## ೫. ಭೃತ್ಯಾಚಾರ

ಪಂಚಾಚಾರಗಳಲ್ಲಿ ಐದನೆಯದಾದ ಭೃತ್ಯಾಚಾರವೇ ಕೊನೆಯದಾಗಿದೆ. ವೀರಶೈವ ಧರ್ಮದಲ್ಲಿ ಅಹಂ ಭಾವನೆಯು ತಲೆದೋರಬಾರದೆಂಬ ಸದುದ್ದೇಶದಿಂದಲೂ ಸರ್ವರಲ್ಲಿಯೂ ಸೇವಾಬುದ್ಧಿಯು ಉತ್ಪನ್ನವಾಗಬೇಕೆಂದಲೂ ಈ **ಭೃತ್ಯಾಚಾರವು** ಹೇಳಲ್ಪಡುತ್ತದೆ. "ಭೃತ್ಯ"ಅಂದರೆ ಇದರ ಅರ್ಥವುಸೇವಕನೆಂದು ಹೇಳಲಾಗುವದು. ''ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ" ಎಂದು ಶ್ರೀ ಬಸವಣ್ಣನವರು ತಮ್ಮ ವಚನದಲ್ಲಿ ಇದಕ್ಕೆ ಆದರ್ಶಪ್ರಾಯವಾಗಿ ನುಡಿದಿದ್ದಾರೆ. ಮತ್ತು ಶಿವಭಕ್ತರೆಲ್ಲರೂ ಶಿವಸ್ವರೂಪಿಯೆಂದು ತಿಳಿದು ಮತ್ತು ಶಿವಭಕ್ತರ ಒಂದು ಸಣ್ಣ ಶಿಶುವೂ ಸಹ ಹಿರಿಯನೆಂದು ಭಾವಿಸಿ, ಅವರಲ್ಲಿ ನಮ್ರಭಾವನೆಯನ್ನಿಟ್ಟು ನಡೆದುಕೊಳ್ಳುವದೇ **ಭೃತ್ಯಾಚಾರವೆಂದು** ನುಡಿದಿದ್ದಾರೆ. ಆದ್ದರಿಂದ ವೀರಶೈವನು ಭಕ್ತನಾಗಲೀ, ಗುರುವಾಗಲೀ, ಜಂಗಮನಾಗಲೀ ಪ್ರತಿಯೊಂದು ವ್ಯಕ್ತಿಯೂ ಭೃತ್ಯಾಚಾರಿಯಾಗಬೇಕು. ಇದರಿಂದ ಸಮಾಜದಲ್ಲಿಯ ಮೇಲು ಕೀಳೆಂಬ ಭಾವನೆಯು ತಲೆದೋರದೆ **"ಸಮನ್ವಯ ತತ್ವವು"** ವ್ಯಾಪಕವಾಗಿ ಒಡಮೂಡುವದು. "ಕಿಂಕರತ್ವದಿಂದಲೇ ಶಂಕರತ್ವ"ವೆಂಬ ತತ್ವವು ಇದರಲ್ಲಿ ಅಡಕವಾಗಿದೆ. ಈ ವರೆಗಿನ ಎಲ್ಲ ಪಂಚಾರಗಳ ವಿಚಾರದಿಂದ **ವೀರಶೈವನಿಗೆ ಪಂಚಾಚಾರವು ಪ್ರಾಣ ಸ್ವರೂಪವೆಂದು ಹೇಳಲ್ಪಡುವದು.**

## ಷಟ್ಸ್ಥಲಗಳ-ತತ್ವವಿಚಾರ

ವೀರಶೈವ ಮತದ ಮುಖ್ಯ ತತ್ವಗಳೇ ಷಟಸ್ಥಲಗಳಾಗಿವೆ. ಈ ಷಟಸ್ಥಲಗಳಲ್ಲಿ ಭಕ್ತಿ ಸ್ಥಲವೇ ಮೊದಲನೆಯದಾಗಿದೆ- ಭಕ್ತಿ ಸ್ಥಲದ ಒಂದು ವಿಶಿಷ್ಟವಾದ ಆಚರಣೆಯಿಂದ ಮಹೇಶ್ವರ ಸ್ಥಲವಾಗುವದು. ಈ ಮಹೇಶ್ವರ ಸ್ಥಲವೇ ನಿರ್ಮಲ

ವಾದ ಮನಸ್ಸಿನ ಸಂಬಂಧದಿಂದ ಪ್ರಸಾದಿಸ್ಥಲವಾಗುವದು. ಈ ಪ್ರಸಾದಿಸ್ಥಲವೇ ಜ್ಞಾನಯೋಗದಿಂದ ಪ್ರಾಣಲಿಂಗಿ ಸ್ಥಲವಾಗುವದು. ಈ ಪ್ರಾಣಲಿಂಗಿ ಸ್ಥಲವೇ "ಶರಣ ಸತಿ-ಲಿಂಗಪತಿ" ಎಂಬ ಭಾವದಿಂದ ಲಿಂಗಾಂಗ ಸಾಮರಸ್ಯ ಸೌಖ್ಯವನ್ನು ಅನುಭವಿಸುತ್ತ ಬಾಹ್ಯಪ್ರಪಂಚ ವ್ಯಾಪಾರವನ್ನು ಮರೆಯುವದರಿಂದ ಶರಣಸ್ಥಲ ವಾಗುವದು. ಈಶರಣಸ್ಥಲವೇ ಶಿವಲಿಂಗದಲ್ಲಿ ಐಕ್ಯವನ್ನು ಹೊಂದಿಭಿನ್ನಭಾವವನ್ನಳಿಯುವದರಿಂದ ಐಕ್ಯಸ್ಥಲವಾಗುವದು ಹೀಗೆ ಷಟ್‌ಸ್ಥಲಗಳ ತತ್ವವನ್ನು ಪ್ರತಿಪಾದಿಸುತ್ತಿರುವಾಗವೀರಶೈವ ಶಿದ್ಧಾಂತತ್ವವು ಈಜೀವಜಗತ್ತುಗಳು ಸುಳ್ಳೆಂದು ಹೇಳವದಿಲ್ಲ. ದೇಹ-ಭೋಗ-ಮತ್ತು ವೃತ್ತಿ ಇವುಗಳನ್ನು ತುಚ್ಛವಮಾಡುವದಿಲ್ಲ. ಮತ್ತು ದುಃಖಪ್ರದವೆಂದೂ ಹೇಳುವದಿಲ್ಲ. ಆದರೆ ಈ ಜಗತ್ತು ಲಿಂಗರೂಪವಾಗಿರುವದೆಂದೂ, ಲಿಂಗವು ಶಿವಸ್ವರೂಪವಾಗಿರುವದೆಂದೂ, ಶಿವನು ಈ ಜಗತ್ತಿನಲ್ಲಿಯ ಸಣ್ಣ ದೊಡ್ಡ ಪ್ರತಿಯೊಂದು ವಸ್ತುವಿನಲ್ಲಿ ವ್ಯಾಪಕವಾಗಿದ್ದಾನೆಂದೂ, "ಅಣೋರಣಿಯಾನ್ ಮಹಿತೋ ಮಹಿಯಾನ್" ಎಂದು ವೇದವೂ ಸಹ ಹೇಳುತ್ತದೆ. ಆದ್ದರಿಂದ ಈ ಷಟ್‌ಸ್ಥಲ ತತ್ವಗಳೇ ಜೀವನು ಶಿವನಾಗುವದಕ್ಕೆ ದಿವ್ಯ ಸಾಧನಗಳೆಂದು ಹೇಳಲಾಗುವದು.

ಕನ್ನಡಿಯಲ್ಲಿ ತನ್ನ ದೇಹದ ಸೌಂದರ್ಯ-ಲಾವಣ್ಯ ವಿಲಾಸಗಳು ಹೇಗಿರುತ್ತವೆಂದು ನೋಡುವ ಉದ್ದೇಶವಾಗಿ ಕನ್ನಡಿಯನ್ನು ಉಪಯೋಗಿಸುವಂತೆ ಲಿಂಗಾಂಗ ಸಾಮರಸ್ಯವು ಸಿದ್ಧಿಯಾಗಿರುವದೋ ಇಲ್ಲವೋ ಎಂಬುದನ್ನು ನೋಡಿಕೊಳ್ಳಲಿಕ್ಕೆ ಈ ಷಟ್‌ಸ್ಥಲಗಳು ಕನ್ನಡಿಯೋಪಾದಿಯಂತಿರುತ್ತದೆ. ಕನ್ನಡಿಯನ್ನು ನೋಡುವ ಮೊದಲು, ಕೇವಲ ಕನ್ನಡಿಯೆಂಬ ಭಾವವು ತನ್ನಲ್ಲಿರುವದು. ಆದರೆ ಕನ್ನಡಿಯಲ್ಲಿ ತನ್ನ ರೂಪವನ್ನು ನೋಡಿದ ನಂತರ ಕನ್ನಡಿಯ ಜ್ಞಾನವು ತನಗಿರದೆ ಕೇವಲ ರೂಪದಲ್ಲಿಯೇ ತನ್ನಲಕ್ಷ್ಯವು ವಿಲೀನವಾಗಿಬಿಡವಂತೆಅಂಗವು ಲಿಂಗದಲ್ಲಿ ವಿಲೀನವಾಗುವವರೆಗೆ ಮಾತ್ರ ಲಿಂಗಾರ್ಚನಾದಿ ಸರ್ವ ಬಾಹ್ಯ ಕ್ರಿಯೆಗಳಾಚರಣೆಗಳು ಯಿರುತ್ತವೆ. ಆದ್ದರಿಂದ ಈ ಷಟ್‌ಸ್ಥಲ ತತ್ವಗಳು ಮುಕ್ತಿ ಪ್ರದಾಯಕವಾಗಿವೆಂದು ಶ್ರೀ ಸರ್ವಜ್ಞಮೂರ್ತಿಯೂ ಸಹ:—

"ಷಟ್‌ಸ್ಥಲದ ಮರ್ಮವನು ಸ್ಫುಟವಾಗಿ ತಾನರಿದು।
ದಿಟವಾಗಿ ನಂಬಿ ನಡೆದಿಹರೆ ಇಹದಲ್ಲಿ।
ಘಟಿಸುವದು ಮುಕ್ತಿ ಸರ್ವಜ್ಞ॥

ಹೀಗೆಂದು ಬಹು ಸ್ವಾರಸ್ಯವಾಗಿಯೂ ಸಂಕ್ಷೇಪವಾಗಿಯೂ ಷಟ್‌ಸ್ಥಲದ ಮಹಿಮೆಯನ್ನು ನುಡಿದಿದ್ದಾನೆ. ಆದಕಾರಣ ಈ ಷಟ್ ಸ್ಥಲದ ತತ್ವಗಳ ವಿವರಣೆಯನ್ನು ಇಲ್ಲಿ ಸಕ್ರಮವಾಗಿ ವಿಚಾರ ಮಾಡಲಾಗುವದು.

# ೧. ಭಕ್ತಸ್ಥಲ-ತತ್ವ ವಿಚಾರ

ಈ ಭಕ್ತಸ್ಥಲವು ಷಟಸ್ಥಲಗಳಲ್ಲಿ ಮೊದಲನೆಯದಾಗಿದೆ. "ಶಿವೇಭಕ್ತಿಃ ಸಮುತ್ಪನ್ನಾ-ಯಸ್ಯಾಸೌ ಭಕ್ತ ಉಚ್ಯತೇ" ಎಂಬ ಸಿದ್ಧಾಂತ ಶಿಖಾಮಣಿ ಗ್ರಂಥ ಪ್ರಮಾಣಾನುಸಾರವಾಗಿ ಯಾವನಲ್ಲಿ ನಿಜವಾದ ಭಕ್ತಿಯುಂಟಾಗುತ್ತದೆಯೋ ಅವನೇ ಭಕ್ತನೆಂದು ಹೇಳಿಸಿಕೊಳ್ಳುತ್ತಾನೆ. "ತಸ್ಯಾನುಷ್ಠೇಯ ಧರ್ಮಾಣಾ ಮುಕ್ತಿರ್ಭಕ್ತಸ್ಥಲಂ ಮತಂ" ಎಂಬಂತೆ ಅಭಕ್ತನು ಅನುಷ್ಠಾನ ಮಾಡತಕ್ಕ ಧರ್ಮಗಳ ಉಪದೇಶವೇ ಭಕ್ತಸ್ಥಲವೆಂದು ಹೇಳಲ್ಪಡುತ್ತೆ. ಇನ್ನು "ಸ್ಥಲ" ಎಂಬ ಶಬ್ದದ ಅರ್ಥವು "ಸ್ಥೀಯತೇ ಲೀಯತೇ ಯತ್ರ ಜಗದೇತಚ್ಚರಾಚರಂ। ತದ್ಬ್ರಹ್ಮಸ್ಥಲಮಿತ್ಯುಕ್ತಂ ಸ್ಥಲತತ್ವ ವಿಶಾರದೈಃ" ಎಂಬಂತೆ ವೀರಶೈವ ಸಿದ್ಧಾಂತದಲ್ಲಿ ಆ ಪರಶಿವ ಬ್ರಹ್ಮವು ಚರಾಚರಾತ್ಮಕವಾದ ಈ ಜಗತ್ತು ಯಾವುದರಲ್ಲಿ ಉತ್ಪತ್ತಿ ಹಾಗೂ ಲಯಗಳನ್ನು ಹೊಂದುವದೋ ಅದು ಸ್ಥಲವೆಂದು ಹೇಳಲ್ಪಡುತ್ತದೆ. "ಸ್ಥಲ" ಒಂಬೀ ಶಬ್ದದಲ್ಲಿ "ಸ್ಥ" ಎಂಬ ಅಕ್ಷರದ ಅರ್ಥವು ಸ್ಥಾನಸೂಚಕವಾಗಿದೆ. "ಲ" ಎಂಬ ಅಕ್ಷರದ ಅರ್ಥವು ಲಯ ಸೂಚಕವಾಗಿದೆ. ಈ ಎರಡಕ್ಕೂ ಅಂದರೆ ಈ ಜಗತ್ತಿನ ಸ್ಥಿತಿ ಲಯಗಳಿಗೆ ಯಾವದು ಕಾರಣೀ ಭೂತವಾಗಿರುವದೋ ಅದು "ಸ್ಥಲ" ವೆಂದು ಹೇಳಲ್ಪಡುತ್ತದೆ. ಆದ್ದರಿಂದ ಸ್ಥಲವೆಂಬ ಶಬ್ದವನ್ನು ಈ ಷಟ್ ಸ್ಥಲಗಳಲ್ಲಿ ೧) ಭಕ್ತಸ್ಥಲ, ೨) ಮಾಹೇಶ್ವ ಸ್ಥಲ, ೩) ಪ್ರಸಾದ ಸ್ಥಲ, ೪) ಪ್ರಾಣಲಿಂಗಿ ಸ್ಥಲ, ೫) ಶರಣ ಸ್ಥಲ; ೬) ಐಕ್ಯ ಸ್ಥಲ ಹೀಗೆ ವಿಭಾಗ ಮಾಡಿದ ಆರೂ ಸ್ಥಲ ತತ್ವಗಳನ್ನು ಇಲ್ಲಿ ವಿವರಿಸಿ ಉಲ್ಲೇಖಿಸಲಾಗುವದು.

## ಭಕ್ತ ಸ್ಥಲ-ಲಕ್ಷಣ

ಸದಾಚಾರಃ ಶಿವೇ ಭಕ್ತಿರ್ಲಿಂಗ ಜಂಗಮ ಮೇಕಧಿಃ।
ಲಾಂಛನೇ ಶರಣೇ ಭಕ್ತಿರ್ಭಕ್ತ ಸ್ಥಲ ಮನುತ್ತಮಮ್॥

ಎಂಬಂತೆ ಸದಾಚಾರದಲ್ಲಿ ನಡೆಯುವದು ಶಿವನಲ್ಲಿ ಭಕ್ತಿಯಾಗಿರುವದು ಲಿಂಗ ಜಂಗಮನೊಂದೇಯಾಗಿ ಕಾಣುವದು ಶಿವ ಲಾಂಛನಕ್ಕೆ ವಂದಿಸುವದು ಇದೇ ಉತ್ತಮ ಭಕ್ತ ಸ್ಥಲವೆಂದು ಹೇಳಲಾಗುವದು.

ಜೀವನು (ಭಕ್ತನು) ತನ್ನ ದೇಹವೆಂಬ ದೇವಾಲಯದಲ್ಲಿ ಆ ಪರಶಿವ ಬ್ರಹ್ಮವನ್ನು ಸ್ಥಾಪಿಸಿಕೊಂಡು ಶಿವನೇ ತಾನಾಗಬೇಕೆಂದು ಶಿವಲಾಂಛನಗಳಾದ ವಿಭೂತಿ, ರುದ್ರಾಕ್ಷಿ ಮೊದಲಾದವುಗಳಿಂದ ಭಕ್ತಿಪೂರ್ವಕವಾಗಿ ಪೂಜಿಸುತ್ತ ಸದಾಚಾರಿಯಾಗಿ ಶ್ರೀ ಗುರುವಿಗೆ ಶರೀರವನ್ನೂ; ಲಿಂಗಕ್ಕೆ ಪ್ರಾಣವನ್ನೂ, ಜಂಗಮಕ್ಕೆ ಧನವನ್ನೂ ಸಮರ್ಪಿಸಿ ಆ ತ್ರಿಮೂರ್ತಿಗಳಿಂದ ಪ್ರಾಪ್ತವಾದ ಪ್ರಸಾ

ದದಿಂದ ಜನನ-ಮರಣಗಳ ಪಾಶವನ್ನು ತಪ್ಪಿಸಿಕೊಂಡು ನಿತ್ಯಾನಂದದ ಸೌಖ್ಯವನ್ನು ಹೊಂದುವದೇ **ಭಕ್ತಸ್ಥಲದ ಮುಖ್ಯ ಲಕ್ಷಣವಾಗಿದೆ.**

ಇನ್ನು ಲಿಂಗದ ಮುಖವೇ ಜಂಗಮವೆಂದು ನಿಸ್ಸಂದೇಹವಾಗಿ ಭಾವಿಸಿ ಅವರಲ್ಲಿ ಕಿರಿತನವನ್ನು ಹೊಂದಿ ನಿಜಕಾಯಕದಿಂದ ಬಂದ ಧನ ಕನಕವನ್ನು ದಾಸೋಹಂಭಾವದಿಂದ ಸಮರ್ಪಿಸಿ ಶಿವಭಕ್ತರನ್ನು ಕಂಡೊಡನೆ ಪ್ರೇಮಾದರಗಳಿಂದ ನಮಸ್ಕರಿಸುವದೇ ಭಕ್ತಿಯ ಮಾರ್ಗವೆಂದು ಶ್ರೀ ಮೊಗ್ಗೆ ಮಹಾದೇವರು ಸ್ಪಷ್ಟವಾಗಿ ಹೇಳಿದ್ದಾರೆ. ಶಿವನ ಶಕ್ತಿಯೇ ಈ ಜೀವಕ್ಕೆ ಬಂಧನಕಾರಿಯಾಗಿದೆ. ಈ ಜೀವಾತ್ಮನ ಶಕ್ತಿಯೇ ಬಂಧವಿಮೋಚಕವಾಗಿದೆ. ಇಂಥಹ ಬಂಧ ವಿಮೋಚಕ ಶಕ್ತಿಯೇ **ಭಕ್ತಿಯು.** ಭಕ್ತಿಯೇ ಮುಕ್ತಿಗೆ ಸಾಧನವು. ಇಂಥ ಯಾವ ದಿವ್ಯ ಭಕ್ತಿಯಿಂದಲೇ ಭಕ್ತನು ಗುರುವಿನ ಸೇವೆಯನ್ನು ಮಾಡಬೇಕು. ಲಿಂಗದಲ್ಲಿ ಪ್ರಾಣವನ್ನು (ಆತ್ಮನನ್ನು) ಸಮರಸವಾಗಿ ಮಾಡಬೇಕು. ಜಂಗಮನಿಗೆ ಧನ ಕನಕಾದಿಗಳನ್ನು ಅರ್ಪಿಸಬೇಕು. ಇಂಥ ಯಾವ ಭಕ್ತನಿಗೆ ಮುಕ್ತಿ ದೊರೆಯುವದು. ಆದರೆ ಅನ್ಯರಿಗೆ ವೀರಶೈವ ಸಿದ್ಧಾಂತ ಪ್ರಕಾರ ಮುಕ್ತಿಯಾಗಲಾರದು. ಅಂಥವರು ಪುನಃ ಪುನಃ ಈ ಭವಕ್ಕೆ ಬಂದು ನಿಜಸೌಖ್ಯವನ್ನು ಹೊಂದಲಾರದೆಂದು ಶ್ರೀ ಬಸವಣ್ಣನವರು ಹೇಳಿದ್ದಾರೆ:—"ಭವಬಂಧನ ಭವ ಪಾಶಗಳಾದ ಕಾರಣವೇನಯ್ಯ ಹಿಂದಣ ಜನ್ಮದಲ್ಲಿ ಲಿಂಗವ ಮರೆದೆನಾಗಿ, ಹಿಂದಣ ಸಿರಿಯಲ್ಲಿ ಜಂಗಮವಮರೆದೆನಾಗಿ ಅರಿದಡೀ ಸಂಸಾರ ಹೊದ್ದಲೀವನೆ ಕೂಡಲಸಂಗಮದೇವಾ!

## ಶಿವಭಕ್ತರಿಗಿಂತ ಹಿರಿಯರಿಲ್ಲ

ಇನ್ನು ಶಿವಭಕ್ತಗಿನಿ ಹಿರಿಯರು ಜಗತ್ತಿನಲ್ಲಿ ಯಾರೂ ಇಲ್ಲವೆಂದು ಹೇಳಿದ್ದಾರೆ. "ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ. ನಿಮ್ಮ ಪಾದ ಸಾಕ್ಷಿ ಎನ್ನ ಮನಸಾಕ್ಷಿ; ಕೂಡಲ ಸಂಗಮದೇವಾ ಎನಗೆ ಇದೇ ದಿವ್ಯ" ಆದ ಕಾರಣ ಶಿವಭಕ್ತರನ್ನು ಪ್ರೇಮಾದರಗಳಿಂದ ನಮಸ್ಕರಿಸಬೇಕು. ಇನ್ನು ಇದೇ ಸ್ಥಲದ ವಿಷಯದಲ್ಲಿ—

ತನುವನ್ನು ಗುರುವಿಂಗೆ। ಮನವನ್ನು ಲಿಂಗಕ್ಕೆ।
ಧನವನ್ನು ಜಂಗಮಕೆ ವಂಚಿಸದ ಭಕ್ತಂಗೆ।
ಅನಘಪದವಹುದು ಸರ್ವಜ್ಞ"

ಹೀಗೆಂದು ಸರ್ವಜ್ಞ ಮೂರ್ತಿಯು ಅತ್ಯುತ್ತಮವಾಗಿ ಹೇಳಿದ್ದಾನೆ.

ಗುರು ಲಿಂಗ ಜಂಗಮವ ನಂಬಿಕರೆದಡೆ ಓ ಎಂಬ ಶಿವನು
ನಂಬದೆ ಕರೆದಡೆ ಓ ಎಂಬನೇ ಶಿವನು?
ನಂಬಲರಿಯರು ನಚ್ಚಲರಿಯರು ಡಂಭಿನ ಭಕ್ತರು

ನಂಬದೆ ನಚ್ಚದೆ ಬರಿದೆ ಕರಿದಡೆ ಶಂಭು ಮೌನದಲ್ಲಿಪ್ಪ
ನಮ್ಮ ಕೂಡಲ ಸಂಗಮದೇವರು.

ಶ್ರೀ ಬಸವಣ್ಣನವರು ಹೀಗೆ ನುಡಿದಿದ್ದಾರೆ, ಮತ್ತು ಶ್ರೀ ಗುರು ಲಿಂಗ ಜಂಗಮಕ್ಕೆ ಪೂಜಾ ಅರ್ಚನಾದಿಗಳಿಂದ ದಾಸೋಹಂಭಾವದಿಂದ ನಂಬಿದರೆ ಶಿವನು ಓ ಎಂದು ಒಲಿಯುವನಲ್ಲದೆ ಭಕ್ತನು ಸಾಲೋಕ್ಯ ಸಾಮೀಪ್ಯ ಸ್ವಾರೂಪ್ಯ ಸಾಯುಜ್ಯ ಎಂಬ ಚತುರ್ವಿಧ ಪದವಿಗಳನ್ನು ಹೊಂದಿ ಧರ್ಮಾರ್ಥ. ಕಾಮ ಮೋಕ್ಷವನ್ನು ಪಡೆಯುವನು. ಅಂತೂ ಭಕ್ತನಿಗೆ ದಾಸೋಹಂಭಾವವು ತನ್ನ ಮನೆಯಲ್ಲಿಯ ಚಿಂತಾಮಣಿಯಂತೆ ಇರುತ್ತದೆ. ಮತ್ತು ಬೀಜವೃಕ್ಷ ನ್ಯಾಯ ದಂತೆ ಅಂದರೆ"ಬೀಜ ವೃಕ್ಷವ ನುಂಗಿತ್ತೋ, ವೃಕ್ಷ ಬೀಜವ ನುಂಗಿತ್ತೋ"ಎಂಬ ತತ್ವವನ್ನು ಅರಿದಾಗಲೇ ಭಕ್ತಿಸ್ಥಲ ಸಿದ್ಧಿವೆಂಬುದನ್ನು ಶ್ರೀ ಬಸವಣ್ಣನವರು ನುಡಿದಿದ್ದಾರೆ.

## ಶಿವಭಕ್ತನನ್ನು ಶಿವನು ಪರೀಕ್ಷಿಸದೇ ಮೋಕ್ಷ ಪದವಿಯನ್ನು ಕೊಡಲಾರನು

ಯಥಾ ಚತುರ್ಭಿಃ ಕನಕಂ ಪರೀಕ್ಷ್ಯತೇ ನಿಕರ್ಷಣಚ್ಛೇದನತಾಪತಾಡನೈಃ||
ಭಕ್ತಶ್ಚತುರ್ಭಿಶ್ಚ ತಥಾ ಪರೀಕ್ಷ್ಯತೇ ಶ್ರುತೇನ ಶೀಲೇನ ಗುಣೇನ ಕರ್ಮಣಾ||

ಎಂಬ ಲಿಂಗ ಪುರಾಣೋಕ್ತಿಯಂತೆ ಸುವರ್ಣ ವ್ಯಾಪಾರಿಯು ಬಂಗಾರ ವನ್ನು ಪರೀಕ್ಷೆ ಮಾಡಬೇಕಾದರೆ, ಕಡಿದು, ಕಾಶಿ, ಕುಟ್ಟಿ ಅರೆದು ಹೇಗೆ ನಾಲ್ಕು ರೀತಿಯಿಂದ ಪರೀಕ್ಷಿಸಿ ನೋಡುವನೋ ಹಾಗೆ ಶಿವನು ತನ್ನ ಭಕ್ತನನ್ನು ವಾಕ್ಕಿನಿಂದಲೂ ( ನುಡಿಯಿಂದಲೂ ) ಆಚಾರದಿಂದಲೂ ( ನಡೆಯಿಂದಲೂ ) ಗುಣ ದಿಂದಲೂ, ಕರ್ಮದಿಂದಲೂ (ಕಾಯಕದಿಂದಲೂ) ಈ ನಾಲ್ಕು ವಿಧವಾಗಿ ಪರೀಕ್ಷಿಸಿ ನೋಡುವನು. ಈ ಪರೀಕ್ಷೆಯಲ್ಲಿ ಭಕ್ತನು ಪಾಸಾದರೆ ಶಿವನು ಆತನಿಗೆ ಕೈ ಹಿಡಿದು ಎತ್ತಿಕೊಂಡು ಮೋಕ್ಷಪದವಿಯನ್ನು ಕೊಡುವನು. ಇದೇ ಅರ್ಥ ವನ್ನು ವಚನಶಾಸ್ತ್ರಕಾರರೂ ಉಲ್ಲೇಖಿಸಿದ್ದಾರೆ:—

ಹರ ತನ್ನ ಭಕ್ತರ ತಿರಿವಂತೆ ಮಾಡುವ
ಒರೆದು ನೋಡುವ ಸುವರ್ಣದಂತೆ ಅರೆದು ನೋಡುವ
ಚಂದನದಂತೆ ತೇದು ನೋಡುವ ಕಬ್ಬಿನ ಕೋಲಿನಂತೆ
ಬೆದರದೆ ಬೆಚ್ಚದೆ ಇದ್ದಡೆ ಕರವಿಡಿದೆತ್ತಿಕೊಂಬ ನಮ್ಮ ರಾಮನಾಥ ||

ಹೀಗೆ ವಚನಶಾಸ್ತ್ರ ಪ್ರಕಾರವಾಗಿ ಶಿವನು ಅನಂತ ರೀತಿಯಾಗಿ ಪರೀಕ್ಷಿಸುವನು. ಮತ್ತು ಶಿವನು ಜಂಗಮ ವೇಷಧಾರಿಯಾಗಿ ತನ್ನ ಒಂದು ಕೈಯಲ್ಲಿ ಅಮೃತವನ್ನೂ ಮತ್ತೊಂದು ಕೈಯಲ್ಲಿ ದಂಡವನ್ನೂ ಹಿಡಿದುಕೊಂಡು ತನ್ನ

ಶಿವಭಕ್ತನ ಮನೆಗೆ ಪರೀಕ್ಷಾರ್ಥವಾಗಿ ಹೋಗುವನು. ಆಗ ಭಕ್ತನು ಭಕ್ತಿ ಮಾಡಿದರೆ ಪ್ರಸನ್ನನಾಗಿ ಪ್ರಸಾದವನ್ನು ಕೊಡುವನು. ಅಪಹಾಸ್ಯವನ್ನು ಮಾಡಿದರೆ ಅಪ್ರಸನ್ನನಾಗಿ ಯಮದಂಡನೆಯನ್ನು ಕೊಡುವನೆಂದು ಶಿವರಹಸ್ಯವು ಬೋಧಿಸುತ್ತದೆ.

# ೨. ಮಾಹೇಶ್ವರ-ಸ್ಥಲ-ತತ್ವ-ವಿಚಾರ

## ಮಾಹೇಶ್ವರ-ಲಕ್ಷಣ.

ಪರಸ್ತ್ರೀಯಂ ಪರದ್ರವ್ಯಂ ವರ್ಜಿತೋ ಭಾವಶುದ್ಧಿಮಾನ್ ।
ಲಿಂಗನಿಷ್ಠಾನಿಯುಕ್ತಾತ್ಮಾ ಮಾಹೇಶ್ವರ ಮಹಾಸ್ಥಲಮ್ ॥

ಎಂಬಂತೆ ಪರಸ್ತ್ರೀ, ಪರದ್ರವ್ಯಗಳಲ್ಲಿ ಆಶೆಯನ್ನಿಡದೆ ಅವುಗಳನ್ನು ತ್ಯಾಜ್ಯ ಮಾಡಿ ಭಾವಶುದ್ಧಿಯಿಂದ ಒಳ್ಳೇ ಲಿಂಗನಿಷ್ಠೆಯುಳ್ಳವನಾಗುವದೇ ಮಹೇಶ್ವರನೆಂದು ಶಿವರಹಸ್ಯವು ಬೋಧಿಸುತ್ತದೆ. ಆದರೆ ಇದೇ ವಿಷಯವನ್ನೇ ಅಂದರೆ ಈ ಪರಧನ, ಪರಸ್ತ್ರೀ, ಪರಹಿಂಸೆ ಎಂಬವುಗಳನ್ನು ದೂರೀಕರಿಸಿ ತನ್ನ ಗುರುವು ಉಪದೇಶ ಮಾಡಿದ ೧) ಜ್ಞಾನ, ೨) ಜ್ಞೇಯ, ೩) ಅನುಷ್ಠೇಯ, ೪) ಅಧಿಕಾರ, ೫) ಸಾಧನ, ೬) ಸಾಧ್ಯವೆಂಬ ಷಟ್ಪ್ರಯೋಜನಗಳ ಸಂವಾದನೆಯಲ್ಲಿ ತಲ್ಲೀನವಾಗಿ, ಗುರುವಿನಿಂದ ಕೊಡಲ್ಪಟ್ಟ ಇಷ್ಟಲಿಂಗದ ಹೊರ್ತಾಗಿ ಬೇರೆ ಯಾವ ಕಡೆಗೂ ನಿಷ್ಠೆಯನ್ನು ಇಡದೆ ಆಚರಿಸಿ ವರ್ತಿಸುವದೇ ಮಾಹೇಶ್ವರ ಸ್ಥಲವೆಂದು ಶ್ರೀ ಮೊಗ್ಗೆಮಾಯಿದೇವರು ಪ್ರತಿಪಾದಿಸಿದ್ದಾರೆ.

## ಷಟ್ಪ್ರಯೋಜನ ವಿಚಾರ

ಇನ್ನು ೧) ಜ್ಞಾನವೆಂದರೆ ಗುರೂಪದಿಷ್ಟವಾದ ಶಿವಜ್ಞಾನವೆಂದು ತಿಳಿಯಬೇಕು. ೨) ಜ್ಞೇಯವೆಂದರೆ ಪಶು-ಪಾಶ-ಪತಿ ಈ ಮೂರರ ಅರ್ಥವನ್ನು ತಿಳಿದುಕೊಳ್ಳುವದು. ೩) ಅನುಷ್ಠೇಯವೆಂದರೆ ಲಿಂಗಪೂಜಾ-ಲಿಂಗ ನಿಷ್ಠೆಗಳ ವಿಷಯ-ಮರ್ಮವನ್ನು ಅರಿತಾಚರಿಸುವದು. ೪) ಅಧಿಕಾರವೆಂದರೆ— ದೀಕ್ಷಾಸಂಪನ್ನನಾಗಿ ಭಸ್ಮ ರುದ್ರಾಕ್ಷಿಗಳ ಧಾರಣೆ ಮತ್ತು ಅವುಗಳ ತತ್ವಗಳನ್ನರಿತಾಚರಿಸುವದು. ೫) ಸಾಧನವೆಂದರೆ- ಶಿವಾನುಭವ ಗೋಷ್ಠಿ-ಶಿವಪೂಜೆ-ಶಿವ ಮಂತ್ರ ಶಿವ ಪಂಚಾಕ್ಷರೀ ಮಂತ್ರದ ಮಹತ್ವ ಹಾಗೂ ಜಪ-ತಪಾದಿಗಳ ಮಹತ್ವ ಇತ್ಯಾದಿ ವಿಷಯಗಳ ಮಾರ್ಮಿಕ ಅರ್ಥವನ್ನು ತಿಳಿದು ಅದರಂತೆ ಆಚರಣೆ ಮಾಡುವದು, ೬) ಸಾಧ್ಯವೆಂದರೆ—ಮೇಲಿನ ಸಾಧನೆಗಳಿಂದ ಶಿವ ಸಮಾನ

ನೆನಿಸಿ ಶಿವನ ಸ್ವರೂಪಿಯಾಗಿಯೇ ತಾನಾಗಿ ಮುಕ್ತಿ ಪದವಿಯನ್ನು ಪಡೆಯುವದು ಈ ಆರು ಸಾಧನಗಳಿಗೇ "ಷಟ್ಪ್ರಯೋಜನ"ವೆಂದು ಹೇಳುವರು.

"ಮಾಹೇಶ್ವರ" ಎಂಬ ಶಬ್ದದ ಅರ್ಥವನ್ನು ಮತ್ತೆ ಕೆಲ ಪಂಡಿತರು ಹೀಗೆ ಮಾಡಿದ್ದಾರೆ— "ಮಾಹೇಶ್ವರ"ಎಂಬ ಶಬ್ದದಲ್ಲಿಯ 'ಮಾ' ಅಕ್ಷರವು ಮಾಯಾ ಸೂಚಕವಾಗಿದೆ. 'ಹೇ' ಎಂಬುದು ಈ ಪ್ರಪಂಚವು ಹೇಯವೆಂಬುದನ್ನು ಸೂಚಿಸುತ್ತದೆ. 'ಈಶ್ವರ' ಎಂಬುದು ಒಡೆಯನೆಂದು ಸೂಚಿಸುತ್ತದೆ. ಅಂದರೆ ಈ ಮಾಯಾ ಪ್ರಪಂಚದಲ್ಲಿಯ ಭೋಗೋಪಭೋಗಗಳು ಹೇಯವೆಂದು ತಿಳಿದು ಇಂದ್ರಿಯಗಳನ್ನು ತನ್ನ ಆಧೀನವನ್ನಾಗಿ ಇಟ್ಟುಕೊಂಡು ಅವುಗಳಿಗೆ ಯಾವನು ಒಡೆಯನಾಗಿ ಒಪ್ಪುವನೋ ಅವನೇ ಮಾಹೇಶ್ವರನೆಂದು ಹೇಳುವರು. ಇನ್ನೂ ವಚನ ಶಾಸ್ತ್ರಕಾರರು, ಮತ್ತು ಶ್ರೀ ಬಸವಣ್ಣನವರು ಸಹ "ಮುತ್ತು ಜಲವ ನುಂಗಿತ್ತೋ ಜಲವು ಮುತ್ತು ನುಂಗಿತ್ತೋ" ಎಂಬ ತತ್ವವನ್ನು ಅರಿದಾಗಲೇ ಮಾಹೇಶ್ವರ ಸ್ಥಲವೆಂದು ನುಡಿದಿದ್ದಾರೆ.



## ೩. ಪ್ರಸಾದ ಸ್ಥಲ ತತ್ವ ವಿಚಾರ

### ಪ್ರಸಾದಿ ಲಕ್ಷಣ

ಲಿಂಗಾರ್ಪಿತ ಪ್ರಸಾದಂಚ ಸುಭೋಗೀ ಲಿಂಗ ಸಂಯುತಃ |
ಅನರ್ಪಿತಂ ವಿಸರ್ಜ್ಯಂಚ ಪ್ರಸಾದಿಸ್ಥಲ ಮುತ್ತಮಮ್ ||

ಎಂಬಂತೆ ಲಿಂಗಕ್ಕೆ ಸಮರ್ಪಿಸಿದ ಪ್ರಸಾದವನ್ನೇ ಲಿಂಗದನೆನಹಿನಿಂದ ಸ್ವಾದಿಸಿ ಬೋಜನ ಮಾಡುವದು. ಆದರೆ ಲಿಂಗಕ್ಕೆ ಸಮರ್ಪಿಸದೇ ಇದ್ದ ಯಾವದೇ ಅನರ್ಪಿತ ಪ್ರಸಾದವನ್ನು ಸ್ವೀಕರಿಸದೇ ನಿಷೇಧ ಮಾಡುವದೀಗ ಪ್ರಸಾದಿ ಸ್ಥಲವೆಂದು ಹೇಳಲ್ಪಡುವದು. ಇದೇ ವಿಷಯವನ್ನು ಅಂದರೆ ವೀರ ಶೈವನು ತನ್ನ ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗಗಳಿಗೆ ಸಮರ್ಪಿಸುವದಕ್ಕೆ ಯೋಗ್ಯವಾದ ನಿರ್ಮಲವಾದ ಪದಾರ್ಥಗಳನ್ನು ಕಾಯಾ-ವಾಚಾ-ಮನಸ್ಸೆಂಬ ತ್ರಿಕರಣಗಳಿಂದ ಕ್ರಮವರಿತು ಸಮರ್ಪಿಸಿ ಅವುಗಳಿಂದ ಪ್ರಾಪ್ತವಾದ ತ್ರಿವಿಧ ಪ್ರಸಾದವನ್ನು ತಪ್ಪದೇ ನಿತ್ಯದಲ್ಲಿ ಸೇವಿಸುತ್ತಿರುವದೇ ಪ್ರಸಾದಿ ಸ್ಥಲವೆಂದು ಶ್ರೀಮೊಗ್ಗೆ ಮಾಯಿ ದೇವರು ಉಲ್ಲೇಖಿಸಿದ್ದಾರೆ.

### ಲಿಂಗಾರ್ಪಿತ ವಸ್ತುವೇ-ಪ್ರಸಾದವು

ಲಿಂಗಾರ್ಪಿತ ಪ್ರಸಾದವನ್ನು ಸ್ವೀಕರಿಸುವದು, ಲಿಂಗಾರ್ಪಿತವಲ್ಲದ ಅನರ್ಪಿತ ವಸ್ತುಗಳನ್ನು ಬಿಡುವದೇ ಪ್ರಸಾದ ಸ್ಥಲವೆಂದು ಶ್ರೀ ಬಸವಣ್ಣನವರೂ

ಸಹ ನುಡಿದಿದ್ದಾರೆ. ಪಂಚೇಂದ್ರಿಯ ಮೂಲಕ ಭೋಗಿಸುವ ವಸ್ತುಗಳನ್ನು ಸಹ ಲಿಂಗಾರ್ಪಿತವಾದ ನಂತರವೇ ಸೇವಿಸಬೇಕು. ಕಣ್ಣಿನಿಂದ ನೋಡುವ, ಕಿವಿಯಿಂದ ಕೇಳುವ, ಮೂಗಿನಿಂದ ಮೂಸಿ ನೋಡುವ, ನಾಲಿಗೆಯಿಂದ ರುಚಿಸುವ ಮತ್ತು ತಾನು ಉಣ್ಣುಡುವ, ಭೋಗಿಸುವ ಮೊದಲಾದ ಸಕಲ ವಸ್ತುಗಳು ಶಿವನ ಕೃಪೆಯಿಂದಲೇ ದೊರೆತಿರುವವೆಂದೂ ಮತ್ತು ಆತನೇ ಆ ಎಲ್ಲ ಕಾರ್ಯಗಳನ್ನು ಮಾಡಿಸುತ್ತಿದ್ದಾನೆಂದೂ ಆತನಿಗೆ ಅರ್ಪಿಸದೇ ಇದ್ದ, ಆತನ ಸ್ಮರಣೆ ಮಾಡದೇ ಯಾವ ಅವಯವಗಳಿಂದ ಯಾವದನ್ನೂ ಸ್ವೀಕರಿಸಿ ಸ್ವಾದಿಸುವದಿಲ್ಲವೆಂಬ ಧೃಡ ನಿಶ್ಚಯವಿದ್ದು "ಪ್ರಭೆಯು ಪಾಷಾಣವ ನುಂಗಿತ್ತೋ-ಪಾಷಾಣ ಪ್ರಭೆಯ ನುಂಗಿತ್ತೋ" ಎಂಬ ತತ್ವವನ್ನು ಅರಿದಾಗಲೇ ಪ್ರಸಾದಿ ಸ್ಥಲ ಸಿದ್ಧಿಯೆಂದು ಶ್ರೀ ಬಸವಣ್ಣನವರು ನುಡಿದಿದ್ದಾರೆ. ಲಿಂಗಾರ್ಪಿತ ಪ್ರಸಾದವನ್ನೇ ಸ್ವೀಕರಿಸಲು ಶಿವ ಸ್ವರೂಪಿಯಾಗುವನೆಂದು ಶ್ರೀ ಸರ್ವಜ್ಞ ಮೂರ್ತಿಯು ನುಡಿದ ವಚನಗಳು ಇಂತಿವೆ:-

೧) ಈಶ ಪ್ರಸಾದವನು| ಸೂಸದಲೆ ತಾ ಕೊಳ್ಳೆ |
ಶಾಶ್ವತ ಪದವಪ್ಪ ಪದವಕ್ಕು ಜಗಕೆಲ್ಲ| ಈಶ್ವರನಕ್ಕೂ ಸರ್ವಜ್ಞ ||

೨) ಅರ್ಪಿತದ ಭೇದವನು | ತಪ್ಪದಲೆ ತಿಳಿದಾತ |
ಸರ್ಪಭೂಷಣನ ಸಮನಹನು ನೀ ಸುಖದೊ| ಳೊಪ್ಪುತ್ತಲಿಹನು ಸರ್ವಜ್ಞ ||

ಇನ್ನು ಲಿಂಗಾರ್ಪಿತವಾಗದಿದ್ದ ಅನರ್ಪಿತ ಪ್ರಸಾದವನ್ನು ಸ್ವೀಕರಿಸಲು "ಲಿಂಗಕ್ಕೆ ತೋರಿಸದಲೆ | ನುಂಗಿದಡೆ ಏನಹುದು| ಭಂಗ ಬಂಧನವು ಘನವಹುದು| ಆ ಲಿಂಗ ಹಿಂಗಿಹುದು ನೋಡಾ ಸರ್ವಜ್ಞ || ಎಂದು ಶ್ರೀ ಸರ್ವಜ್ಞ ಮೂರ್ತಿಯು ನುಡಿದಿದ್ದಾರೆ.

## ಪ್ರಸಾದ ಮಹತ್ವ

ಪ್ರಸಾದ ಮಹಿಮೆಯು ಬಹು ಮಹತ್ವದ್ದಾಗಿದೆ. ಶಿವ ಪ್ರಸಾದವೇ ಪರಿಶುದ್ಧವಾದ ಭಕ್ತಿಗೆ ಮುಖ್ಯ ಕಾರಣವು. ಶಿವ ಪ್ರಸಾದ ಶೂನ್ಯನಾದವನಿಗೆ ಭಕ್ತಿಯೇ ಸಿದ್ಧಿಯಾಗುವದಿಲ್ಲ. ಶಿವ ಪ್ರಸಾದ ಮಹಿಮೆಯಿಂದಲೇ ಬ್ರಹ್ಮನು ಬ್ರಹ್ಮತ್ವವನ್ನೂ, ವಿಷ್ಣುವು ವಿಷ್ಣುವತ್ವವನ್ನೂ ಪಡೆದರಲ್ಲದೆ ಸಕಲ ದೇವತೆಗಳೂ ಸಹ ನಿತ್ಯ ಸಿದ್ಧರಾಗಿರುತ್ತಾರೆ. ಭಕ್ತಿಪೂರ್ವಕವಾಗಿ ಸೇವಿಸುವ ಶಿವ ಪ್ರಸಾದದಿಂದಲೇ ದೇಹವು ವಜ್ರಕಾಯವೆನ್ನಿಸುವದು. ಹಾಗೂ ಈ ಭವರೋಗ ನಿವಾರಣೆಗೆ ಶಿವ ಪ್ರಸಾದವೇ ದಿವ್ಯೌಷಧಿಯಾಗಿರುವದಲ್ಲದೆ ಶಿವ ಸಾಯುಜ್ಯ ಪದವಿಯನ್ನು ಪಡೆಯಲೂ ಸಹ ಕಾರಣೀಭೂತವಾಗಿದ್ದು, ಆ ಶಿವ ಪ್ರಸಾದ ಸಮಾನ

ವಾಗಿ ಈ ಮೂರೂ ಲೋಕಗಳಲ್ಲಿ ಯಾವದೂ ಇಲ್ಲೆಂದು ಶಿದ್ಧಾಂತ ಶಿಖಾಮಣಿಯು ಬೋಧಿಸುತ್ತದೆ.

ಇಂಥ ಯಾವ ದಿವ್ಯ ಶಿವಪ್ರಸಾದದಲ್ಲಿ ನಂಬಿಗೆಯಿಲ್ಲವೆ ನಿಂದೆಯುು ಮಾಡಿದರೆ ನರಕವು ತಪ್ಪದೆಂದು ಶಿವ ರಹಸ್ಯವು ಬೋಧಿಸುತ್ತದೆ ಮತ್ತು–

''ಬೆಕ್ಕು ನಾಯಿ ಶಿವಭಕ್ತರ ಒಕ್ಕು ಮಿಕ್ಕುದ ಕೊಂಡರೆ
ಸದಾಚಾರಿಯಾಗಬಲ್ಲವೇ ಭೃತ್ಯಾಚಾರವಾಗಬಲ್ಲವೇ
ಜಂಗಮ ಲಿಂಗದಲ್ಲಿ ನಂಬಿಗೆಯಿಲ್ಲದವನು ಕೊಂಡ ಪ್ರಸಾದ
ಬೆಕ್ಕು ನಾಯಿ ತಿಂದಂತೆ ಕಾಣಾ ರಾಮನಾಥಾ"

ಹೀಗೆ ವಚನಕಾರರ ಅಭಿಪ್ರಾಯವಿದೆ.

## ೪ ಪ್ರಾಣಲಿಂಗಸ್ಥಲ-ತತ್ವ-ವಿಚಾರ

### ಲಕ್ಷಣ–ವಿಚಾರ

ತ್ಯಕ್ತ್ವಾ ಪ್ರಾಣಗುಣಾನ್ ಲಿಂಗೀ ಲಿಂಗಂ ಪ್ರಾಣೇಸಮಾಹಿತಂ।
ಸುಖ ದುಃಖ ಭಯಂನಾಸ್ತಿ ಪ್ರಾಣಲಿಂಗೀ ಸ್ಥಲಂಭವೇತ್॥

ಎಂಭುಕ್ತಿಯಂತೆ ತನ್ನ ಪ್ರಾಣದ ಮೇಲೆ ಪ್ರೇಮವಿದ್ದಷ್ಟೇ ಪ್ರೇಮನ್ನು, ತನ್ನ ಇಷ್ಟಲಿಂಗದಲ್ಲಿಟ್ಟು, ಪ್ರಾಣಲಿಂಗಗಳೆರಡೂ ಒಂದೇ ಎಂದು ಭಾವಿಸಿ ಒಳ್ಳೇ ಲಿಂಗನಿಷ್ಠೆಯುಳ್ಳವನಾಗಿ; ಸುಖದುಃಖಗಳಿಗೆ ಹಿಗ್ಗದೆ–ಕುಗ್ಗದೇ ಇದ್ದು, ಅವುಗಳ ಭಯವಿಲ್ಲದಿರುವದೇ ಪ್ರಾಣಲಿಂಗಸ್ಥಲವೆಂದು ಹೇಳಲ್ಪಡುವದು. ಈ ವಿಷಯವನ್ನೇ ಅಲ್ಪ ಸೂಕ್ಷ್ಮವಾಗಿ ನೋಡಲಾಗಿ ಮುಕ್ತಿಗೆ ಮುಖ್ಯ ಕಾರಣವಾದ ವೇಧಾ–ಮನು–ಕ್ರಿಯೆಯೆಂಬ ದೀಕ್ಷಾತ್ರಯದಿಂದ ಅಣವಾದಿ ಮಲತ್ರಯಗಳು ಅಳಿದುಹೋಗಿ ಪ್ರಾಣಲಿಂಗಗಳೆರಡೂ ಒಂದೇಯಾಗಿ ಸಮವಾಗಿರುವದೇ ಉತ್ಕೃಷ್ಟ ಪ್ರಾಣಲಿಂಗೀಸ್ಥಲವೆಂದು ಶ್ರೀ ಮೊಗ್ಗೆ ಮಾಯಿದೇವರು ನಿರೂಪಿಸಿದ್ದಾರೆ. ಶ್ರೀ ಬಸವಣ್ಣನವರೂ ತಮ್ಮ ವಚನವಲ್ಲಿ ಇದೇ ಅಭಿಪ್ರಾಯ ಪಟ್ಟಿದ್ದಾರೆ. ಇವತ್ತು "ವನ್ಹಿಯು ಕಾಷ್ಟವ ನುಂಗಿತ್ತೋ, ಕಾಷ್ಟವು ವನ್ಹಿಯ ನುಂಗಿತ್ತೋ'' ಎಂಬ ತತ್ವವನ್ನು ಅರಿದಾಗಲೇ ಪ್ರಾಣಲಿಂಗಿ ಸ್ಥಲವೆಂದು ಅಕ್ಕ ಮಹಾದೇವಿಯವರ ಅಭಿಪ್ರಾಯವದೆ. ಇನ್ನು ಸರ್ವಜ್ಞಮೂರ್ತಿಯು ಈ ವಿಷಯದಲ್ಲಿ—

ಅಣವಾದಿಯೊಳಿರಲು। ಹೂಣಿ ಲಿಂಗದ ಮನವ।
ಕೇಣ ವಿಡಿದಿಹನು ವಿರತಿಯಲಿ ದೇಹದಿಹ।
ಪ್ರಾಣಲಿಂಗಿಯು ತಾ ಸರ್ವಜ್ಞ॥

ಹೀಗೆ ಚನ್ನಿಗವಚನದ ನುಡಿಯನ್ನು ನುಡಿದಿದ್ದಾನೆ. ಆದರೆ ಅಂಗದಿಂದ ಲಿಂಗವು ಕೇವಲ ನಿಮಿಷಾರ್ಧವಾದರೂ ಮಾತ್ರ ಅಗಲಿದರೆ ಆತನು ನರಕದಲ್ಲಿ ಬಿದ್ದು ಬಹುಕಾಲ ತೊಳಲಾಡುವನೆಂದು ಶಿವರಹಸ್ಯವು ಬೋಧಿಸುತ್ತದೆ.

## ಸೂಕ್ಷ್ಮ-ವಿಚಾರ

ಈ ಸ್ಥಲದ ವಿಷಯವನ್ನು ಇನ್ನೂ ಸೂಕ್ಷ್ಮವಾಗಿ ಪರಿಶೀಲಿಸಬೇಕಾದರೆ ತನ್ನ ದೇಹದೊಳಗಿನ ಪ್ರಾಣವಾಯು ಮತ್ತು ಅಪಾನವಾಯುಗಳ ಸಂಯೋಗಾಘಾತದಿಂದ, ನಾಭಿಕಂದ ಮಧ್ಯದಿಂದ ಉತ್ಪನ್ನವಾದ ಜ್ಯೋತಿಯು ಯಾವ ಲಿಂಗದಲ್ಲಿ ಅಡಗುವದೋ ಅದೇ ಪ್ರಾಣಲಿಂಗವೆಂದು ಹೇಳಿಸಿಕೊಳ್ಳುವದು. ಇದನ್ನು ಸಾಧಿರಬೇಕಾದರೆ ಈ ಜಗತ್ತು ಮಾಯಾ ಗುಣಭೇದದಿಂದ ಉತ್ಪನ್ನವಾಗಿರುವದೆಂದು ಅರಿತು ಹೇಯ ಭಾವದಿಂದ ಪ್ರಾಣಲಿಂಗದಲ್ಲಿ ಮನುಸ್ಸನ್ನು ಲಯಗೊಳಿಸಬೇಕಾಗುವದು. ಈ ಪ್ರಾಣಲಿಂಗೀ ಸೂಕ್ಷ್ಮ ತತ್ವವಿಚಾರವನ್ನು ಗುರು ಮುಖದಿಂದ ಉಪದೇಶವನ್ನು ಹೊಂದಿ ತಿಳಿದುಕೊಳ್ಳಬೇಕು. ಇಲ್ಲವಾದರೆ ಅದು ಪ್ರಾಕೃತದಿಂದ ತಿಳಿಯಲ್ಪಡುವದಿಲ್ಲ. ಇನ್ನು ಈ ವಿಷಯದಲ್ಲಿ ಶ್ರುತಿಗಳಾದರೂ ಇದೇ ಅಭಿಪ್ರಾಯವನ್ನು ವ್ಯಕ್ತಮಾಡಿ ಪ್ರತಿಪಾದಿಸುತ್ತವೆ.

# ೫. ಶರಣಸ್ಥಲ-ತತ್ವ-ವಿಚಾರ

ಪತಿರ್ಲಿಂಗಂ ಸತೀಚಾಹ ಮಿತಿಯುಕ್ತಃ ಸದಾ ತಥಾ ।
ಪಂಚೇಂದ್ರಿಯ ಸುಖಂ ನಾಸ್ತಿ ಶರಣಸ್ಥಲ ಮುತ್ತಮಮ್ ॥ ೫ ॥

ಎಂಬಂತೆ ಪರಿಪೂರ್ಣನಾದ ಪ್ರಾಣಲಿಂಗಿಯು ತಾನು ಸತಿ, ಲಿಂಗವೇ ಪತಿಯೆಂಬ ನಿರ್ಮಲವಾದ ಭಾವದಲಿ ಆಚರಿಸಿ ಪಂಚೇಂದ್ರಿಯಗಳ ಮುಖದಿಂದ ಸ್ವಭಾವಸಿದ್ಧವಾಗಿ ಹುಟ್ಟುವ ಸೌಖ್ಯಗಳನ್ನು ಬಯಸದಿರುವದೇ ಶರಣಸ್ಥಲವೆಂದೆನಿಸುವದು. ಇದರಂತೆ ಶ್ರೀ ಬಸವಣ್ಣನವರು ತಮ್ಮ ವಚನದಲ್ಲಿ ಇದೇ ಅಭಿಪ್ರಾಯವನ್ನು ವ್ಯಕ್ತ ಮಾಡಿದ್ದಾರೆ. ಆದರೆ ಮೊಗ್ಗೆಮಾಯಿದೇವರು ಮಾತ್ರ ಮೇಲಿನ ವಿಷಯದಂತೆಯೇ ತಮ್ಮ ಅಭಿಪ್ರಾಯವನ್ನು ವ್ಯಕ್ತ ಮಾಡಿ "ಈ ಸಕಲ ಜಗತ್ತೂ ಚಿಚ್ಛಕ್ತಿ ವಿಕಾರವಾದುದೆಂಬ ಉತ್ಕೃಷ್ಟವಾದ ಅನುಭವದಿಂದ ಪ್ರಾಣಲಿಂಗಿಯು ಕೂಡಿರಬೇಕೆಂಬುದೊಂದು ಹೆಚ್ಚಿನ ವಿಷಯವನ್ನು ಪ್ರತಿಪಾದಿಸಿದ್ದಾರೆ. ಇನ್ನು ಬೃಹದಾರಣ್ಯ ಶ್ರುತಿಯಾದರೂ ಇದೇ ತತ್ವವನ್ನೇ ಬೋಧಿಸುತ್ತದೆ. "ಶಾರಬಲಿದು ಶರಧಿಯ ಕೂಡಿದಾಗಲೇ ಶರಣಸ್ಥಲವೆಂದು" ಅಕ್ಕಮಹಾದೇವಿಯವರು ಅಭಿಪ್ರಾಯಪಟ್ಟಿದ್ದಾರೆ.

ಕರ್ಮೇಂದ್ರಿಯಲಾದಿಗಳ । ಸ್ಮರಣೆಗಳನತಿಗಳೆದು ।
ಶರಣಸತಿ ಲಿಂಗಪತಿಯಾಗಿ ಚರಿಸುವನು । ಪರಮನ ಶರಣ ಸರ್ವಜ್ಞ॥

ಎಂಬುದಾಗಿ ಶ್ರೀ ಸರ್ವಜ್ಞ ಮೂರ್ತಿಯೂ ಸಹ ಅಂದವಾಗಿಯೂ ಸರಸವಾಗಿಯೂ ನುಡಿದಿದ್ದಾನೆ. ಅಂತೂ ಈ ಪ್ರಪಂಚದಲ್ಲಿ ತೊಡಬೇಕು, ಉಣಬೇಕು, ಇಡಬೇಕು, ಉಪಭೋಗ ಮಾಡಬೇಕು ಮೊದಲಾದ ಅನೇಕ ಪ್ರಕಾರದ ಪದಾರ್ಥಗಳ ಆಶೆಯನ್ನು ತೊರೆದು ಶಿವನೇ ಗತಿಯೆಂದು ಭಾವಿಸಿ ಶಿವನಿಗೆ ಶರಣಾಗತನಾಗಿ, ಅಂಗ ಲಿಂಗರೂಪ ಸತೀ ಪತಿ ಭಾವದಿಂದುತ್ಪನ್ನವಾದಂಥಹ ಸೌಖ್ಯವುಳ್ಳವನೇ ಶರಣನೆನಿಸಿಕೊಳ್ಳುತ್ತಾನೆ.

## ೬. ಐಕ್ಯಸ್ಥಲ ತತ್ವ ವಿಚಾರ

ಷಡೂರ್ಮಯಶ್ಚ ಷಡ್ವರ್ಗೋ ನಾಸ್ತಿ ಚಾಷ್ಟವಿಧಾರ್ಚನಮ್ ।
ನಿರ್ಭಾವಃ ಶಿವಲಿಂಗೈಕ್ಯಃ ಶಿಖಿಕರ್ಪೂರ ಯೋಗವಮ್ ॥

ಷಡೂರ್ಮಿಗಳನ್ನೂ ಹಾಗೂ ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ಸರವೆಂಬ ಅರಿಷಡ್ವರ್ಗಗಳನ್ನೂ ಧಿಕ್ಕರಿಸಿ ಅವುಗಳ ಜಾಲದಲ್ಲಿ ಬಂಧಿತನಾಗದೇ ಅಷ್ಟವಿಧಾರ್ಚನೆ (ಪೂಜಾ) ಯಿಲ್ಲದೆ, ಭಾವರಹಿತನಾಗಿದ್ದು, ಬಾಹ್ಯ ಪ್ರಪಂಚದ ವ್ಯಾಪಾರವನ್ನು ನಿರ್ವಾಸನೆಯಿಂತೆ ಬಿಟ್ಟು ಈ ಸಕಲ ಜಗತ್ತೂ ಶಿವನ ಹೊರತಾಗಿಲ್ಲೆಂಬುದನ್ನು ಅರಿತು ಜ್ಞಾನದ ಸೂಕ್ಷ್ಮವಾದ ಅನುಭವದಿಂದ ನಾನು ನೀನೆಂಬ ಶಬ್ದ ಭೇದವು ಲೀನವಾಗಿ (ಭೇದಭಾವವು ಅಳಿದುಹೋಗಿ) "ಹೇಗೆ ಅಗ್ನಿ ಸಂಗದಿಂದ ಕರ್ಪುರವು ತನ್ನ ರೂಪವಳಿದು ಅಗ್ನಿಯೇ ಆಗುವದೋ ಹಾಗೆ" ಲಿಂಗದ ನೆನಹಿನಿಂದ ಲಿಂಗವೇ ತಾನಾದೊಡೆ ಅದು ಐಕ್ಯಸ್ಥಲವೆಂದು ಹೇಳಲ್ಪಡುವದು. ಮತ್ತು ಶ್ರೀ ಮೊಗ್ಗೆಮಾಯಿದೇವರು ಇದೇ ಅಭಿಪ್ರಾಯವನ್ನು ವ್ಯಕ್ತ ಮಾಡಿದ್ದಾರೆ. ಇನ್ನು "ಭಕ್ತನು ಪುಷ್ಪಸ್ವರೂಪನು. ಜಂಗಮನು ಭ್ರಮರಸ್ವರೂಪನು ಈ ಎರಡೂ ಒಂದಾದದ್ದು ಶಿವನ ಸ್ವರೂಪವೆಂದು ವೀರಾಗಮವು ಪ್ರತಿಪಾದಿಸುತ್ತದೆ.

ಇನ್ನು ಶ್ರೀ ಸರ್ವಜ್ಞ ಮೂರ್ತಿಯೂ ಸಹ ಇದೇ ಅಭಿಪ್ರಾಯವನ್ನು ವ್ಯಕ್ತ ಮಾಡಿ "ನಾನು ನೀನುಗಳಳಿದು । ತಾನು ಲಿಂಗದಿ ಉಳಿದು । ನಾನಾ ಭ್ರಮೆಗಳ ಪರಿಪಿಂಗಿ ನಿಂದವನ । ತಾನೈಕ್ಯ ನೋಡ ಸರ್ವಜ್ಞ" ಹೀಗೆ ಒಳ್ಳೇ ಸ್ವಾರಸ್ಯವಾಗಿ ಚನ್ನಿಗ ನುಡಿಯನ್ನು ನುಡಿದಿದ್ದಾನೆ. ಮತ್ತು ಶ್ರೀ ಬಸವಣ್ಣನವರೂ ಸಹ "ಕ್ಷೀರದೊಳಗಣ ಘೃತದಂತೆ ತಿಲದೊಳಗಣ ತೈಲದಂತೆ ಪುಷ್ಪದೊಳಗಣ

ಪರಿಮಳದಂತೆ ಉಪ್ಪು ಉದಕವ ಕೂಡಿದಂತೆ ಮನಲಿಂಗದಲ್ಲಿ ಲೀಯವಾಗಿಹುದೀಗ ಐಕ್ಯ ಸ್ಥಲ ನೋಡಾ ಅಪ್ರಮಾಣ ಕೂಡಲಸಂಗಮದೇವಾ" ಹೀಗೆ ಆಗಮದ ಸಾರವನ್ನೇ ತಮ್ಮ ವಚನದಲ್ಲಿ ಸುಂದರವಾಗಿ ನುಡಿದಿದ್ದಾರೆ. "ವಾರಿ ಜಲಿದು ವಾರಿಧಿಯ ಕೂಡಿದಾಗಲೇ ಐಕ್ಯಸ್ಥಲ" ವೆಂದು ಶ್ರೀ ಅಕ್ಕಮಹಾದೇವಿಯವರೂ ಸಹ ಬೋಧಿಸಿರುತ್ತಾರೆ. ಮತ್ತೂ ಶ್ರೀ ಬಸವಣ್ಣನವರು ತಮ್ಮ ವಚನದಲ್ಲಿ ಹೀಗೆ ನುಡಿದಿದ್ದಾರೆ:—

ಭಕ್ತಿಯೆಂಬ ಪೃಥ್ವಿಯಮೇಲೆ ಗುರುವೆಂಬ ಬೀಜವಂಕುರಿಸಿ,
ಲಿಂಗವೆಂಬ ಎಲೆಯಾಯಿತ್ತು ಲಿಂಗವೆಂಬ ಎಲೆಯ ಮೇಲೆ ||
ವಿಚಾರವೆಂಬ ಹೂವಾಯಿತ್ತು, ಆಚಾರವೆಂಬ ಕಾಯಾಗಿತ್ತು,
ನಿಷ್ಪತ್ತಿಯೆಂಬ ಹಣ್ಣಾಯಿತ್ತು, ನಿಷ್ಪತ್ತಿಯೆಂಬ
ಹಣ್ಣು ತೊಟ್ಟು ಬಿಟ್ಟು, ಕಳಚಿ ಬೀಳುವಲ್ಲಿ
ಕೂಡಲಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ|

## ಷಟ್‌ಸ್ಥಲದ–ಒಂದೇ ವಚನವು

ಈ ಷಟ್‌ಸ್ಥಲ ವಿಷಯವನ್ನು ವಚನ ಶಾಸ್ತ್ರಕಾರರು ಒಂದೇ ವಚನದಲ್ಲಿ ನುಡಿದಿದ್ದಾರೆ—

ಭಕ್ತನಾದಡೆ ತನು ಮನ ಧನದಾನೆಯಳಿದಿರಬೇಕು|
ಮಾಹೇಶ್ವರನಾದಡೆ ಸುಖ ರುಚಿಯವಗ್ರಹಂ ಮರೆದು
ಪ್ರಸಾದ ಘಟವಳಿಯದೇ ಉಳಿದಿರಬೇಕು|
ಪ್ರಾಣಲಿಂಗಿಯಾದಡೆ ಘಟದಾಸೆಯಿಂ ತೊರೆದು
ಪ್ರಾಣ ಲಿಂಗದೊಳಗೆ ಬೆರೆಯಿಸಿ ಬೇರಿಲ್ಲದಿರಬೇಕು|
ಶರಣನಾದಡೆ ಸತಿರತಿಯ ಸಂಗವಳಿದು ಲಿಂಗಕ್ಕೆ
ತಾ ಸತಿಯಾಗಿರಬೇಕು|
ಲಿಂಗೈಕ್ಯನಾದಡೆ ಆಪ್ಯಾಯನದೆಡೆಯುಡಗಿ
ಸುಖದುಃಖಮಂ ತಾಳದೆ ನಿಭ್ರಾಂತನಾಗಿರಬೇಕು|
ಇಂತೀ ಷಟ್‌ಸ್ಥಲವಾರಿಗೆಯೂ ಅಳವಡದು
ದೊಡ್ಡ ದೇವನು ಷಟ್‌ಸ್ಥಲದ ಭಕ್ತಿಯನು–
ಬಸವಣ್ಣಂಗೆ ಮೂರ್ತಿಯ ಮಾಡಿದನು|

ಈ ಪ್ರಕಾರವಾಗಿ ವೀರಶೈವನು ಷಟ್‌ಸ್ಥಲ ಸಂಪನ್ನನಾಗಿ ಭಕ್ತಿವಿಶೇಷದಿಂದ ತನ್ನ ಜೀವತ್ವವನ್ನು, ಲಿಂಗರೂಪಿಯಾದ ಶಿವನಲ್ಲಿ ಭಕ್ತಿಯಿಂದ ಸಮರಸ ಐಕ್ಯ ಮಾಡುವದೇ ಶಿವಜೀವರ ಐಕ್ಯವೆಂದು ಹೇಳಲ್ಪಡುವದು. ಹೀಗೆ ಶಿವ ಜೀವರ ಐಕ್ಯತ್ವವು ಸಿದ್ಧಿಯಾದ ನಂತರ ವೀರಶೈವ ಶರಣರಿಗೆ ಪುನರ್ಜನ್ಮವಿಲ್ಲೆಂದು

ಶಿವರಹಸ್ಯವು ಬೋಧಿಸುತ್ತದೆ. ಮತ್ತು ಇದೇ ವಿಷಯದಲ್ಲಿ ಶ್ರೀ ಸರ್ವಜ್ಞ ಮೂರ್ತಿಯೂ ಸಹ ನುಡಿದ ವಚನಗಳೆರಡನ್ನು ಇಲ್ಲಿ ಉಲ್ಲೇಖಿಸಲಾಗಿದೆ.

೧) ಶರಣ ತಾ ಸತಿಯಾಗಿ! ವರಲಿಂಗ ಪತಿಯಾಗಿ! ಬೆರೆಯದೆ
ಬೆರಿಸಿ ಬಯಲಾದ ಶಿವಶರಣ! ಮರಳಿ ಹುಟ್ಟುವನೇ ಸರ್ವಜ್ಞ||

೨) ಆಶೆ ದೋಷವ ಕಳೆದು| ಕ್ಲೇಶ ಪಂಚಕವಳಿದು| ಈಶನೊಳು
ಬೆರೆದ ಶರಣಂಗೆ ಬಹುಭವದ! ಪಾಶ ತಾನುಂಟೇ ಸರ್ವಜ್ಞ||

ಹೀಗೆ ಶ್ರೀ ಸರ್ವಜ್ಞಮೂರ್ತಿಯು ಅತ್ಯುತ್ತಮವಾಗಿ ನುಡಿದಿದ್ದಾನೆ.



# ತೃತೀಯ - ರತ್ನ

## ವೀರಶೈವರ-ಆಚಾರ ಪದ್ಧತಿಯ-ವಿಚಾರ

### ಆಚಾರ-ಮಹಿಮೆ

ಆಚಾರಃ ಪರಮೋ ಧರ್ಮ ಆಚಾರ ಪರಮಂ ಧನಂ |
ಆಚಾರಃ ಪರಮಾ ವಿದ್ಯಾ ಆಚಾರಃ ಪರಮಾಗತಿಃ ||೧||
ಜ್ಞಾನಮಾಚಾರಹೀನೇಕ್ಷು ಸರ್ವ ದೈವ ಸಮನ್ವಿತಂ |
ದುಷ್ಟ ಚಾಂಡಾಲಭಾಂಡೇಷು ಯಥಾ ಭಾಗೀರಥೀ ಜಲಂ ||೨||

ಎಂಬ ಆಚಾರ ಗ್ರಂಥ ಪ್ರಮಾಣಾನುಸಾರವಾಗಿ ಆಚಾರವೇ ಮಿಗಿಲಾದ ಧರ್ಮವು. ಆಚಾರವೇ ಶ್ರೇಷ್ಠವಾದ ವಿದ್ಯೆಯು. ಆಚಾರವೇ ಸರ್ವೋತ್ತಮವಾದ ಸದ್ಗತಿದಾಯಕವು. ಪವಿತ್ರವಾದ ಜಲವು ಚಾಂಡಾಲರ ಪಾತ್ರೆಯಲ್ಲಿದ್ದರೂ ಸಹ ಅದು ಹೇಗೆ ಅಪವಿತ್ರವೆನಿಸುವದೋ ಹಾಗೆ ಆಚಾರಹೀನರಲ್ಲಿದ್ದ ಜ್ಞಾನವೂ ಸಹ ಅಪವಿತ್ರ ಜ್ಞಾನವೆನಿಸುವದು. ಶ್ರೀ ಬಸವಣ್ಣನವರೂ ಸಹ "ಆಚಾರವೇ ಸ್ವರ್ಗ; ಅನಾಚಾರವೇ ನರಕ" ವೆಂದು ಆಚಾರಕ್ಕೆ ವಿಶೇಷಪ್ರಾಧಾನ್ಯತೆ ಕೊಟ್ಟು ವಚನವನ್ನು ನುಡಿದಿದ್ದಾರೆ. ವೀರಶೈವರಲ್ಲಿ ಆಚಾರಕ್ಕೇ ಹೆಚ್ಚು ಪ್ರಾಧಾನ್ಯತೆ ಇರುತ್ತದೆ.

ಸದಾಚಾರೇಣ ದೇವತ್ವಂ ಋಷಿತ್ವಂಚ ವರಾನನೇ |
ಉಕಗತಾಃ ಕುಯೋನ್ಯಿತಂ ಮನುಷ್ಯಾಸ್ತದ್ವಿಪರ್ಯಯೇ ||೩||

ಎಂಬ ಶಿವರಹಸ್ಯ ಗ್ರಂಥಾನುಸಾರವಾಗಿ ಮಾನವನು ಸದಾಚಾರದಿಂದ ದೇವತ್ವವನ್ನೂ, ಋಷಿತ್ವವನ್ನೂ ಪಡೆಯುತ್ತಾರೆಂದು ಶಿವನು ಪಾರ್ವತಿಗೆ ಹೇಳಿರುವನಲ್ಲದೇ, ಮನುಷ್ಯ ಪ್ರಾಣಿಯ ಉದ್ಧಾರಕ್ಕೆ ಆಚಾರವೇ ಸರ್ವೋತ್ಕೃಷ್ಟ ಸಾಧನವಾಗಿದೆಂದು ಬೋಧಿಸಿದ್ದಾನೆ. ಆಚಾರ ವಿಷಯದಲ್ಲಿ ಉದಾಸೀನತೆಯನ್ನು ತಾಳದೇ, ಸಾಧ್ಯವಾದಷ್ಟು ಆಚಾರಶೀಲರಾದರೆ ಆರೋಗ್ಯವೂ-ಆಯುಷ್ಯವೂ ವೃದ್ಧಿಯಾಗುವದು. ಹಿಂದಿನ ಮಹಾ ತಪಸ್ವಿಗಳೂ ಸಹ ಸದಾಚಾರವಂತರಾಗಿ ಜ್ಞಾನವಂತರಾದರೇ ವಿನಃ ಅನ್ಯಥಾ ಆಚಾರಹೀನರಾಗಿ ಬಾಳಿ ಬದುಕಲಿಲ್ಲ. ಅವರ ಆಚಾರಯುಕ್ತವಾದ ಅಂದಿನ ಜ್ಞಾನ ಭಾಂಡಾರವೇ ಇಂದಿನ ಸಕಲ ವಿಷಯಗಳ ಸಾಹಿತ್ಯವಾಗಿದೆ ಸದಾಚಾರದಿಂದಲೇ ಧರ್ಮ, ಅರ್ಥ, ಕಾಮ, ಮೋಕ್ಷವೆಂಬ ಚತುರ್ವಿಧ ಪುರುಷಗಳು ಸಾಧಿಸುತ್ತವೆ. "ಆಚಾರ ಹೀನ: ಪಶುಭಿ: ಸಮಾನ:" ಎಂಬಂತೆ ಆಚಾರ ರಹಿತವಾದರೆ ಪಶುಸಮಾನವೆಂದು ಹೇಳಲಾಗುವದು.

ಮಾನವ ಜನ್ಮವು ದೊರೆಯುವದು ಮಹಾ ದುರ್ಲಭವೆಂದು ಅನೇಕ ಮಹಾತ್ಮರು ಹೇಳುತ್ತಾರೆ. ಇರವಿ ಮೊದಲ್ಗೊಂಡು ಎಂಭತ್ನಾಲ್ಕು ಲಕ್ಷ ಜೀವರಾಶಿಗಳ ಸಮೂಹದಲ್ಲಿ ಮಾನವ ಜನ್ಮವೇ ಶ್ರೇಷ್ಠವೆಂದು ಹೇಳಲಾಗುವದು. ಆದರೆ ಸರ್ವ ಪ್ರಾಣಿಗಳಲ್ಲಿ ಸಾಮಾನ್ಯವಾಗಿ ಆಹಾರ-ನಿದ್ರಾ-ಭಯ-ಮೈಥುನ ಈ ನಾಲ್ಕು ಚಿನ್ಹಗಳಂತೂ ಇದ್ದೇ ಇರುತ್ತವೆ. ಮನುಷ್ಯನಲ್ಲಿ ಮಾತ್ರ ಜ್ಞಾನವೊಂದು ವಿಶೇಷವಾಗಿರುತ್ತದೆ ಈ ಜ್ಞಾನದಿಂದಲೇ ಮಾನವ ಪ್ರಾಣಿ ಶ್ರೇಷ್ಠವೆಂದು ಹೇಳಲಾಗುವದು. ಇಂಥ ಯಾವ ಶ್ರೇಷ್ಠವಾದ ಜ್ಞಾನಶಕ್ತಿಯಿಂದ ವಿಚಾರಿಸಿ ಮಾನವನ ಜೀವನವು ಸಾರ್ಥಕವಾಗುವಂತೆ ನೋಡಿಕೊಳ್ಳಬೇಕಾಗುವದು ಇದಕ್ಕೆ ಆಚಾರವೇ ತಳಹದಿಯಾಗಿದೆ. ಜಗತ್ತಿನಲ್ಲಿ ಐದು ದಿನವಾದರೂ ಬದುಕಿದರೆ ಶಿವಜ್ಞಾನಿಯಾಗಿ ಬದುಕಬೇಕೆಂದು ಶಿವರಹಸ್ಯವು ಬೋಧಿಸುತ್ತದೆ. ಕಾರಣ ಇಂಥ ಶಿವಜ್ಞಾನ ಪ್ರಾಪ್ತಿಯ ಸಲುವಾಗಿ ವೀರಶೈವನು ಸದಾಚಾರಿಯಾಗಿರಬೇಕು. ಇಲ್ಲವಾದರೆ ಆ ಜನ್ಮವು ಆಡಿನ ಕೊರಳಲ್ಲಿದ್ದ ಮೊಲೆಯಂತೆ ಈ ಜಗತ್ತಿನಲ್ಲಿ ವ್ಯರ್ಥವಾಗಿರುವದು.



## ನಿತ್ಯಾಚಾರಗಳ ವಿಷಯಾರಂಭವು

ಉತ್ಥಾನೇ ಶಯನೇ ಕ್ವಾಽಪಿ ತ್ವಸ್ಥಾನೇ ಚೋಪವೇಶನೇ ।
ನಿದ್ರಾದೌಚ ತ್ವದಂತೇಚ ಸ್ಮರೇತ್ಸರ್ವತ್ರ ಸದ್ಗುರುಂ ॥೪॥

ಎಂಬ ಪಾರಮೇಶ್ವರಾ ಆಗಮ ವಚನದಂತೆ ಏಳುವಾಗಲೂ, ಮಲಗುವಾಗಲೂ, ಕೂತುಕೊಳ್ಳುವಾಗಲೂ, ಎಲ್ಲಿಗಾದರೂ ಹೋಗಬೇಕಾದರೂ, ನಿದ್ರೆಯ ಆರಂಭದಲ್ಲಿಯೂ, ನಿದ್ರೆಯಿಂದ ಎಚ್ಚತ್ತ ನಂತರವೂ ಶ್ರೀ ಸದ್ಗುರುವಿನನ್ನು ಸ್ಮರಿಸಬೇಕು. ಆತನ ಧ್ಯಾನ ಸ್ತೋತ್ರಾದಿಗಳನ್ನೂ ಮಾಡಬೇಕು.

ಗುರುದೇವೋ ಮಹಾದೇವೋ ಗುರುದೇವೋ ಸದಾಸಿವಃ।
ಗುರುದೇವೋತ್ಪರನ್ನಾಸ್ತಿ. ತಸ್ಮೈ ಶ್ರೀ ಗುರುವೇನಮಃ॥

ಎಂದು ನಿತ್ಯದಲ್ಲಿ ರಾತ್ರಿ ಮಲಗುವಾಗ ಶ್ರೀ ಗುರುವಿನನ್ನು ಧ್ಯಾನಿಸಿ ಎಡ ಮಗ್ಗಲವಾಗಿ ತಲೆಯನ್ನು ದಕ್ಷಿಣಕ್ಕೆ ಮಾಡಿ ಮಲಗಬೇಕು. ಪೂರ್ವಕ್ಕೆ ತಲೆ ಮಾಡಿ ಮಲಗುವದು ಮಧ್ಯಮ. ಪಶ್ಚಿಮಕ್ಕೆ ತಲೆ ಮಾಡುವದು ಕನಿಷ್ಠವು. ಉತ್ತರ ದಿಕ್ಕಿಗಂತೂ ತಲೆ ಮಾಡಿ ಮಲಗಬಾರದು. ಇಷ್ಟವಿದ್ದ ದಿಕ್ಕಿಗೆ ತಲೆ ಮಾಡಿ ಮಲಗಿ ಬೆಳಿಗ್ಗೆ ಪುನಃ ಬ್ರಾಹ್ಮೀ ಮುಹೂರ್ತದಲ್ಲಿ ಬಲಮಗ್ಗಲವಾಗಿ ಏಳಬೇಕು. ಬ್ರಾಹ್ಮೀ ಮುಹೂರ್ತವೆಂದರೆ ಸೂರ್ಯೋದಯಕ್ಕೆ ಮೊದಲು ನಾಲ್ಕು ಘಳಿಗೆ ಪೈಕಿ ಆರಂಭದ ೨ ಘಳಿಗೆ ಕಾಲವು ಉಳಿದ ಕೊನೆಯ ೨ ಘಳಿಗೆ ಕಾಲಕ್ಕೆ ರೌದ್ರೀ ಮುಹೂರ್ತವೆಂಬ ಹೆಸರು. ಆದಷ್ಟು ಬ್ರಾಹ್ಮೀ ಮುಹೂರ್ತದಲ್ಲಿ ಏಳುವದೇ ಒಳಿತು. ''ಕೋಳಿ ಕೂಗದ ಮುನ್ನ ಏಳುವದಲೇನೆಂದು'' ಶ್ರೀ ಸರ್ವಜ್ಞಮೂರ್ತಿಯೂ ಸಹ ನುಡಿದಿದ್ದಾನೆ.

''ಮುಂಜಾವದಲೆದ್ದು ಲಿಂಗದಂಘ್ರಿಯ ಮುಟ್ಟಿ।
ಸುಪ್ರಭಾತದಲ್ಲಿ ಶಿವಶರಣರ ಮುಖವ ನೋಡುವದು।
ಹುಟ್ಟಿದ ಜನ್ಮಕ್ಕೆ ಇದೇ ಸಫಲವು ಸತ್ಯವಚನ ಇಂತೆಂದುದಾಗಿ।
ಇಂತಿಲ್ಲದವರೆನೊಲ್ಲ ನಮ್ಮ ಕೂಡಲಸಂಗಮದೇವಾ"

ಎಂಬ ಶ್ರೀ ಬಸವಣ್ಣನವರ ವಚನದಂತೆ· ತನ್ನ ಇಷ್ಟಲಿಂಗಕ್ಕೆ ನಮಸ್ಕರಿಸಿ ಶಿವಶರಣರ (ಅಥವಾ ಗುರು ಜಂಗಮರ) ಮುಖವನ್ನು ನೋಡಬೇಕು. ಆದರೆ ಅಪವಿತ್ರ ವಸ್ತುಗಳನ್ನೂ, ಅನುಚಾರಿಗಳನ್ನೂ, ರೋಗಿಗಳನ್ನೂ, ದ್ರೋಹಿಗಳನ್ನೂ, ಅಂಗಹೀನರನ್ನೂ ಹಾಗೂ ಕಸಬರಿಗೆ, ಒಣಿಕೆ, ನಾಯಿ, ಕೋಳಿ, ಕತ್ತೆ ಮಂತಾದವುಗಳನ್ನು ನೋಡಬಾರದು. ಯಾವದೇ ದಿವಸದಲ್ಲಾದರೂ ಶುಭವಾಗಲೀ ಅಥವಾ ಅಶುಭವಾಗಲೀ ಅಂದಿನ ದಿವಸ ''ನಾನು ಎದ್ದ ಕೂಡಲೆ ಯಾರ ಮುಖವನ್ನು ನೋಡಿದೆನೋ'' ಎಂಬ ರೂಢಿಯ ಮಾತು ವ್ಯವಹಾರದ ಅನುಭವದಲ್ಲಿರುವ ಕಾರಣ ಒಳ್ಳೇ ಮುಹೂರ್ತದಲ್ಲಿಯೇ ಎದ್ದು ಒಳ್ಳೇ ವಸ್ತುಗಳನ್ನು ನೋಡಬೇಕು. ಎದ್ದ ಕೂಡಲೆ ಪರಮಾತ್ಮನ ನಾಮಸ್ಮರಣೆ ಮಾಡಬೇಕು.

  

# ಪ್ರಾತಃ ಸ್ಮರಣದಲ್ಲಿ ಮಾಡತಕ್ಕ ಪರಮಾತ್ಮನ ನಾಮ-ಸ್ಮರಣೆ

ಏಳಯ್ಯ ಪಾರ್ವತೀರಮಣ ಪಾವನ ಚರಣ ಏಳಯ್ಯ ಫಣಿ ಕುಲಾಭರಣ ಪಾವನ ನಯನ ಏಳಯ್ಯ ಶರಣು ಜನಸಂಗ ಸದಾಪಾಂಗ ಏಳು ನಂಜುಂಡಲಿಂಗ ಏಳಯ್ಯ ಬೆಳಗಾಯಿತು. ॥ ಪಲ್ಲ ॥ ಕಮಲ ಸಂಭವ ಮುಖ್ಯ ವಿಮಲ ವಿಶ್ವಾಮಿತ್ರ, ಜಮದಗ್ನಿ, ಕಶ್ಯಪ, ವಶಿಷ್ಠ, ಕಣ್ವಾದಿಗಳು ಸುಮನಸದಿ ಬಂದು ಕಾದಿಹರು ಬಾಗಿಲೊಳೀಗ ಉಮೆಯರಸ ನೀನೊಲಿದು ಪವಡಿಸು ಹರನೇ ಏಳಯ್ಯ ಬೆಳಗಾಯಿತು. ॥ ೧ ॥ ಇಂದ್ರಾದಿ ಅಮರ ದಿಕ್ಪಾಲಕರೊಂದೆಸೆಯೊಳಗೆ ವಂದಿಸುತ ನಾರದರು ಒಲಿದು ಗಾನವ ಪಾಡೆ ನಂದೀಶ ಭೃಂಗೀಶ ನಾಂಟ್ಯವಾಡುತಿಹರು ಆನಂದದಿಂ ಪವಡಿಸು ಹರನೇ ಏಳಯ್ಯ ಬೆಳಗಾಯಿತು. ॥ ೨ ॥ ಗರುಡ ಗಂಧರ್ವ ಕಿನ್ನರ ಯಕ್ಷ ಕಿಂಪುರುಷ ಪರಮ ಪುರುಷರು ನಿಮ್ಮ ಪಾದವೇ ಗತಿಯೆಂದು ನಿರುತದಿಂ ಬಂದು ಓಲೈಸುತಿಹರು ಗುರುಸ್ವಾಮಿ ಶಿವನೇ ಏಳು ಏಳಯ್ಯ ಬೆಳಗಾಯಿತು. ॥ ೩ ॥

## ದ್ವಾದಶ ಜ್ಯೋತಿರ್ಲಿಂಗ ಸ್ತೋತ್ರಂ

ಸೌರಾಷ್ಟ್ರೇ ಸೋಮನಾಥಂಚ ಶ್ರೀಶೈಲೇ ಮಲ್ಲಿಕಾರ್ಜುನಂ। ಉಜ್ಜಯಿನ್ಯಾಂ ಮಹಾಕಾಲಮೋಂಕಾರಮಮಲೇಶ್ವರೇ ॥ ೧ ॥ ಪರಳ್ಯಾಂ ವೈಜನಾಥಂ ಚ ಡಾಕಿನ್ಯಾಂ ಭೀಮಶಂಕರಂ। ಸೇತುಬಂಧೇತು ರಾಮೇಶಂ ನಾಗೇಶಂ ದಾರುಕಾವನೇ ॥ ೨ ॥ ವಾರಣಾಸ್ಯಾಂ ತು ವಿಶ್ವೇಶಂ ತ್ರ್ಯಂಬಕಂ ಗೌತಮೀ ತಟೇ ಹಿಮಾಲಯೇ ತು ಕೇದಾರಂ ಘುಶ್ಮೇಶಂ ಶಿವಾಲಯೇ ॥ ೩ ॥ ಏತಾನಿ ಜ್ಯೋತಿರ್ಲಿಂಗಾನಿ ಸಾಯಂ ಪ್ರಾತಃ ಪಠೇನ್ನರಃ। ಸಪ್ತಜನ್ಮ ಕೃತಂ ಪಾಪಂ ಸ್ಮರಣೇನ ವಿನಶ್ಯತಿ ॥ ೪ ॥

## ಮಲಮೂತ್ರ ವಿಸರ್ಜನದ ಆಚಾರದ ವಿಧಾನ

ಬೆಳಿಗ್ಗೆ ಕೂಡಲೆ ಎದ್ದು ಪ್ರಾಥಸ್ಮರಣವನ್ನು ಮಾಡಿದ ನಂತರ ತಂಬಿಗೆಯನ್ನು ತೆಗೆದುಕೊಂಡು ಶೌಚವಿಧಾನದ ಸಲುವಾಗಿ ಊರ ಹೊರಗೆ ಹೋಗಬೇಕು. ''ಮಲಮೂತ್ರ ತ್ಯಾಗ ಶೌಚಂ ನ ಕುರ್ಯಾತ್ತಾಮ್ರ ವಾರಿಣಾ" ಎಂಬಂತೆ ಮಲಮೂತ್ರ ವಿಸರ್ಜನ ಹಾಗೂ ಶೌಚಾದಿ ಕ್ರಿಯೆಗಳಿಗೆ ತಾಂಬ್ರದ ತಂಬಿಗೆಯನ್ನು ಎಂದೂ ಉಪಯೋಗಿಸಬಾರದು. ಮತ್ತು ಶೌಚಕ್ಕೆ ಕೂಡ್ರುವ ಸ್ಥಳದಿಂದ ಸ್ವಲ್ಪ ದೂರದಲ್ಲಿ ತಂಬಿಗೆಯನ್ನಿಟ್ಟು ಬಟ್ಟೆಗಳನ್ನು ಚನ್ನಾಗಿ ಭದ್ರಪಡಿಸಿಕೊಂಡು ಹಗಲಿನಲ್ಲಿ ಉತ್ತರ ಮುಖವಾಗಿಯೂ ರಾತ್ರಿಯಲ್ಲಿ ದಕ್ಷಿಣ ಮುಖವಾಗಿಯೂ ಕುಳಿತುಕೊಂಡು ಮಲಮೂತ್ರವನ್ನು ವಿಸರ್ಜಿಸಬೇಕು.

ಕರಸ್ಥೋದಕ ಪಾತ್ರಸ್ತ್ವತ್ಕುರ್ಯಾನ್ಮೂತ್ರ ಪುರೀಷಕೆ ।
ತತ್ಫಲಂ ಮೂತ್ರ ಸದೃಷಂ ಸುರಾಪಾನೇನ ತತ್ಸಮಂ ।
ಯದಿ ಪ್ರಮಾದಾತ್ಕುರುತೆ ವೃತಂ ಚಾಂದ್ರಾಯಣಂ ಚರೇತ್ ॥

ಕೆಲವರು ಕೈಯಲ್ಲಿ ನೀರು ತುಂಬಿದ ಪಾತ್ರೆಯನ್ನು ಹಿಡಿದುಕೊಂಡು ಮಲ ಮೂತ್ರ ವಿಸರ್ಜನೆ ಮಾಡುತ್ತಾರೆ. ಹೀಗೆ ಮಾಡುವದರಿಂದ ಆ ನೀರು ಮೂತ್ರಸಮಾನವಾಗುವದೆಂದೂ ಅಂಥ ನೀರನ್ನು ಉಪಯೋಗಿಸಲ್ಪಟ್ಟಿದ್ದಾದರೆ ಅದರಿಂದ ಸುರಾಪಾನಕ್ಕೆ ಸಮಾನವಾದ ದೋಷ ತಗಲುವದು. ಆದ್ದರಿಂದ ಕೈಯಲ್ಲಿ ತುಂಬಿದ ಪಾತ್ರೆಯನ್ನು ಹಿಡಿದುಕೊಂಡು ಮೂತ್ರವಿಸರ್ಜನೆ ಮಾಡ ಬಾರದು. ಒಂದು ವೇಳೆ ಮರೆತು ವಿಸರ್ಜನೆ ಮಾಡಿದ್ದಾದರೆ ಚಾಂದ್ರಾಯಣ ವೃತವನ್ನು ಆಚರಿಸಿ ದೋಷ ನಿವಾರಣೆ ಮಾಡಿಕೊಳ್ಳಬೇಕು ಆದಷ್ಟು ಈ ಪದ್ಧತಿಯನ್ನು ಬಿಡುವದು ಒಳ್ಳೆಯದು.

ಅಪ್ರಾವೃತಾಶಿರಾ ಇರಸ್ತು ವಿಣ್ಣಮ್ರಾತ್ರೆ ಪ್ರಜತಿ ದ್ವಿಜಾಃ ।
ತಚ್ಛಿರ ಶತಾಧಾ ಭೂಯಾದಿತಿ ದೇವಾಃ ಶಪುತಿ ತಂ ।

ಯಾವ ವೀರಶೈವನು ತನ್ನ ತಲೆಯಮೇಲೆ ಬಟ್ಟೆಯನ್ನು ಸುತ್ತಿಕೊಳ್ಳದೆ ಮಲ–ಮೂತ್ರ ವಿಸರ್ಜನೆಯನ್ನು ಮಾಡುತ್ತಾನೆಯೋ ಅವನ ತಲೆಯು ಮೂರು ತುಂಡಾಗಲೆಂದು ದೇವತೆಗಳು ಶಾಪ ಕೊಡುತ್ತಾರೆ. ಆದ ಕಾರಣ ತಲೆಗೆ ಬಟ್ಟೆಯನ್ನು ಸುತ್ತಿಕೊಂಡು ಅಥವಾ ಒಂದು ವಸ್ತ್ರವನ್ನು ಹಾಕಿಕೊಂಡು ಮಲ-ಮೂತ್ರ ವಿಸರ್ಜನೆಯನ್ನು ಮಾಡಬೇಕು: ಇಲ್ಲವಾದರೆ ಇದು ಬಹಳ ಅನ್ಯಾಯದ ಕೆಲಸವಪಾಗುತ್ತದೆ.

ಮಲ-ಮೂತ್ರ ವಿಸರ್ಜನ ಕಾಲದಲ್ಲಿ ಮಾತಾಡುವದಾಗಲಿ ಉಗುಳುವದಾಗಲಿ ಮಾಡಬಾರದು ಮತ್ತು ನೀರು ತುಂಬಿದ ಪಾತ್ರೆಯಿಲ್ಲದೆ ಶೌಚಾದಿ ಕ್ರಿಯೆಗಳಿಗೆ ಹೋಗಬಾರದು. ಎಡಗೈಯಿಂದ ಅರಿವೆಯನ್ನು ಮುಟ್ಟಿ ಕಚ್ಚೆಯನ್ನು ಹಾಕಿಕೊಳ್ಳಬಾರದು. ಮತ್ತು ಎಡಗೈಯಲ್ಲಿ ತಂಬಿಗೆಯನ್ನು ಹಿಡಿಯಬಾರದು. ಬಿಲ್ವ, ಬನ್ನಿ ಮೊದಲಾದ ಪವಿತ್ರ ಗಿಡಗಳ ಸಮೀಪದಲ್ಲಿಯೂ, ದೇವರ ಗುಡಿಗಳ ಹಾಗೂ ಮಠಗಳ ಸಮೀಪದಲ್ಲಿಯೂ ಜನರಿಗೆ ಅನುಕೂಲವಿದ್ದ ನೆರಳಿದ್ದ ಸ್ಥಳದಲ್ಲಿಯೂ, ಹೊಳೆ–ಹಳ್ಳ, ಕೆರೆ–ಭಾವಿ, ಹೊಂಡ ಮೊದಲಾದ ಸ್ಥಾನದಲ್ಲಿಯೂ ಎಲ್ಲರೂ ಅಡ್ಡಾಡುವ ದಾರಿಯಲ್ಲಿಯೂ, ಸ್ಮಶಾನದಲ್ಲಿಯೂ ಮಲಮೂತ್ರ ವಿಸರ್ಜನೆ ಮಾಡಬಾರದು.

ಮಲಮೂತ್ರವಿಸರ್ಜನಕ್ಕೆ ಕೂಡ್ರುವಾಗ ತಂಬಿಗೆಯನ್ನು ಸ್ವಲ್ಪ ದೂರದಲ್ಲಿಟ್ಟು ಕೂಡ್ರಬೇಕು. ಮತ್ತು ನಾಶಿಕ ಮುಚ್ಚಿಕೊಂಡು ಮೌನವಾಗಿರಬೇಕು. ವಿಸರ್ಜನದ ತರುವಾಯ ತಂಬಿಗೆ ಇಟ್ಟಿರುವ ಸ್ಥಾನದ ವರೆಗೆ ಸರಿದು ಗುದ ಶಿಶ್ನ

ಗಳನ್ನು ಚನ್ನಾಗಿ ತೊಳೆಯಬೇಕು. ತೊಳೆಯುವಾಗ ಗುದಕ್ಕೆ ಐದು ಸಲ ಶಿಶ್ನಕ್ಕೆ ೩ ಸಲ ಮಣ್ಣನ್ನು ಹಚ್ಚಿ ತೊಳೆಯಬೇಕು. ಆ ಬಳಿಕ ಸ್ವಲ್ಪ ದೂರ ಹೋಗಿ ಬಲಗೈಯಿಂದ ಕಚ್ಚೆಯನ್ನು ಹಾಕಿಕೊಳ್ಳಬೇಕು. ಕೈ ಹಾಗೂ ತಂಬಿಗೆ ತೊಳೆಯುವ ವರೆಗೆ ಎಡಗೈಯು ದೂರದಲ್ಲಿರಬೇಕು. ಅಕಸ್ಮಾತ್ ತಂಬಿಗೆ ತಲುಪಿದಲ್ಲಿ ಇಪ್ಪತ್ತೊಂದು ಸಾರೆ ಬೆಳಗಿದರೆ ಶುದ್ಧವಾಗುವದು. ಬಟ್ಟೆಗಳಿಗೆ ಮುಟ್ಟಿದರೆ ಆ ಕ್ಷಣವೇ ತೊಳೆದು ಹಾಕಬೇಕು. ಆ ಬಳಿಕ ಶುದ್ಧವಾದ ಮಣ್ಣನ್ನಾಗಲೀ ಬೂದಿಯನ್ನಾಗಲೀ ಎಡಗೈಯಿಗೆ ಹತ್ತು ಸಾರೆ ಎರಡೂ ಕೈಗಳಿಗೆ ಮೂರು ಸಾರೆ ಹಚ್ಚಿ ತೊಳೆಯಬೇಕು. ಅನಿರ್ವಾಹಪಕ್ಷ ಮೂರು ಮೂರು ಸಾರೆಯಾದರೂ ಹಚ್ಚಿ ತೊಳೆಯಬೇಕು. ಕಾಲುಗಳನ್ನು ಮೂರು ಮೂರುಸಾರೆ ಮಣ್ಣನ್ನು ಹಚ್ಚಿ ತೊಳೆಯಬೇಕು. ತಂಬಿಗೆಯನ್ನೂ ಸಹ ಒಳಗೂ ಹೊರಗೂ ಮೂರು ಸಾರೆ ಸ್ವಚ್ಛವಾಗಿ ಬೆಳಗಬೇಕಲ್ಲದೆ ಹುಳಿಯನ್ನು ಹಚ್ಚಿ ಬೆಳಗಬೇಕು. ತದನಂತರ ೧೨ ಸಾರೆ ಬಾಯಿ ಮುಕ್ಕಳಿಸಿ ಎಡಭಾಗಕ್ಕೆ ಉಗುಳಬೇಕು. ತದನಂತರ ಮಾತಾಡಬೇಕು. ಅಂದರೆ ಶೌಚಾದಿ ಕ್ರಿಯಾದಿಗಳು ಆರಂಭವಾದ ನಂತರ ಮೌನವಾಗಿದ್ದು ಈ ಎಲ್ಲ ಕ್ರಿಯಾದಿಗಳು ಮುಗಿಯುವ ವರೆಗೂ ಮೌನವಾಗಿರುವದು ಶಾಸ್ತ್ರೀಯ ಪದ್ಧತಿಯೆಂದೆನಿಸುವದು ಈ ಪದ್ಧತಿಯು ಬಹಳ ಒಳ್ಳೇದಾಗಿರುವದು. ಬಾಯಿ ಮುಕ್ಕಳಿಸಿದ ನೀರನ್ನು ಬಲಗಡೆಯ ಹೊರ್ತಾಗಿ ಎಡಭಾಗಕ್ಕೆ ಉಗಳಬೇಕೆಂದು:—

''ವಿಪ್ರಸ್ಯ ದಕ್ಷಿಣೇಭಾಗೇ ದೇವಾಸ್ತಿಷ್ಟಂತಿ ಸರ್ವದಾ |
ಆಸೀನಃ ಶೌಚಗಂಡೂಷಾನ್ ವಾತುವಾರ್ಶ್ವೇ ವಿಸರ್ಜಯೇತ್ ||

ಪರಾಶರ ಋಷಿಗಳ ಅಭಿಪ್ರಾಯವದೆ. ತದನಂತರ ಹಲ್ಲುಗಳನ್ನು ಉಜ್ಜಿಕೊಂಡು ಮುಖ ಸಹಿತ ತೊಳೆದುಕೊಳ್ಳಬೇಕು.

## ದಂತ ಧಾವನ ವಿಧಾನ

ದಂತ ಧಾವನಕ್ಕೆ ಮಾವು, ಬೇವು, ಜಾಲಿ, ಆಲ, ಅತ್ತಿ, ಉತ್ತರಾಣಿ, ನೀರಲ, ಹಲಸು, ಇವುಗಳಲ್ಲಿ ಯಾವದಾದರೊಂದು ೧೨ ಅಂಗುಲ ಉದ್ದ ಪ್ರಮಾಣವಾದದ್ದನ್ನು ತೆಗೆದುಕೊಂಡು ಸಾವಕಾಶವಾಗಿ ಹಲ್ಲುಗಳನ್ನು ಒಳಗೂ-ಹೊರಗೂ ಉಜ್ಜಿ ಸ್ವಚ್ಛಮಾಡಿ, ಅದೇ ಕಟ್ಟಿಗೆಯನ್ನು ಸೀಳಿ ಅದರಿಂದ ನಾಲಿಗೆಯಮೇಲಿನ ಹೊಲಸನ್ನು ಸೂಕ್ಷ್ಮ ರೀತಿಯಿಂದ ತೆಗೆದು ಚಲ್ಲಿ ಕೈಗಳನ್ನು ತೊಳೆದುಕೊಂಡು ಪುನಃ ಬಾಯಿ ಮುಕ್ಕಳಿಸಿ ಮುಖವನ್ನು ಸ್ವಚ್ಛವಾಗಿ ತೊಳೆದುಕೊಳ್ಳಬೇಕು. ಒಂದು ವೇಳೆ ಆಧುನಿಕ ರೀತಿಯ ಪ್ರಕಾರವಾಗಿ ಯಾವದಾದರೊಂದು ದಂತಧಾವನ ಚೂರ್ಣದಿಂದ ತಿಕ್ಕಬೇಕಾದರೆ ಹೆಬ್ಬೆರಳಿನ ಹತ್ತರ ಇರುವ ತರ್ಜನೀ ಬೆರಳಿನಿಂದ ತಿಕ್ಕಬಾರದು. ಮಧ್ಯ ಬೆರಳಿನಿಂದ ತಿಕ್ಕಬೇಕು. ನೀರಲ ಕಟ್ಟಿಗೆಯಿಂದ

ಹಲ್ಲು ತಿಕ್ಕುವದರಿಂದ ಆಯುಷ್ಯ ವೃದ್ಧಿಯಾಗುವದು. ಅತ್ತಿಗೆ ಕಟ್ಟಿಗೆಯಿಂದ ವಾಕ್ ಸಿದ್ಧಿಯಾಗುವದು. ಆಲದ ಕಟ್ಟಿಗೆಯಿಂದ ಸಂಪತ್ತು ಬೆಳೆಯುವದು. ಮಾವಿನ ಕಟ್ಟಿಗೆಯಿಂದ ರಾಜಮನ್ನಣೆ ದೊರೆಯುವದು. ಹಲಸಿನ ಕಟ್ಟಿಗೆಯಿಂದ ಸೌಭಾಗ್ಯ ಪ್ರಾಪ್ತವಾಗುವದು. ಉತ್ತರಾಣಿಯಿಂದ ಸರ್ವಸಿದ್ಧಿಯುಂಟಾಗುವದು. ಹೀಗೆ ಕೆಲ ಋಷಿಗಳ ಅಭಿಪ್ರಾಯವಿದೆ.

ವೈದ್ಯ ಶಾಸ್ತ್ರ, ಆರೋಗ್ಯ ಶಾಸ್ತ್ರಗಳು ಒಂದಕ್ಕೊಂದು ಸಂಬಂಧವಿರುವ ಕಾರಣ ಕಫ-ಜ್ವರ ರೋಗ ನಿವಾರಣೆಗೆ ಹೇಳಿರುವ ಕಟ್ಟಿಗೆಗಳನ್ನು ಮೇಲೆ ಹೇಳಿದ ಕಾರಣ ಅವುಗಳಿಂದ ದೇಹದಲ್ಲಿಯ ವಾತ-ಪಿತ್ತ-ಕಫವೆಂಬ ತ್ರಿದೋಷಗಳ-ದೋಷವು ನಾಶವಾಗಿ ಆರೋಗ್ಯವು ಸುಸ್ಥಿತಿಯಲ್ಲಿ ಉಳಿಯುವದು. ತದನಂತರ ಲಿಂಗಾರ್ಪಣೆಗಾಗಿ ಪತ್ರಿ ಪುಷ್ಪಾದಿಗಳನ್ನು ಸಂಗ್ರಹಿಸಬೇಕು.

### ಬಿಲ್ವಪತ್ರ-ಪುಷ್ಪಾದಿಗಳನ್ನು ಸಂಗ್ರಹಿಸುವ ಕ್ರಮ

ಉತ್ತಮಂ ಸ್ವಾರ್ಜಿತಂ ಪುಷ್ಪಂ ಮಧ್ಯಮಂ ವನ್ಯ ಮುಚ್ಯತೇ ।
ಅಧಮಂ ತು ಕ್ರಯಕ್ರೀತಂ ಪಾರಕ್ಯಂ ಚಾಧ ಮಾಧಮಂ ॥

ಎಂಬ ಪ್ರಮಾಣಾನುಸಾರವಾಗಿ ತಾನು ಹಚ್ಚಿ ಬೆಳಸಿದ ಗಿಡದ ಪತ್ರಿ ಪುಷ್ಪಗಳು ಉತ್ತಮವಾದವುಗಳೆಂದೂ ಅಡವಿಯಲ್ಲಿ ತಾವೇ ಬೆಳೆದವುವುಗಳು ಮಧ್ಯಮವಾದವುಗಳೆಂದೂ, ಮಾರಲಿಕ್ಕೆ ತೆಗೆದುಕೊಂಡವುಗಳು ಅಧಮವಾದವುಗಳೆಂದೂ ಎರಡನೇಯವರಿಂದಂತೂ ಎಂದೂ ತರಿಸಿಕೊಳ್ಳಬಾರದೆಂದು ಧರ್ಮ ಶಾಸ್ತ್ರಪ್ರಕಾರವಾಗಿ ಹೇಳಲ್ಪಡುತ್ತದೆ.

ಕ್ರಿಮಿ ಕೀಟಾದಿ ಸಂವಿದ್ಧಂ ಲೂತಾತಂ ತುಸಮಾವೃತಂ ।
ಸ್ವಯಂವಾ ವಾಯುಗಲಿತಂ ಬಿಲ್ವಪತ್ರಂತು ವರ್ಜಯೇತ್ ।
ತ್ಯಾಜ್ಯಂ ಪರ್ಯುಷಿತಂ ಜಂತು ದೂಷಿತಂ ಪಾದಲಂಘಿತಂ ।
ಮ್ಲಾನಂ ಸ್ಪೃಷ್ಟಂತಥಾಽ ಸ್ಪೃಶ್ಯೈರ್ನೀತಂಚ ಪ್ರತಿಲೋಮಜೈಃ ।
ಕೀಟ ಕೇಶಾಪ ವಿದ್ಧಾನಿ ಶೀರ್ಣಪರ್ಯುಷಿ ತಾನಿಚ ।
ಸ್ವಯಂ ಪತಿತ ಪುಷ್ಪಾಣಿ ತ್ಯಜೇದುಪ ಹತಾನಿಚ ॥

ಎಂಬ ಆಗಮದ ವಚನಾನನುಸಾರವಾಗಿ ಹುಳಗಳು ಕಡಿದಂಥ, ಜೇಡರ ಹುಳವು ಗರಿಗಟ್ಟಿದಂಥ, ಗಾಳಿಯಿಂದ ತಾನಾಗಿ ಉದುರಿ ಬಿದ್ದಂಥ, ಬಿಲ್ವಪತ್ರ ಪುಷ್ಪಗಳನ್ನು ತರಬಾರದು. ಮತ್ತು ಹಳೆ ಹೂಗಳನ್ನೂ ಕಾಲಿನಿಂದ ದಾಟಿದವುಗಳನ್ನೂ, ಬಾಡಿ ಒಣಗಿದವುಗಳನ್ನೂ, ಕೀಳು ಜನರು ಮುಟ್ಟಿದವುಗಳನ್ನೂ, ಹಾಗೂ ತಂದವುಗಳನ್ನೂ ತಾವಾಗಿ ಎದುರು ಬಿದ್ದವುಗಳನ್ನೂ, ಅರಳದೇ ಇದ್ದವುಗಳನ್ನೂ, ದುರ್ಗಂಧಯುಕ್ತ ಪುಷ್ಪಗಳನ್ನೂ, ಎಂದೂ ತರಬಾರದು. ಮತ್ತು ಅವುಗಳನ್ನು ಉಪಯೋಗಿಸಬಾರದು. ಇದನ್ನು ಸ್ಮರಣದಲ್ಲಿಟ್ಟುಕೊಂಡು ಬೆಳಗಿನ

ಝಾವದಲ್ಲಿ ಶೌಚಾದಿ ಕ್ರಿಯೆಗಳನ್ನು ತೀರಿಸಿಕೊಂಡ ನಂತರ ಬಿಲ್ವಪತ್ರ ಪುಷ್ಪಗಳನ್ನು ಸಂಗ್ರಹಿಸಲು ಬಿಲ್ವ ಗಿಡದ ಮುಂದೆ ನಿಂತು:—

"ಪುಣ್ಯವೃಕ್ಷ ಮಹಾಭಾಗ ಮಾಲೂರ ಶ್ರೀ ಫಲ ಪ್ರಭೋ ।
ಮಹೇಶ್ವರಶ್ಯ ಪೂಜಾರ್ಥಂ ತ್ವತ್ಪತ್ರಾಣಿ ಜಿನೋsವ್ಯಹಂ ॥

ಎಂದು ಪ್ರಾರ್ಥನೆಯನ್ನು ಮಾಡಿ ಮೂರು ದಲಗಳುಳ್ಳ ಬಿಲ್ವ ಪತ್ರಗಳನ್ನು ಎತ್ತಬೇಕು. ಮುದುಡಿದವೂ, ಹರಿದವೂ, ಉದುರಿದವೂ, ತೂತುಗಳಿಲ್ಲದವೂ ಇರಬೇಕು. ಮತ್ತು ಆದಷ್ಟು ಜಳಕ ಮಾಡಿ ಪತ್ರಿ ಪುಷ್ಪಗಳನ್ನೂ ಸಂಗ್ರಹಿಸುವದು ಉತ್ತಮವಾದ ಪಕ್ಷವಾಗಿದೆ. ಕನಿಷ್ಠ ಪಕ್ಷ ಕೈ-ಕಾಲು ಮುಖಗಳನ್ನು ತೊಳೆದುಕೊಂಡು ತರಬೇಕು.

ಶುದ್ಧವಾದ ಮಡಿ ಬಟ್ಟೆಯಲ್ಲಿ ಮೇಲಿನ ಕ್ರಮದಂತೆ ಶಿವನಾಮ ಸ್ಮರಣೆ ಅಥವಾ ಗುರುನಾಮ ಸ್ಮರಣೆ ಮಾಡುತ್ತ ಮನೆಗೆ ತರಬೇಕು. ತರುವಾಗ ಪುಷ್ಪಗಳನ್ನು ಮೊಣಕಾಲ ಕೆಳಗೆ ನೇತಾಡಿಸಬಾರದು. ಎಡಗೈಯಿಂದ ಮುಟ್ಟಬಾರದು- ಪಾದಗಳಲ್ಲಿ ಪಾದರಕ್ಷೆಗಳನ್ನು ಮೆಟ್ಟಿರಬಾರದು. ಅಶುಭ ವಸ್ತುಗಳನ್ನು ಹಾಗೂ ಅಶುಭ ಸ್ಥಾನವನ್ನು ದಾಟಬಾರದು. ತುಳಿಯಬಾರದು. ಅನ್ಯರು ಮುಟ್ಟಬಾರದು. ಲಿಂಗ ಇಲ್ಲದ ಭವಿಗಳು ನೋಡಬಾರದು ಮುಟ್ಟಬಾರದು. ಮೈಲಿಗೆ ಬಟ್ಟೆಗಳಿಗೆ ಮುಟ್ಟಿಸದಂತೆ ಎತ್ತರಿಸಿ ಹಿಡಿದುಕೊಂಡು ಶಿವಪೂಜಾಮನೆಯಲ್ಲಿ ಎತ್ತರವಾದ ಸ್ಥಳದಲ್ಲಿ ಇಡಬೇಕು.

## ಬಟ್ಟೆಗಳ ಮಡಿ-ಮೈಲಿಗೆಗಳ ವಿಚಾರ

ವಸ್ತ್ರ ಷಣಾಚಾನ್ವಿತಂ ಕುರ್ಯಾತ್ಸರ್ವ ಕಾರ್ಯಾಣಿ ವೈದ್ವಿಜಾಃ ।
ನಮಸ್ಕಾರಾದಿಕಂ ಸರ್ವಂ ಗುರು ಶುಶ್ರೂಷಣಾದಿಕಂ ।
ವಸ್ತ್ರಶೌಚವಿಹೀನಾತ್ಮಾ ಹ್ಯ ಶಚಿರ್ನಾತ್ರ ಸಂಶಯಃ ।
ದೇವಕಾರ್ಯ ಪ್ರಯುಕ್ತಾನಾಂ ಪ್ರತ್ಯಹಂ ಶೌಚ ಮಿಷ್ಯತೇ ॥
ಇತರೇಷಾಂ ಹಿ ವಸ್ತ್ರಾಣಾಂ ಶೌಚಂ ಕಾರ್ಯಂ ಮಲಾಗಮೇ ।
ವರ್ಜಯೇತ್ಸರ್ವ ಯತ್ನೇನ ವಾಸೋs ನೈರ್ವಿಧ್ಯತಂ ದ್ವಿಜಾಃ ॥

ಎಂಬ ಲಿಂಗಪುರಾಣ ಪ್ರಮಾಣದ ಉಕ್ತಿಯಂತೆ ಗುರು ಸೇವೆಯನ್ನು ಮಾಡಬೇಕಾದರೆ ಗುರುಗಳ ಸ್ನಾನ ಲಿಂಗಪೂಜೆ ಇತ್ಯಾದಿಗಳನ್ನು ಮಾಡಿಸುವಾಗ ಶುದ್ಧ ಮಡಿ ಬಟ್ಟೆಗಳನ್ನು ಉಟ್ಟಿರಬೇಕು. ಹಾಗೂ ಯಾವದೇ ಮಂಗಲ ಕಾರ್ಯಗಳಲ್ಲಿಯೂ ಸಹ ಶುದ್ಧ ಮಡಿ ಬಟ್ಟೆಯನ್ನೇ ಉಟ್ಟುಕೊಳ್ಳಬೇಕು. ತೊಳೆಯದ ಬಟ್ಟೆಗಳನ್ನು ಉಟ್ಟುಕೊಂಡರೆ ಅಸುಚಿ(ಮೈಲಿಗೆ)ಯುಂಟಾಗುವದು. ಆದರೆ ಶಿವಪೂಜಕನು ಮಾತ್ರ ಪ್ರತಿದಿವಸ ತೊಳೆದ ಶುದ್ಧ ಮಡಿ ಬಟ್ಟೆಗಳನ್ನು ಧರಿಸಿಕೊಳ್ಳಬೇಕು. ಬೇರೆ ಬಟ್ಟೆಗಳನ್ನೂ ಹೊಲಸು ಆದಾಗ ಮಾತ್ರ ಬೇರೆಯವರು

ಮುಟ್ಟದ ಅರಿವೆಯನ್ನು ತೊಳೆದು ಹಾಕಬೇಕು. ರೇಶಿಮೆ ಬಟ್ಟೆ ನಾರು ಬಟ್ಟೆಗಳನ್ನಾದರೂ ನಿತ್ಯದಲ್ಲಿ ತೊಳೆದು ಉಪಯೋಗಿಸಬೇಕು. ಬಹು ಜನರು ಇವುಗಳಿಗೆ ಮೈಲಿಗೆ ಇಲ್ಲೆಂದು ತಿಳಿದು ಉಟ್ಟುಕೊಂಡು, ಹೊದ್ದುಕೊಂಡು, ತಿರುತಿರುಗಿ ಅವುಗಳನ್ನೇ ತೊಳೆಯದೇ ಉಪಯೋಗಿಸುವ ವಾಡಿಕೆಯಾಗಿದೆ. ಇದು ಅನಾಚಾರದ ಲಕ್ಷಣವಾಗಿದೆ. ಆದ ಕಾರಣ ಇದನ್ನು ತ್ಯಾಜ್ಯ ಮಾಡಬೇಕು.

ಆಧುನಿಕ ಕೆಲವು ಆಚಾರವಂತರು ರೇಶಿಮೆ ನಾರು ಬಟ್ಟೆಗಳಿಗೆ ಮೈಲಿಗೆ ಇಲ್ಲೆಂದು ತಿಳಿದು ಪುನಃ ಪುನಃ ಶಿವಪೂಜಾ ಕಾಲದಲ್ಲಿ ದೀಕ್ಷಾ ವಿವಾಹಾದಿ ಮಂಗಲ ಕಾರ್ಯಗಳಲ್ಲಿಯೂ ಗುರುಸೇವಾ ಗುರುಪೂಜಾ ಮಾಡಿಸುವಾಗಲೂ ಅವುಗಳನ್ನು ತೊಳೆಯದೇ ಉಪಯೋಗ ಮಾಡುತ್ತಾರೆ. ಬಾಯಿಂದ ಮಡಿ ಮಡಿಯೆಂದು ಬಡಾಯಿ ಹೇಳಿ ಕೃತಿಯಲ್ಲಿ ಸದಾಚಾರದ ತತ್ವವನ್ನು ತಿಳಿಯದೆ ಮೇಲಿನ ಅಮಂಗಲ ಪದ್ಧತಿಯನ್ನು ವಾಡಿಕೆಯಾಗಿಟ್ಟುಕೊಂಡಿದ್ದಾರೆ. ದಯ ಮಾಡಿ ಇನ್ನು ಮುಂದೆ ಇಂಥ ಪದ್ಧತಿಗಳನ್ನು ಸದಾಚಾರಿಗಳು ತ್ಯಾಜ್ಯ ಮಾಡಬೇಕು. ಇಲ್ಲವಾದರೆ ವೀರಶೈವರ ಮಡಿ-ಮೈಲಿಗೆ ಎಂಥಾದ್ದು ಎಂದು ಅನ್ಯರು ಮಾಡುವ ಅಪಹಾಸ್ಯಕ್ಕೆ ಗುರಿಯಾಗಬೇಕು.

ಹಲಕೆಲವರು ಮಾತ್ರ ಒಂದು ಸಲ ಮಾತ್ರ ಸ್ನಾನ ಮಾಡಿ ರಾತ್ರಿ ಸ್ನಾನ ಮಾಡದೆ ಕೈ ಕಾಲು ಮುಖವನ್ನು ತೊಳೆದುಕೊಂಡು ಶುಚಿಯಾದವೆಂದು ತಿಳಿದುಕೊಳ್ಳುತ್ತಾರೆ. ಮುಂಜಾನೆಯಿಂದ ಸಾಯಂಕಾಲದ ವರೆಗೂ ಮಲಮೂತ್ರ ವಿಸರ್ಜನೆ ಮಾಡಿ ಅದರಿಂದ, ಅಶುದ್ಧವಾದ ಬಟ್ಟೆಯನ್ನುಟ್ಟುಕೊಂಡು ಪೂಜೆ ಮಾಡುವದಾದರೂ-ಊಟ ಮಾಡುವದಾದರೂ ಶುದ್ಧ ಅನಾಚಾರವೆನಿಸುತ್ತದೆ. ಅಂಥ ಯಾವ ಬಟ್ಟೆಗಳು ಮತ್ತೊಮ್ಮೆ ತೊಳೆಯದ ಹೊರ್ತಾಗಿ ಮಡಿಗೆ ಬರಲಾರವು "ದೀಕ್ಷಾ" ಆಗದಿದ್ದವರು ಮಾತ್ರ ಅನುಕೂಲವಿಲ್ಲದ ಪಕ್ಷದಲ್ಲಿ ಕೈಕಾಲು ಮುಖವನ್ನು ತೊಳೆದುಕೊಂಡು ಮತ್ತೊಂದು ಬೇರೆ ಬಟ್ಟೆಯನ್ನುಟ್ಟು ಪೂಜೆ ಮಾಡಿಕೊಂಡು ಊಟ ಮಾಡಲು ಅಭ್ಯಂತರವಿಲ್ಲಾ. ಹಲಕೆಲವು ಸ್ತ್ರೀಯರು ಮುಟ್ಟಾದಾಗ್ಯೂ ಸ್ನಾನ ಮಾಡದೆ, ಮತ್ತೆ ಕೆಲವರು ನಿತ್ಯ ಸ್ನಾನವನ್ನು ಮಾಡದೆ ಹಾಗೆಯೇ ಅಡಿಗೆ ಮಾಡಿ ಊಟ ಮಾಡುವರು. ಇಂಥವರ ಕೈಯಿಂದ ತಯಾರಾದ ಅಡಿಗೆಯು ಶಿವಲಿಂಗಕ್ಕೆ ನೈವೇದ್ಯ ಮಾಡಲಿಕ್ಕೂ, ಗುರುಗಳಿಗೆ ಅರ್ಪಿತ ಮಾಡಲಿಕ್ಕೂ ಅಯೋಗ್ಯ ಹಾಗೂ ಅಶುದ್ಧವಾದದ್ದು ಆಗಿರುತ್ತದೆ. ಹೀಗೆ ಮಾಡುವದು ಪಾಪಕಾರ್ಯವೆನಿಸುತ್ತದೆ ಆದ ಕಾರಣ ಇಂಥ ಅಮಂಗಲ ರೂಢಿಯನ್ನು ತಪ್ಪಿಸಿ ನಿತ್ಯದಲ್ಲೂ ಸ್ನಾನ ಪೂಜಾದಿಗಳನ್ನು ಮಾಡುವ ಶುದ್ಧಾಚಾರವನ್ನು ಬಳಿಕೆಯಲ್ಲಿ ತರಬೇಕು. ಸ್ನಾನ ಮಾಡದಿರುವದು ಮಹಾ ದರಿದ್ರರ ಲಕ್ಷಣವು. ದರಿದ್ರತನದಕ್ಕಿಂತ ಹೆಚ್ಚಿನ ಶತ್ರು ಯಾರೂ ಇರುವದಿಲ್ಲ. ಇದು

ಮಾನವತೆಯನ್ನು ನಷ್ಟ ಮಾಡುತ್ತದೆ. ''ಆಲಸ್ಯವು ಮಹಾ ವೈರಿ'' ಎಂದು ನೀತಿಶಾಸ್ತ್ರವು ಹೇಳುತ್ತದೆ-ಅದು ಕಾರಣ ಆಲಸ್ಯತನವನ್ನು ಬಿಟ್ಟು ನಿತ್ಯದಲ್ಲೂ ಪ್ರತಿಯೊಬ್ಬ ಸ್ತ್ರೀ ಪುರುಷರೂ, ಚಿಕ್ಕ ಚಿಕ್ಕ ಮಕ್ಕಳೂ ಸ್ನಾನ ಮಾಡಿ ಶಿವಪೂಜಾ ಮಾಡಬೇಕು. ಸ್ನಾನ ಮಾಡುವದರಿಂದ ಆರೋಗ್ಯಕ್ಕೆ ಅತ್ಯಂತ ಲಾಭವಿದೆ. ೧) ಶರೀರದಲ್ಲಿ ಬಲ ಬೆಳೆಯುವದು, ೨) ಮುಖದ ಕಾಂತಿ ಹಾಗೂ ರೂಪಗಳು ವೃದ್ಧಿಯಾಗುವವು, ೩) ಮೇಧಾಶಕ್ತಿ ಅಂದರೆ ಬೌದ್ಧಿಕ ಶಕ್ತಿ ಇಮ್ಮಡಿ ಹೆಚ್ಚುವದು, ೪) ಆರೋಗ್ಯ ವೃದ್ಧಿಯಾಗಿ ದೇಹದಲ್ಲಿ ನಿಜವಾದ ಸೌಖ್ಯ ನೆಲೆಸುವದು, ೫) ಜೀವನದಲ್ಲಿ ಶಾಂತಿಯುಂಟಾಗುವದಲ್ಲದೆ, ಆಯುಷ್ಯವೂ ಹೆಚ್ಚುವದು, ೬) ಬೆಳಗಿನ ಸ್ನಾನವಂತೂ ಒಳ್ಳೇ ಹಿತಕಾರಿಯೂ, ನಿರೋಗಕಾರಕವಾಗಿಯೂ ಆಗಿರುವದು, ೭) ಬೆವರು ಮೊದಲಾದ ಕೊಳೆಯು ದೂರಾಗಿ ನರಗಳು ಬಲಗೊಳ್ಳುವವು, ೮) ಶಾರೀರಿಕ ಚಟುವಟಿಕೆಯ ಕಾರ್ಯಗಳನ್ನೂ ಬೌದ್ಧಿಕ ಕಾರ್ಯಗಳನ್ನೂ ಮಾಡಲಿಕ್ಕೆ ಉಲ್ಲಾಸ (ಹರುಪು) ಇಮ್ಮಡಿಯಾಗುವದು. ಅಂತೂ ಸ್ನಾನವು ಇಹಪರ ಸೌಖ್ಯ ಸಂಪತ್ತಿಗೆ ಕಾರಣೀಭೂತವೆಂದು ಧರ್ಮಶಾಸ್ತ್ರಗಳು ಹೇಳುತ್ತವೆ.

ಸ್ನಾನವನ್ನು ನದಿ-ಭಾವಿಗಳಲ್ಲಿ ಮಾಡುವದು ಉತ್ತಮ ಪಕ್ಷವು (ಇದರಿಂದ ಹೆಚ್ಚಾಗಿ ನಿರೋಗವುಂಟಾಗುವದು.) ಹೊಂಡ ಕೆರೆ ಹಳ್ಳಗಳಲ್ಲಿ ಮಾಡುವದು ಮಧ್ಯಪಕ್ಷವು. ಮನೆಯಲ್ಲಿ ತಂದ ನೀರಿನಿಂದ ಮಾಡುವದು ಕನಿಷ್ಟ ಪಕ್ಷವು. ಅಂತೂ ಸಾಧ್ಯವಿದ್ದಂತೆ ಸ್ನಾನ ಮಾಡಬೇಕು. ಅಗಸರು ಒಗೆಯುವ ಭಾವಿ ಕೆರೆಗಳಲ್ಲಿ ಹೊಲಸಿದ್ದ ಜಲಾಶಯದಲ್ಲಿ ಅಂತ್ಯಜರ ಭಾವಿ ಕೆರೆಗಳಲ್ಲಿ ಝಳಕ ಮಾಡಬಾರದು. ಹೊಳೆ ಹಳ್ಳ ಮುಂತಾದವುಗಳಲ್ಲಿ ಅಗಸರು ಬಟ್ಟೆ ತೊಳೆಯುವ ಸ್ಥಾನದಿಂದ ಕನಿಷ್ಟ ಹತ್ತು ಮೊಳದ ಅಂತರವನ್ನು ಬಿಟ್ಟು ಉಪಯೋಗಿಸಲು ಅಭ್ಯಂತರವಿಲ್ಲೆಂದು ಸ್ಮೃತಿ ಗ್ರಂಥಗಳು ಹೇಳುತ್ತವೆ.

ಶಿವಪೂಜಕನು ಬೆಳಿಗ್ಗೆ ತಾನು ಪತ್ರಿ-ಪುಷ್ಪಗಳನ್ನು ತರುವದಕ್ಕಾಗಿ ಹೋಗುವಾಗ ಮೈಲಿಗೆ ಬಟ್ಟೆಗಳನ್ನು ತೆಗೆದುಕೊಂಡು ಹೊಳೆ-ಹಳ್ಳ, ಕೆರೆ-ಭಾವಿಗಳಿಗೆ ಹೋಗಬೇಕಾಗಿದ್ದರೆ ಮೊದಲು ಮೈಲಿಗೆ ಬಟ್ಟೆಗಳನ್ನು ತೊಳೆದಿಟ್ಟುಕೊಂಡು ನಂತರ ಪತ್ರಿ ಪುಷ್ಪಾದಿಗಳನ್ನು ಹಿಂದೆ ಹೇಳಿದ ಕ್ರಮ ಪ್ರಕಾರವಾಗಿ ಎತ್ತಬೇಕು. ಹಾಗೂ ಆ ಮಡಿಮಾಡಿಕೊಂಡ ಬಟ್ಟೆಗಳನ್ನು ಮನೆಗೆ ತಂದು ಆರಿಸಬೇಕು. ಹಾಗೇ ಆರಿಸಿದ ಬಟ್ಟೆ ಮಡಿಗೆ ಬರಲಾರದು. ಮತ್ತು ಅಗಸರು ತೊಳೆದ ಬಟ್ಟೆಗಳೂ ಮಡಿಗೆ ಬರಲಾರವು. ಅವುಗಳನ್ನು ಪುನಃ ತೊಳೆದುಕೊಂಡು ಉಪಯೋಗಿಸಬೇಕು,

# ಸ್ತ್ರೀಯರ - ಆಚಾರದ ಮಹತ್ವ

ವೀರಶೈವರಲ್ಲಿ ಸ್ತ್ರೀಯರಿಗೊಂದು ಆಚಾರ ಪದ್ಧತಿ ಪುರುಷರಿಗೊಂದು ಆಚಾರ-ಪದ್ಧತಿ, ಬಾಲ-ಬಾಲಕಿಯರಿಗೊಂದು ಪದ್ಧತಿ, ವೃದ್ಧರಿಗೊಂದು ಪದ್ಧತಿ, ಹೀಗೆ ಭಿನ್ನ ಭಿನ್ನವಾಗಿ ಆಚಾರ ಪದ್ಧತಿಯನ್ನು ಹೇಳಿರುವದಿಲ್ಲ. ಸಮಸ್ತ ಲಿಂಗಧಾರಿಗಳ ಸಲುವಾಗಿ ಒಂದೇ ಪದ್ಧತಿಯ ಆಚಾರವನ್ನು ಹೇಳಲಾಗಿದೆ. ಆದರೆ ಕೆಲವು ಸ್ತ್ರೀಯರಿಗೆ ತಮ್ಮ ಪುರುಷರು ಲಕ್ಷಗೊಡದ ಮೂಲಕ ಅವರಿಗೆ ಆಚಾರ-ವಿಚಾರಗಳ ಕಲ್ಪನೆ ಬರುವದಿಲ್ಲ. ಅಂಥವರಿಗೆ ಆಚಾರ-ವಿಚಾರಗಳ ಕಲ್ಪನೆ ಬರಲೆಂದೂ, ಮತ್ತು ಆಧುನಿಕ ಕಾಲದಲ್ಲಿ ಕೆಲವು ಸ್ತ್ರೀಯರೇ ತಮ್ಮ ವ ಪುರುಷರ ಆಚಾರವನ್ನು ಸುಧಾರಿಸಬೇಕಾದ ಕಾರಣ ಸ್ತ್ರೀಯರ ಆಚಾರ ಪದ್ಧತಿಯನ್ನು ಬೇರ್ಪಡಿಸಿ ನಿತ್ಯೋಪಯೋಗವಾಗುವಂತೆ ಶಕ್ಯವಿದ್ದ ಮಟ್ಟಿಗೆ ಬರೆಯಲಾಗಿದೆ.

ಸ್ತ್ರೀಯರಾದರೂ (ಹೆಣ್ಣು ಮಕ್ಕಳಾದರೂ)ಸಹ ಗಂಡನು ಏಳುವದಕ್ಕಿಂತ ಮುಂಚಿತವಾಗಿಯೇ ಬ್ರಾಹ್ಮಿ ಮುಹೂರ್ತದಲ್ಲಿ ಎದ್ದು ಶಿವನನ್ನೂ, ಗುರುವಿನನ್ನೂ ಪ್ರಾರ್ಥಿಸಿ ತನ್ನ ಇಷ್ಟ ಲಿಂಗಕ್ಕೆ ಹಾಗೂ ಗಂಡನಿಗೂ ನಮಸ್ಕರಿಸಿ ಈ ಹಿಂದೆ ಹೇಳಿದಂತೆ ತಮ್ಮ ಶೌಚಾದಿ ಕೆಲಸಗಳನ್ನು ತೀರಿಸಿಕೊಂಡು, ತದನಂತರ ಮಕ್ಕಳ ಶೌಚಾದಿ ಕೆಲಸಗಳನ್ನು ಮುಗಿಸಿ, ಅವರಿಗೆ ಮಡಿ ವಸ್ತ್ರಗಳನ್ನು ಧರಿಸಿ ಅವರಿಗೂ, ಹಾಗೂ ತಾವೂ ತ್ರಿಪುಂಡ ಭಸ್ಮ ಧಾರಣ ಮಾಡಬೇಕು. ಕೆಲವು ಸ್ತ್ರೀಯರು ಎರಡು ಬೆರಳಿನಿಂದ ಭಸ್ಮ ಧರಿಸುತ್ತಾರೆ. ಹಾಗೆ ಧರಿಸದೆ ಮೂರು ಬೆರಳುಗಳಿಂದ ಭಸ್ಮ ಧರಿಸಿದರೆ ಅದು ಶಾಸ್ತ್ರೋಕ್ತ ತ್ರಿಪುಂಡ ಭಸ್ಮ ಧಾರಣವಾಗುತ್ತದೆ.

ತದನಂತರ ಮಕ್ಕಳನ್ನು ವಿದ್ಯಾರ್ಜನೆಯ ಸಲುವಾಗಿ ಶಾಲೆಗೆ ಕಳುಹಿಸಬೇಕು. ತಾವು ಅತ್ತೆ ಮಾವಂದಿರಿಗೂ ಗುರು ಹಿರಿಯರಿಗೂ ನಮಸ್ಕರಿಸಿ ಮನೆಯಲ್ಲಿಯ ಕಸವನ್ನು ಸ್ವಚ್ಛವಾಗಿ ತೆಗೆದು ಅಡಿಗೆಮನೆ (ಒಲೆ ಸಹಿತವಾಗಿ) ಶಿವಪೂಜೆ ಮನೆ ತಲೆಬಾಗಿಲು (ದ್ವಾರಬಾಗಿಲು) ಗಳನ್ನು ಸಾರಿಸಿ ರಂಗವಲ್ಲಿಯನ್ನಿಡಬೇಕು. ಬಳಿಕ ಅಡಿಗೆಯ ಪಾತ್ರೆಗಳನ್ನು ಬೆಳಗಿಟ್ಟುಕೊಳ್ಳಬೇಕು. ಮತ್ತು ಆಗ ಅಡಿಗೆ ಮಾಡಲಿಕ್ಕೆ ಬೇಕಾಗುವ ಸಾಮಗ್ರಿಗಳನ್ನು ತಯಾರು ಮಾಡಿಕೊಳ್ಳಬೇಕು. ತದನಂತರ ಮಡಿ ಬಟ್ಟೆಗಳನ್ನು ಧರಿಸಿಕೊಂಡು ಮಡಿ ನೀರನ್ನು ತಂದುಕೊಂಡು ಗುರೂಪದೇಶದಂತೆ ಶಿವಲಿಂಗ ಪೂಜೆಯನ್ನು ಮಾಡಿಕೊಂಡು ಶೋಧಿಸಿದ ಮಡಿನೀರಿನಿಂದಲೇ ಅಡಿಗೆಯನ್ನು ಮಾಡಬೇಕು. ಇನ್ನು ಮಡಿ ಬಟ್ಟೆಗಳನ್ನು ಮಾಡಬೇಕಾದರೆ ಆದಷ್ಟು ಹೆಣ್ಣು ಮಕ್ಕಳು ತಮ್ಮ ಬಟ್ಟೆಗಳನ್ನು ತಾವೇಯಾಗಲೀ ಅಥವಾ ತಮ್ಮವರ ಕಡೆಯಿಂದಾಗಲಿ ತೊಳೆಯಿಸುವದು ಉತ್ತಮವು. ಅನಿವಾರ್ಹ ಪ್ರಸಂಗದಲ್ಲಿ ಅನ್ಯರು ತೊಳೆದ ಬಟ್ಟೆಗಳನ್ನು ತಮ್ಮ ನೀರಿ

ನಿಂದ ಪುನಃ ತೊಳೆದು ಹಿಂಡಿಕೊಂಡು ಉಪಯೋಗಿಸಿಕೊಳ್ಳಬೇಕು. "ಇಂದಿನ ಪೀಳಿಗೆಯು ಮುಂದಿನ ಜನಾಂಗವೆಂದು" ತಿಳಿದು ಸ್ತ್ರೀಯರು ತಮ್ಮ ಚಿಕ್ಕಮಕ್ಕಳನ್ನು ಸುಧಾರಿಸಿ ಆಚಾರ ವಿಚಾರವಂತರನ್ನಾಗಿ ಮಾಡುವದು ಅವರ ಮೊದಲನೆಯ ಕರ್ತವ್ಯವಾಗಿದೆ.

ಆಧುನಿಕ ಕಾಲದಲ್ಲಿ ನಮ್ಮ ವೀರಶೈವರಲ್ಲಿ ಆ ಚಾರದ ಮಹತ್ವವನ್ನು ತಿಳಿಯದೆ ನಮಗೆ ಯಾವ ಸೂತಕಗಳಿಲ್ಲ ಹಾಗೂ ಯಾವ ದೋಷಗಳಿಲ್ಲ ಎಂದು ಭಾವಿಸಿ ನಿತ್ಯದಲ್ಲಿ ಸ್ನಾನವನ್ನು ಮಾಡದೆ ಹಾಗೆಯೇ ಅಡಿಗೆಯನ್ನು ಮಾಡಿ ಊಟವನ್ನು ಮಾಡುತ್ತಿರುವರು. ಪ್ರತಿ ತಿಂಗಳಲ್ಲಿಯೂ ಮುಟ್ಟಾದಾಗ ಸಹ ನಿತ್ಯ ಸ್ನಾನ ಮಾಡದೆ ಅಡಿಗೆಯನ್ನು ಮಾಡಿ ಗಂಡನಿಗೂ ದೇವರಿಗೂ ಗುರು ಹಿರಿಯರಿಗೂ ನೀಡುವರು. ಇದು ಬಹಳ ಅಧರ್ಮದ ಕಾರ್ಯವು ಅನ್ಯಾಯದ್ದು ಆಗಿರುತ್ತದೆ. ಆದ ಕಾರಣ ಮೇಲೆ ವಿವರಿಸಿದಂತೆ ಪ್ರತಿಯೊಬ್ಬ ವೀರಶೈವ ಸ್ತ್ರೀಯರು ಸದಾಚಾರವನ್ನು ಆಚರಿಸಿ ಸುಮಂಗಲೆಯರು, ಸುಶೀಲೆಯರು ಎನಿಸಿಕೊಂಡು ದೀರ್ಘ ಮುತ್ತೈದೆಯುಳ್ಳವರಾಗಿ ದೀರ್ಘಾಯುಷ್ಯಯುಳ್ಳವರಾಗಬೇಕು. ಹಾಗೂ ಆಚಾರಕ್ಕೂ ಆರೋಗ್ಯಕ್ಕೂ ವಿಶೇಷ ಸಂಬಂಧವಾಗಿರುವ ತತ್ವಗಳನ್ನು ತಿಳಿದುಕೊಂಡು ಪ್ರತಿಯೊಬ್ಬ ಸ್ತ್ರೀಯರು ಮೇಲಿನಂತೆ ಆಚರಿಸಿ ಧನ್ಯರಾಗಬೇಕು.

## ಪಾತ್ರೆಗಳ - ಶುದ್ಧೀಕರಣ ವಿಚಾರ

ಭಸ್ಮನಾ ಶುದ್ಧ್ಯತೇ ಕಾಂಸ್ಯಂ ಕ್ಷಾರೇಣಾಯಸ ಮುಚ್ಯತೇ |
ತಾಮ್ರ ಮಾಮ್ಲೇನ ವೈ ವಿಪ್ರಾಸ್ತ್ರ ಪುಸೀಸಕಯೋರಪಿ |
ಹೈಮಮದ್ಭಿಃ ಶುಭಂ ಪಾತ್ರಂ ರೌಪ್ಯ ಪಾತ್ರಂ ದ್ವಿಜೋತ್ತಮಾಃ ||

ಎಂಬ ಲಿಂಗಪುರಾಣೋಕ್ತಿಯಂತೆ ಕಂಚು ಭಸ್ಮದಿಂದಲೂ, ಕಬ್ಬಿಣವು ಉಪ್ಪಿನಿಂದಲೂ, ತಾಮ್ರ-ಸೀಸು-ತವರುಗಳು ಹುಳಿಯಿಂದಲೂ, ಬಂಗಾರ, ಬೆಳ್ಳಿಗಳು ನೀರಿನಿಂದಲೂ ಶುದ್ಧವಾಗುತ್ತವೆ. ಹಿತ್ತಾಳಿಯುಮಣ್ಣಿನಿಂದ ಶುದ್ಧವಾಗುತ್ತದೆ. ಕಬ್ಬಿಣವು ಗೋಮಯದಿಂದಲೂ ಶುದ್ಧವಾಗುವದುಂಟು. ಆದ ಕಾರಣ ಈ ಪದ್ಧತಿಯನ್ನು ಬಳಿಕೆಯಲ್ಲಿ ತರುವದು ಉತ್ತಮವು.

ಭೋಜನಂ ಪಾದಶೌಚಂಚ ಯಃ ಕುರ್ಯಾತ್ಕಾಂಸ್ಯ ಭಾಜನೇ |
ಷಣ್ಮಾಸಂ ಭುವಿ ನಿಷೆಪ್ಯ ಪುನರಂಗಾರ ಮಾದಿಗೇತ್ ||

ಕೆಲವರು ಕಂಚಿನ ಗಂಗಾಳ ಬಟ್ಟಲಗಳಲ್ಲಿ ಊಟ ಮಾಡುವ ವಾಡಿಕೆಯಾಗಿದೆ. ಇದು ಅನಾಚಾರವೆನಿಸುತ್ತದೆ. ಯಾಕಂದರೆ ಕಂಚಿನ ಪಾತ್ರೆಯಲ್ಲಿ ಊಟ ಮಾಡಿದರೆ ಗುರು ಜಂಗಮರ ಪಾದ ತೊಳೆದುಕೊಂಡರೆ ಅದು ಅಪುಚಿ

ಯೆನಿಸುವದರಿಂದ ಆರು ತಿಂಗಳ ಭೂಮಿಯಲ್ಲಿ ಹೂಳಿಟ್ಟು ತದನಂತರ ಸುಟ್ಟರೆ ಶುದ್ಧವಾಗುವದೆಂದು ಮೇಲೆ ಉದಾಹರಿಸಿದ ಪ್ರಮಾಣವದೆ. ಆದ ಕಾರಣ ಕಂಚಿನ ಪಾತ್ರೆಯ ಉಪಯೋಗವನ್ನು ತಾಜ್ಯ ಮಾಡಿ ಶುದ್ಧ ಹಿತ್ತಾಳಿ ಪಾತ್ರೆಗಳನ್ನು ಅಥವಾ ಜರ್ಮನ್ ಶಿಲವರ ಪಾತ್ರೆ ಇಲ್ಲವೆ ಸ್ಟೀಲ ಪಾತ್ರೆಗಳನ್ನು ಉಪಯೋಗಿಸಬೇಕು. ಇವು ಬೇಗ ಶುದ್ಧೀಕರಣವಾಗುವದರಿಂದ ಆಚಾರಕ್ಕೆ ಒಳ್ಳೇ ಅನುಕೂಲವಾಗುತ್ತವೆ.

## ಮಣ್ಣಿನ ಪಾತ್ರೆಗಳು ಅಶುದ್ಧವೆನಿಸುತ್ತವೆ.

ಮಣ್ಣಿನ ಪಾತ್ರೆಗಳನ್ನು ಒಮ್ಮೆ ಉಪಯೋಗ ಮಾಡಿದ ನಂತರ ಅವು ಪುನಃ ಉಪಯೋಗ ಮಾಡಲಿಕ್ಕೆ ಬರುವದಿಲ್ಲ. ಆದ ಕಾರಣ ಮಾಡುವದಕ್ಕಾಗಲೀ ಅಥವಾ ನೀರು ತುಂಬಿ ಇಡುವದಕ್ಕಾಗಲೀ ಉಪಯೋಗಿಸಬಾರದು. ಆಚಾರ ದೃಷ್ಟಿಯಿಂದ ಮಣ್ಣಿನ ಪಾತ್ರೆಗಳು ನಿಷಿದ್ಧವಾಗುತ್ತವೆ. ಹಿತ್ತಾಳಿ ಮೊದಲಾದ ಪಾತ್ರೆಗಳು ಮಾತ್ರ ಬೆಳಗಿದರೆ ಅವು ಶುದ್ಧವಾಗುತ್ತವೆ. ಮಣ್ಣಿನ ಪಾತ್ರೆಗಳು ಬೆಳಗಲಿಕ್ಕೆ ಬರುವಂತಿಲ್ಲ. ಬೆಳಗಿದರೆ ಅವು ಶುದ್ಧವಾಗುವದಿಲ್ಲ. ಮತ್ತು ಅವುಗಳನ್ನು ಊಟ ಮಾಡಿದ ಜಾಗೆಯಲ್ಲಿ ಇಡುವದರಿಂದಾಗಲೀ ಅಥವಾ ಅವುಗಳನ್ನು ಚಿಕ್ಕ ಮಕ್ಕಳು ಎಂಜಲ ಕೈಯಿಂದ ಆಕಸ್ಮಾತ್ ಮುಟ್ಟುವದರಿಂದಾಗಲೀ ಆಗಿ ಪುನಃ ಅವೇಪಾತ್ರೆಗಳಲ್ಲಿ ಅಡಿಗೆ ಮಾಡಿ ಗುರುಗಳಿಗೆ ಅಥವಾ ಇಷ್ಟಲಿಂಗಕ್ಕೆ ನೈವೇದ್ಯ ವಗೈರೆ ಮಾಡಿದರೆ ಅದು ಮಹಾ ದೋಷವೆನಿಸುತ್ತದೆ. ಕಾರಣ ಆದಷ್ಟು ಮಣ್ಣಿನ ಪಾತ್ರೆಗಳನ್ನು ಉಪಯೋಗ ಕಡಿಮೆ ಮಾಡಿ ಧಾತುತಳ ಪಾತ್ರೆಗಳ ಉಪಯೋಗವನ್ನು ಬಳಿಕೆಯಲ್ಲಿ ತಂದರೆ ಅದು ಶುದ್ಧವಾದ ಮತ್ತು ಪವಿತ್ರವಾದ ಆಚರಣೆಯೆನಿಸುವದು. ಇದಕ್ಕೆ ಶ್ರೀಮಂತಿಕೆ ಅಥವಾ ಬಡತನ ಸಂಬಂಧವಾಗಿರುವದಿಲ್ಲ. ಅನ್ಯಮತೀಯರನ್ನಾದರೂ ನೋಡಿ ನಾವು ಪಾಠ ಕಲಿಯಬೇಕಾಗುವದು.



# ನಿತ್ಯಸ್ನಾನದ-ವಿಚಾರ

ಸ್ನಾನ ಮೂಲಾಃ ಕ್ರಿಯಾಃ ಸರ್ವಾಃ ಸಂಧ್ಯೋಪಾಸನ ಮೇವಚ।
ತಸ್ಮಾತ್ಸರ್ವ ಪ್ರಯತ್ನೇನ ಸ್ನಾನಂ ಕುರ್ಯಾತ್ಸಮಾಹಿತಃ॥
ಅಸ್ನಾತಾಶೀ ಮಲಂ ಭುಂಕ್ತೇ ಹ್ಯ ಜಪಃ ಪೂಯಶೋಣಿತಂ।
ಅಹುತಾಶೀ ಕ್ರಿಮಿಂ ಭುಂ ಕ್ತೇ ಹ್ಯ ದಾತಾ ವಿಷಮಶ್ನುತೇ॥
(ಉಭಯ ಋಷಿ ಉವಾಚ)

ಸ್ನಾನದಲ್ಲಿ ೧) ನಿತ್ಯಸ್ನಾನ ೨) ನೈಮಿತ್ಯಕ ಸ್ನಾನ ಎಂದು ಎರಡು ಪ್ರಕಾರಗಳಿವೆ. ನಿತ್ಯಸ್ನಾನದ ಅವಶ್ಯಕತೆಯು ವೀರಶೈವರಿಗೆ ಅತ್ಯಂತ ಮಹತ್ವದ್ದಾಗಿದೆ. ವೀರಶೈವರು ತ್ರಿಕಾಲ ಪೂಜೆಮಾಡಬೇಕೆಂದು ಧರ್ಮಶಾಸ್ತ್ರವಿರುವದರಿಂದ ಬೆಳಿಗ್ಗೆ-ಮಧ್ಯಾಹ್ನ-ಸಾಯಂಕಾಲ ಸ್ನಾನ ಮಾಡಿ ಶಿವಪೂಜೆ ಮಾಡಬೇಕು. ಹಾಗೂ ಶಿವಪೂಜಾದಿ ಸರ್ವ ಆಚಾರ ಕಾರ್ಯಗಳಿಗೆ ಸ್ನಾನವೇ ಮೂಲ ಕಾರಣವಾಗಿರುವದು. ಎಂಥ ಕಠಿಣ ಪ್ರಸಂಗ ಪ್ರಾಪ್ತವಾದರೂ ಸ್ನಾನವನ್ನು ಮಾಡದೆ ಬಿಡಬಾರದು. ಆರೋಗ್ಯದೃಷ್ಟಿಯಿಂದಲೂ ಸ್ನಾನಕ್ಕೆ ವಿಶೇಷ ಮಹತ್ವವಿದೆ. ಕನಿಷ್ಟ ಪಕ್ಷ ದಿನಕ್ಕೆ ಎರಡುಸಲವಾದರೂ ಸ್ನಾನಮಾಡಿ ಶಿವಪೂಜಾ ಮಾಡಬೇಕು ಇಲ್ಲವಾದರೆ ಅನ್ಯಾಯವಾಗುವದು. ಸ್ನಾನ ಮಾಡದೆ ಶಿವಪೂಜೆಯನ್ನು ಯಾವ ಕಾಲದಲ್ಲೂ ಮಾಡಬಾರದು. ೧) ಒಂದುವೇಳೆ ಸ್ನಾನಮಾಡದೆ ಊಟ ಮಾಡಿದರೆ ಹೊಲಸನ್ನು ಊಟ ಮಾಡಿದಂತಾಗುವದೆಂದೂ, ೨) ಗುರುವಿನಿಂದ ಉಪದೇಶವಾದ ಮಂತ್ರವನ್ನು ಪಠಿಸದೆ ಜಪಿಸದೆ ಊಟ ಮಾಡಿದರೆ ರಕ್ತವನ್ನು ಊಟ ಮಾಡಿದಂತಾಗುವದೆಂದೂ, ೩) ಶಿವಪೂಜೆ ಮಾಡದೆ ಊಟ ಮಾಡಿದರೆ ಕ್ರಿಮಿಕೀಟಕಾದಿಗಳನ್ನು ಊಟ ಮಾಡಿದಂತಾಗುವದೆಂದೂ, ೪) ಅತಿಥಿಗಳಿಗೆ ಊಟ ಮಾಡಿಸದೆ ಊಟ ಮಾಡಿದರೆ ವಿಷವನ್ನು ಊಟ ಮಾಡಿದಂತಾಗುವದೆಂದೂ ದಕ್ಷ, ಅತ್ರಿ ಮೊದಲಾದ ಪೂರ್ವ ಋಷಿಗಳು ಅಭಿಪ್ರಾಯಪದುತ್ತಾರೆ.

## ನೈಮಿತ್ಯಕ ಸ್ನಾನ-ವಿಚಾರ

ಗೌಲ್ಯಾಶ್ಚ ಸ್ಪರ್ಶ ಮಾತ್ರೇಣ ಸರಟೇಕೃ ಕಲಾಸಯೋಃ।
ಶುಭೇ ವ್ಯಾಪಶುಭೇ ವಾಪಿ ಸಂಚೇಲಂ ಸ್ನಾನ ಮಾಚರೇತ್॥
ಕಾಕವಾನರ ಮಾರ್ಜಾರ ಖರೋಷ್ಟ್ರಾಣಾಂ ಶುನಾಂ ತಥಾ।
ಸೂಕ ರಾಣಾ ಮ ಮಧ್ಯಂ ವೈಸ್ಪೃಷ್ಟ್ವಾ ಸ್ನಾನಂ ಸಚೇಲಕಂ॥
ವಾಷಾಂಡಂ ಪತಿತಂ ಚಾಂತ್ಯ ಮುನ್ಮತ್ತಂ ಶವದಾಹಕಂ।
ಸೂತಿಕಾಂ ಶ್ರಾವಿಕಾಂ ನಾರೀಂ ರಜಸಾ ಚ ಪರಿಪ್ಲುತಾಂ॥
ಶ್ವಕುಕ್ಕುಟ ವರಾಹಾಂಶ್ಚ ಗ್ರಾಮ್ಯಾನ್ ಸಂಸ್ಪೃಶ್ಯಮಾನವಃ।
ಸಚೇಲಃ ಸಶಿರಾಃ ಸ್ನಾತ್ವಾ ತದಾನೀಮೇವ ಶದ್ಧ್ಯತಿ॥

ನೈಮಿತ್ತಿಕ ಸ್ನಾನವೆಂದರೆ ಆಯಾಯ ಪ್ರಸಂಗಗಳಲ್ಲಿ ಮಾತ್ರ ಮಾಡಬೇಕಾಗುವದು. ಹೇಗೆಂದರೆ- ಹಲ್ಲಿ, ಓತೀಕಾಟ, ಕಾಗಿ, ಹಂದಿ, ಮಂಗ, ಬೆಕ್ಕು, ಕತ್ತೆ, ಒಂಟೆ, ಮೊಲ, ನಾಸ್ತಿಕ, ಜಾತಿಭ್ರಷ್ಟ, ಅಂತ್ಯಜ, ಭ್ರಾಂತಿಗೊಂಡವರು ಸಮಾಧಿಯನ್ನು ಪೂರೈಸಿದವರು, ಸೂತಿಕಾ, ರಜಸ್ವಲಾ, ಕೋಳಿ ಇವುಗಳನ್ನು ಮುಟ್ಟಿದರೆ ಸಚೇಲ(ಉಟ್ಟ ವಸ್ತ್ರ ಸಹಿತ)ಸ್ನಾನವನ್ನು ಮಾಡಿ ಶುದ್ಧರಾಗಬೇಕು.

ಹಾಗೂ ಊಟ ಮಾಡುವ ಕಾಲದಲ್ಲಿ ಚಾಂಡಾಲ, ಜಾತಿಭ್ರಷ್ಟ, ನಾಯಿ, ಸೂತಿಕೆಯರನ್ನು ನೋಡಿದರೆ ಸ್ನಾನವನ್ನು ಮಾಡಿ ಕೆಳಗಿನ ಮಂತ್ರವನ್ನು ಪಠಿಸಿ ಶುದ್ಧರಾಗಬೇಕು.

ಮಂತ್ರ ||"ಮಾನಸ್ತೋಕೇತನಯೇಮಾನ ಆಯುಷಿಮಾನೋ ಗೋಷು ಮಾನೋ ಅಶ್ವೇಷುರೀರಿಷಃ| ವೀರಾನ್ಮಾನೋ ರುದ್ರ ಭಾಮಿತೋ ವಧೀರ್ಹ ವಿಷ್ಮಂತೋ ನಮಸಾ ವಿಧೇಮತೇ||"

ನೈಮಿತ್ತಿಕ ಸ್ನಾನಕ್ಕೆ ಮೇಲೆ ಹೇಳಿದಂತೆ ಅನೇಕ ಕಾರಣಗಳಿದ್ದರೂ ನಿತ್ಯ ಸ್ನಾನವನ್ನು ಮಾಡಿಯೇ ಶಿವಪೂಜಾ ಮಾಡಬೇಕಾಗುವದು.

## ವೀರಶೈವರಿಗೆ ಸೂತಕತ್ರಯಗಳು ಅನ್ವಯಿಸುವದಿಲ್ಲ

ವೀರಶೈವರಿಗೆ ಜನನ ಸೂತಕ, ಮರಣ ಸೂತಕ, ಋತು ಸೂತಕಾದಿಗಳು ಇರುವದಿಲ್ಲ. ೧ ಯಾಕೆಂದರೆ ಪರಬ್ರಹ್ಮ ಸ್ವರೂಪವಾದ ಇಷ್ಟಲಿಂಗವನ್ನು ತಾಯಿ ಗರ್ಭದ ೮ನೇ ತಿಂಗಳಲ್ಲಿ ಧಾರಣವಾಗಿರುವದರಿಂದ ಜನನ ಸೂತಕವು ಅನ್ವಯಿ ಸುವದಿಲ್ಲ.೨ ಮರಣಕಾಲಕ್ಕೆ ವೀರಶೈವನುಷಟ್ಸ್ಥಲ ಅಷ್ಟಾವರಣಸಂಪನ್ನನಾಗಿ ದೀಕ್ಷಾಬದ್ಧನಾಗಿರುವದರಿಂದ ಮರಣಸೂತಕವೂ ಉಂಟಾಗಲಾರದು. ೩ ಇನ್ನು ಋತು ಸೂತಕದಲ್ಲೂ ಸ್ತ್ರೀಯಳು ನಿತ್ಯ ಸ್ನಾನ-ಶಿವಪೂಜಾ ವಗೈರೆ ಧಾರ್ಮಿಕ ಪ್ರಕಾರ ಆಚರಣೆ ಮಾಡುವದರಿಂದ ಋತು ಸೂತಕವೂ ಹತ್ತುವದಿಲ್ಲ. ಆದರೆ ಹಲ ಕೆಲವು ಸ್ತ್ರೀಯರು ಪ್ರತಿ ತಿಂಗಳು ಮುಟ್ಟಾದಾಗ್ಗೆ (ಸ್ನಾನ ಮಾಡದೆ ಹಾಗೇ ಅಡಿಗೆ ಮಾಡುವದು, ಶಿವಪೂಜೆ ಮಾಡುವದೂ ಮಾಡಬಾರದು)೪ ದಿನ ಅವರಿಗೆ ರಕ್ತಸ್ರಾವವಾಗುವ ಕಾರಣ ಸಂಣ ಸಂಣ ಮಕ್ಕಳನ್ನು ಮುಟ್ಟಲು ಪತಿಗೆ ಸಂಯೋಗವಾಗಲು, ಅಯೋಗ್ಯಳೆನಿಸುವ ಕಾರಣ ಈ ವಿಷಯದಲ್ಲಿ ೪ದಿನಸೂತಕ ವಾಗಿರಿಸಿ ೫ನೇದಿನಕ್ಕೆ ಅಭ್ಯಂಗ ಸ್ನಾನಮಾಡಿದರೆಯೋಗ್ಯಳೆನಿಸುವಳು.ಮುಟ್ಟಾದ ಸಮಯದಲ್ಲಿ ೪ದಿನಅವರು ಏನನ್ನೂ ಮುಟ್ಟದೆ ಕೇವಲತಮ್ಮ ಸ್ನಾನ-ಇಷ್ಟಲಿಂಗ ಪೂಜಾದಿಗಳನ್ನಷ್ಟೇ ಮಾಡಬೇಕು. ಈ ತಮ್ಮ ಇಷ್ಟಲಿಂಗ ಪೂಜಾಕ್ಕೆ ಮಾತ್ರ ಸೂತಕವೆನಿಸದು.ಯಾಕಂದರೆ ವೀರಶೈವರು ಜನನ ಆರಭ್ಯಮರಣ ಪರ್ಯಂತಶಿವ ಪೂಜಾಎಂಬ ಮಹಾವ್ರತವನ್ನು ಕೈಕೊಂಡಿರುವದರಿಂದ ಈಮಹಾ ವ್ರತಕ್ಕೆಭಂಗ ಬರಬಾರದೆಂದು ಶಾಸ್ತ್ರಕಾರರು ಶಿವ ಪೂಜೆಗೆ ಸೂತಕಗಳಿಲ್ಲೆಂದು ಹೇಳಿದ್ದಾರೆ. ಸ್ಮಾರ್ತ-ವೈಷ್ಣವ ಮೊದಲಾದ ಬ್ರಾಹ್ಮಣರಲ್ಲಿ ಪುಂಡರೀಕವೆಂಬ ಮೊದಲಾದ ದೊಡ್ಡ ದೊಡ್ಡ ಯಜ್ಞಗಳನ್ನು ಬಹಳ ದಿನಗಳ ವರೆಗೆ ಮಾಡಬೇಕಾಗುತ್ತದೆ. ಇಂಥ ವ್ರತವನ್ನು ಕೇವಲ ದಂಪತಿಗಳು ಮಾಡಬೇಕಾಗುತ್ತದೆ. ಇಂಥ ಪ್ರಸಂಗ ದಲ್ಲಿ ವ್ರತಮಧ್ಯ ಕಾಲದಲ್ಲಿ ಸ್ತ್ರೀಯಳು ಋತುವಾದರೆ, ಸೂತಕವಾದರೆ ಅಥವಾ

ಅನ್ಯ ಸೂತಕ ಬಂದರೆ ಅವರಾದರೂ ದೋಷವೆಣಿಸದೆ ತಮ್ಮ ವ್ರತವನ್ನು ಹಾಗೆಯೇ ಸಾಗಿಸುತ್ತಾರೆ. ಇದರಂತೆ ಋತುಮತಿಯರಾದ ಸ್ತ್ರೀಯರಿಗೆ ಶಿವ ಪೂಜಾದಿ ಕಾರ್ಯಗಳಲ್ಲಿ ಮಾತ್ರ ಅಧಿಕಾರವಲ್ಲದೆ ಅಡಿಗೆ ಮಾಡುವ ಕಾರ್ಯಗಳಲ್ಲಿ ಇಲ್ಲವೆಂದು ತಿಳಿಯಬೇಕು.

## ಪಶು ಪ್ರಸವಜನ್ಯ ಗಿಣ್ಣ-ಹಾಲುಗಳ ಶುದ್ಧತೆ.

ಅಜಾಗಾವೋ ಮಹೀಷ್ಯಶ್ಚ ಬ್ರಾಹ್ಮಣೀಚ ಪ್ರಸೂತಿಕಾ ।
ದಶರಾತ್ರೇಣ ಶುಧ್ಧ್ಯಂತಿ ಭೂಮಿಷಂಚ ನವೋದಕಂ ॥

ಎಂಬಂತೆ ಆಕಳು, ಎಮ್ಮೆ, ಆಡು ಪ್ರಸವಿಸಿದ ಹಾಗೂ ಸ್ತ್ರೀಯರು ಜನಿಸಿದ ಹತ್ತುದಿವಸಗಳ ನಂತರ ಶುದ್ಧರಾಗುವರೆಂದು ತಿಳಿಯಬೇಕು. ಇದರಂತೆ ಹೊಳೆ-ಹಳ್ಳ ಹೊಂಡಗಕೆರೆಳಲ್ಲಿ ಹೊಸದಾಗಿ ಬಂದ ನೀರೂ ಹತ್ತುದಿನಗಳ ನಂತರ ಶುದ್ಧ ವಾಗುವದು. ಆದ ಕಾರಣ ಪಶುಗಳು ಈದ ೧೧ನೇ ದಿನಕ್ಕೆ ಅವುಗಳ ಹಾಲನ್ನು ಉಪಯೋಗ ಮಾಡಬೇಕೆಂದು ವೈದ್ಯ ಶಾಸ್ತ್ರವು ಹೇಳುವದು ಸತ್ಯವಾಗಿದೆ. ಇದರ ಅರ್ಥವು ಹತ್ತು ದಿನಗಳ ವರೆಗೆ ಆಕಳ-ಎಮ್ಮೆಗಳ ಹಾಲನ್ನು ಉಪಯೋಗಿಸಬಾರದೆಂದೂ, ಗಿಣ್ಣವನ್ನೂ ಸಹ ಊಟಮಾಡಬಾರದೆಂದೂ ಹೇಳಿದಂತಾಯಿತು. ಯಾಕಂದರೆ ಹಾಲಿನಲ್ಲಿ ವಿಶೇಷ ರಕ್ತಾಂಶವಿರುವದರಿಂದ ಗಿಣ್ಣ ವಗೈರೆ ಮಾಡಿ ಕೊಂಡು ಊಟ ಮಾಡುವದು ರಾಕ್ಷಸೀ ವೃತ್ತಿಯಾಗುವದು ಕಾರಣ ಇದನ್ನು ಅವಶ್ಯ ತ್ಯಾಜ್ಯ ಮಾಡಬೇಕು.

## ನೀರಿನ ಶುದ್ಧ ಉಪಯೋಗ-ವಿಚಾರ.

ಉದ್ಧೃತಾಶ್ಚಾಪಿ ಶುದ್ಧ್ಯಂತಿ ಶುದ್ಧೈಃ ಪಾತ್ರೈಃ ಸಮುದ್ಧೃತಾಃ ।
ಏಕ ರಾತ್ರ್ಯೋಷಿತಾ ಆಪಸ್ತ್ಯಜ್ಯಾಃ ಶುದ್ಧಾ ಅಪಿಸ್ವಯಂ ॥

ಎಂಬ ದೇವಲ ಮಹರ್ಷಿಯ ಉವಾಚದಂತೆ ಪಾತ್ರೆಗಳನ್ನು ಬೆಳಗಿ ಶುದ್ಧ ಮಾಡಿ ಅವುಗಳಲ್ಲಿ ಶುದ್ಧವಾದ ನೀರನ್ನು ತಂದು ಇಟ್ಟಾಗ್ಯೂ ಒಂದು ರಾತ್ರಿಯು ಕಳೆದುಹೋದ ಮೇಲೆ ಆ ನೀರನ್ನು ಶಿವಪೂಜಾ ಸಲುವಾಗಿಯಾಗಲೀ ಅಥವಾ ಸ್ನಾನ ಮಾಡುವದಕ್ಕಾಗಲೀ, ಇಲ್ಲವೇ ಅಡಿಗೆ ಮಾಡುವದಕ್ಕಾಗಲೀ ಉಪಯೋಗಿಸಬಾರದು. ಆದ್ದರಿಂದ ಪ್ರತಿನಿತ್ಯದಲ್ಲಿಯೂ ತಂದ ನೀರಿನಿಂದ ಅಡಿಗೆ ಹಾಗೂ ಜಳಕ ಮತ್ತು ಪೂಜಾದಿಗಳನ್ನು ಮಾಡಬೇಕು.

## ನೀರಿನ ಅಶುದ್ಧ ಬಳಕೆಯ ವಿಚಾರ

ಹಲ ಕೆಲವು ಅಶಿಕ್ಷಿತ ಜನರು ಜಳಕ ಮಾಡುವ ಸಮಯದಲ್ಲಿ ಕಾಲುಗಳನ್ನು ತೊಳೆದುಕೊಳ್ಳಬೇಕಾದರೆ ತಂಬಿಗೆಯನ್ನು ಕಾಲ ಹತ್ತಿರ ಇಟ್ಟು ತೊಳೆದುಕೊಳ್ಳುವರು. ಮತ್ತೆ ಕೆಲವರು ಕೈಯಲ್ಲಿ ತಂಬಿಗೆಯನ್ನು ಹಿಡಿದುಕೊಂಡು

ತೊಳೆದ ನೀರು ಪುನಃ ತಂಬಿಗೆಯಲ್ಲೇ ಬೀಳುವಂತೆ ಮೊಳಕೈಯನ್ನು ತೊಳೆದು ಕೊಳ್ಳುವರು. ಇದಕ್ಕೆ ಹೆಣ್ಣುಮಕ್ಕಳಂತೂ ಆದರ್ಶವಾಗಿದ್ದಾರೆ. ಇದು ಅಯೋಗ್ಯವು. ಇದನ್ನು ಅವಶ್ಯ ಬಿಡಬೇಕು. ಮತ್ತೆ ಕೆಲವರು ಸ್ನಾನ ಮಾಡುವಾಗ ಮೈಮೇಲೆ ಬಿದ್ದ ನೀರು ತಂಬಿಗೆಯಲ್ಲೂ, ತಂಬಿಗೆಯಲ್ಲಿಯ ಈ ಅಶುದ್ಧ ನೀರು ಶುದ್ಧ ನೀರು ತುಂಬಿದ ಸ್ನಾನ ಪಾತ್ರೆಯಲ್ಲಿ ಬೀಳುವಂತೆಯೂ ಸುರಿಸುತ್ತ ಚಿತ್ತವೆತ್ತೋ ಮನವೆತ್ತೋ ಶಿವ ಶಿವಾ ಮನಬಂದಂತೆ ಸ್ನಾನ ಮಾಡುವರಲ್ಲಾ ಇದು ಆಶ್ಚರ್ಯ ! ಮಹದಾಶ್ಚರ್ಯ !!

ಇನ್ನೂ ಕೆಲ ಜನರು ಮುಖವನ್ನು ತೊಳೆಯಬೇಕಾದರೆ ಕೈಯಲ್ಲಿ ಹಾಕಿಕೊಂಡ ನೀರನ್ನು ತಟ್ಟನೇ ಬಾಯಿಯಲ್ಲಿ ಹಾಕಿಕೊಂಡು ಚಟ್ಟನೇ ಅದೇ ಬರಿಗೈಯನ್ನು ಮುಖದ ಮೇಲೋದು ತಿಕ್ಕಿ ತಿಕ್ಕಿ ತೊಳೆಯುವ ರೂಢಿಯುಂಟು. ಹೀಗೆ ಮಾಡತಕ್ಕವರಿಗೆ ಅದು ಎಂಜಲ ನೀರೆಂಬ ಕಲ್ಪನೆಯಿಲ್ಲದಲೆ ಅಜ್ಞಾನದಿಂದ ತಮ್ಮ ತಮ್ಮ ಮಕ್ಕಳಿಗೂ ಅದೇ ಅಶುದ್ಧ ಪದ್ಧತಿಯನ್ನು ರೂಢಿಯಲ್ಲಿ ತರಿಸಲು ಮಾರ್ಗದರ್ಶಕರಾಗುತ್ತಾರೆ

ಜಳಕ ಮಾಡುವಾಗ ಮೈಮೇಲೆ ಬಿದ್ದ ನೀರು ತಂಬಿಗೆಯಲ್ಲಿ ಬೀಳದಂತೆಯೂ, ತಂಬಿಗೆಯಲ್ಲಿ ಬಿದ್ದ ಮೈಮೇಲಿನ ನೀರು ಪುನಃ ನೀರು ತುಂಬಿದ ಜಳಕದ ಪಾತ್ರೆಯಲ್ಲಿ ಬೀಳದಂತೆಯೂ ಎಚ್ಚರಿಕೆಯಿಂದ ಸ್ನಾನ ಮಾಡಬೇಕು. ಮುಖವನ್ನು ತೊಳೆದುಕೊಳ್ಳುವಾಗ ಬಾಯಲ್ಲಿ ಹಾಕಿದ ನೀರನ್ನು ಮುಕ್ಕಳಿಸಿ ಉಗಳಬೇಕು. ಕೈಯನ್ನು ಮತ್ತೊಮ್ಮೆ ತೊಳೆದುಕೊಂಡು ಶುದ್ಧ ನೀರಿನಿಂದ ಮುಖವನ್ನು ತೊಳೆದುಕೊಳ್ಳಬೇಕು. ಇಲ್ಲವಾದರೆ ಎಲ್ಲವೂ ಎಂಜಲವಾಗಿ ಕ್ರಿಯಾಭಂಗವೂ ಆಚಾರ ಭಂಗವೂ ಆಗುತ್ತದೆ ಆದ ಕಾರಣ ಎಚ್ಚರಿಕೆಯಿಂದ ತಂಬಿಗೆಯನ್ನು ಎತ್ತರದಲ್ಲಿ ಹಿಡಿದು ಕಾಲುಗಳನ್ನು ತೊಳೆದುಕೊಳ್ಳಬೇಕು. ಯೋಗ್ಯ ರೀತಿಯಿಂದ ಸ್ನಾನವನ್ನು ಮಾಡಬೇಕು ಮಡಿಮಾಡಿದ ಹಸ್ತವಾವಡ(ಸಣ್ಣವಸ್ತ್ರ) ದಿಂದ ಮೈಯನ್ನು ಒರಿಸಿಕೊಂಡು ಅದನ್ನು ಬೇರೊಂದು ಕಡೆಗೆ ತೊಳೆದು ಹಾಕಬೇಕು. ಅಥವಾ ತೊಳೆದುಕೊಂಡು ಉಪಯೋಗಿಸಬಹುದು. ಮೈಯನ್ನು ಒರಿಸುವ ವಸ್ತ್ರದಿಂದ ಲಿಂಗಮೂರ್ತಿಯನ್ನು ವರಿಸಬಾರದು. ಹಾಗೂ ಮುಟ್ಟಿಸಬಾರದು. ಲಿಂಗಮೂರ್ತಿಯನ್ನು ವರಿಸಲಿಕ್ಕೆ ಕೇವಲ ವಸ್ತ್ರವೊಂದನ್ನು ಬೇರೆ ಮಾಡಿಟ್ಟಿರಬೇಕು. ಮಡಿಬಟ್ಟೆಯನ್ನು ಉಟ್ಟುಕೊಳ್ಳುವಾಗ ಬಚ್ಚಲಕ್ಕೆ ತಾಗಿಸಬಾರದು. ಈ ಪ್ರಕಾರವಾಗಿ ಯಿಟ್ಟು ಬಟ್ಟೆಯನ್ನು ನಾಲ್ಕೈದು ಸಾರೆ ಬಾಯಿ ಮುಕ್ಕಳಿಸಿ ಕೈಕಾಲು ಮತ್ತೊಮ್ಮೆ ತೊಳೆದುಕೊಂಡು ಕೆಳಗಿಳಿದು ಕೈಯಲ್ಲಿ ನೀರು ತುಂಬಿದ ತಂಬಿಗೆಯನ್ನು ಹಿಡಿದುಕೊಂಡು ನೀರನ್ನು ಸಿಂಪಡಿಸುತ್ತ ಮುಂದೆ ಶಿವ ಪೂಜಾ ಪ್ರಕರಣದ ಶಿವಪೂಜಾ ಕ್ರಮದಲ್ಲಿ ಹೇಳಿದಂತೆ ಪದ್ಧತಿ ಪ್ರಕಾರವಾಗಿ

ಮಂತ್ರೋಚ್ಚಾರದಿಂದ (ಓಂ ಶ್ರೀ ಸಾಂಬ ಸದಾಶಿವಾಯನಮಃ ಎಂದುಅನ್ನುತ್ತ) ಶಿವಪೂಜಾ ಮಂದಿರವನ್ನು ಪ್ರವೇಶಮಾಡಬೇಕು. ಶಿವಪೂಜಾ ಮಂದಿರವನು ಸಾರಣೆ-ರಂಗವಲ್ಲಿಗಳಿಂದ ಅಲಂಕಾರ ಮಾಡಿರಬೇಕು. ಇದರಿಂದ ಹರ್ಷ-ವಿಶ್ವಾಸ-ಭಕ್ತಿ ಭಾವನೆಗಳುತ್ಪನ್ನವಾಗುವವು.

## ಶಿವಪೂಜೆಗೆ ಕೂಡ್ರುವ ದಿಕ್ಕ ನಿರ್ಣಯ ವಿಚಾರ.

ಸದಾ ಪೂರ್ವ ಮುಖಃ ಪೂಜಾಂ ಕುರ್ಯಾಲ್ಲಿಂಗಸ್ಯ ಶಾಂಕರಿ।
ಆಯುಃ ಶ್ರಿ ಯಂ ಯಶೋವರ್ಚಃ ಪ್ರಜಾಂಪುಷ್ಟಿಂಯದಿಚ್ಛತಿ॥
ದಕ್ಷಿಣಾಭಿಮುಖಃ ಕುರ್ಯಾನ್ಮಾರಣಾದಿಷು ಸುಂದರಿ।
ಕಾಮಾರ್ಥೀ ಪಶ್ಚಿಮ ಮುಖೋ ಜ್ಞಾನಾರ್ಥೀಸ್ಯಾದುದಙ್ಮುಖಃ॥

ಎಂಬ "ವೀರಾಗಮಮಗ್ರಂಥ" ಪ್ರಮಾಣದಂತೆ ಆಯುಷ್ಯ, ಸಂಪತ್ತು, ಕೀರ್ತಿ, ವರ್ಚಸ್ಸು, ಪ್ರಜಾರಕ್ಷಣೆ ಇತ್ಯಾದಿಗಳನ್ನು ಇಚ್ಛಿಸತಕ್ಕ ಶಿವಪೂಜಕನು ಪೂರ್ವಾಭಿಮುಖವಾಗಿ ಕೂತು ಶಿವಪೂಜೆ ಮಾಡಿಕೊಳ್ಳಬೇಕು. ಇದರಂತೆ ಇಷ್ಟವಾದ ಬಯಕೆಯನ್ನು ಅಪೇಕ್ಷಿಸತಕ್ಕವನು ಪಶ್ಚಿಮಮುಖವಾಗಿ ಕೂಡ್ರಬೇಕು. ಮಾರಣಾದಿ ದುಷ್ಕಾರ್ಯಗಳ ಫಲಾಪೇಕ್ಷೆಯುಳ್ಳವನು ದಕ್ಷಿಣ ಮುಖವಾಗಿ ಕೂಡ್ರಬೇಕು,ಮೋಕ್ಷಾಪೇಕ್ಷೆಯುಳ್ಳವನು ಉತ್ತರಾಭಿಮುಖವಾಗಿ ಕೂಡ್ರಬೇಕು.

ವೀರಶೈವನು ಮಾರಣಾದಿ ಶಿವಪೂಜೆಯನ್ನು ಮಾಡಬಾರದು. ಯಾಕಂದರೆ ಅಹಿಂಸಾ ಧರ್ಮವನ್ನೇ ತಾನು ಆಚರಿಸತಕ್ಕವನಾದ್ದರಿಂದ ತನಗೆ ಮಾರಣಾದಿ ಕ್ರೂರ ಕೃತ್ಯಗಳು ನಿಷಿದ್ಧವಾಗಿರುತ್ತವೆ. ಸಕಾಮ (ಪ್ರತಿಫಲ-ಇಚ್ಛಿತ) ಪೂಜೆಯು ವೀರಶೈವನಿಗೆ ಯೋಗ್ಯವಾದುದಲ್ಲ- ಯಾಕಂದರೆ ಅಷ್ಟಾವರಣ ಷಟ್‍ಸ್ಥಲ ಸಂಪನ್ನನಾದ ತಾನು ಲಿಂಗಮಯ ಶರೀರಿಯೆ ಆಗಿದ್ದರಿಂದ ಶಿವ ಲಿಂಗಾರ್ಪಿತ ಬುದ್ಧಿಯಿಂದಲೇ ಶಿವಪೂಜೆಯನ್ನು ಮಾಡಬೇಕು. ಇಹಪರ ಸುಖಸಂಪತ್ತಾಭಿವೃದ್ಧಿಗೆ ಪೂರ್ವ ಉತ್ತರ ದಿಕ್ಕುಗಳೇ ಕಾರಣೀಭೂತವಾದ್ದರಿಂದ ಶಿವಪೂಜಕನು ಪೂರ್ವ-ಉತ್ತರ ದಿಕ್ಕಿಗೆ ಮುಖವಾಗಿ ಕುಳಿತು ಪೂಜೆಯನ್ನು ಮಾಡುವದು ಯೋಗ್ಯವಾದದ್ದೂ, ಶ್ರೇಯಸ್ಕರವಾದದ್ದೂ ಆಗಿರುತ್ತದೆ.

## ಪೂಜೆಗೆ ಕೂಡ್ರತಕ್ಕ ಯೋಗ್ಯಾಸನಗಳ ವಿಚಾರ

ಶಿವಪೂಜೆಗೆ ಕೂಡ್ರಬೇಕಾದರೆ ದರ್ಭಾಸನವನ್ನಾಗಲಿ ಚಿತ್ರಾಸನ ಅಂದರೆ ರೇಶ್ಮಿ ಉಣ್ಣೆಗಳಿಂದ ಸಮ್ಮಿಶ್ರವಾದ ಆಸನವಾಗಲಿ, ಅಥವಾ ಬಿಳಿಯ ಕಂಬಳಿಯ ಆಸನವಾಗಲಿ ಹಾಕಿಕೊಂಡು ಕೂಡ್ರಬೇಕು ಇವೇ ಆಸನ (ಗದ್ದಿಗೆ) ಗಳು ಯೋಗ್ಯವಾಗಿರುತ್ತವೆ. ಅನ್ಯ ಆಸನಗಳು ಯೋಗ್ಯವಾದವುಗಳಲ್ಲ. ಇನ್ನು ಕೆಲವರು ಅಲಸ್ಯದಿಂದ ನೆಲದಮೇಲೆ ಅಥವಾ ಕಲ್ಲಿನಮೇಲೆ ಇಲ್ಲವೆ ಕಟ್ಟಿಗೆ

ಬಿದರು ಹುಲ್ಲು ಮೊದಲಾದ ಆಸನದಮೇಲೆ ಕುಳಿತು ಶಿವಪೂಜಾ ಮಾಡಿದರೆ ದಾರಿದ್ರ್ಯವೂ. ಭಾಗ್ಯಹೀನತೆಯೂ ಉಂಟಾಗುವದು. ಚಿಗರಿಯ ಚರ್ಮ-ಅಧವಾ ಹುಲಿಯ ಚರ್ಮದ ಆಸನಗಳನ್ನು ಮಾತ್ರ ಓರಣ-ಮಾರಣ-ಯಂತ್ರ-ಮಂತ್ರ-ಸಿದ್ಧಿಗಾರರು ಉಪಯೋಗಿಸಿದರೆ ಅವು ಸಿದ್ಧಿಸುವವು. ವೀರಶೈವನಿಗೆ ಮೇಲೆ ಹೇಳಿದ ಮೂರು ಯೋಗ್ಯಾಸನಗಳು. ಯಾಕಂದರೆ ದರ್ಭಾಸನದಿಂದ ಮಾನಸಿಕ ಸ್ಥಿರತೆಯೂ-ಶುದ್ಧತೆಯೂ ಉಂಟಾಗುವದು. ಚಿತ್ರಾಸನದಿಂದ ಲಿಂಗಾರ್ಚನಾದಿಯ ಎಲ್ಲಾ ಕಾರ್ಯಗಳ ಸಿದ್ಧಿಯನ್ನುಂಟುಮಾಡುವದು. ಬಿಳೀ ಕಂಬಳಿಯ ಆಸನದಿಂದ ದುಃಖವು ಬಿಡುಗಡೆ ಹೊಂದುವದು. ಆದಕಾರಣ ಈ ಆಸನತ್ರಯಗಳು ಯೋಗ್ಯವಾದವುಗಳು.

ಇನ್ನು ವಿಶೇಷವೇನೆಂದರೆ ತನ್ನ ಆಸನವನ್ನೊಂದು ಬೇರೆಯಾಗಿಟ್ಟುಕೊಂಡಿರಬೇಕು. ಅನ್ಯರ ಆಸನದಮೇಲೆ ಕುಳಿತುಕೊಂಡು ಶಿವಪೂಜೆ ಮಾಡಬಾರದು. ಮತ್ತು ತನ್ನ ಆಸನವನ್ನು ಗುರುಗಳಿಗೆ ಹಾಕಬಾರದು. ಗುರುಗಳ ಆಸನದ ಮೇಲೆ ತಾನು (ಭಕ್ತನು) ಕೂಡ್ರಬಾರದು ಒಂದು ವೇಳೆ ಅಜ್ಞಾನದಿಂದಾಗಲೀ ಅಧವಾ ಅಹಂಕಾರ ಇಲ್ಲವೇ ಮರವೆಯಿಂದಾಗಲೀ ಗುರುಗಳ ಆಸನದ ಮೇಲೆ ಭಕ್ತನು ಕೂತರೆ ಅಂಧದನು ಕೆಟ್ಟ ಪ್ರಾಣಿಗಳಲ್ಲಿ ಜನ್ಮವೆತ್ತುತ್ತಾನೆಂದು ಧರ್ಮ ಶಾಸ್ತ್ರವು ಹೇಳುತ್ತದೆ.

ಭಕ್ತಿವಂತನಾದ ಭಕ್ತನು ಗುರುಗಳ ಸಾನ್ನಿಧ್ಯದಲ್ಲಿ ಕೂತು ಶಿವಪೂಜಾ ಮಾಡಬಾರದು. ಆದರೆ ಶಿವಪೂಜಾ ಬಿಡಬೇಕೆಂದರ್ಥವಲ್ಲ ಮಾತ್ರ ಗುರುಗಳು ಪೂಜೆಗೆ ಬರುವ ಮೊದಲೇ ತಮ್ಮ ಶಿವಪೂಜೆಯನ್ನು ಪೂರ್ತಿ ಮಾಡಿಕೊಂಡಿರಬೇಕು. ಒಂದುವೇಳೆ ತಾನು ಶಿವಪೂಜೆಗೆ ಕೂತ ಸಮಯದಲ್ಲಿ ಗುರುಗಳು ಬಂದರೆ ಪೂಜೆಯನ್ನು ಅರ್ಧ ಮಾಡಿಕೊಂಡ ನಂತರ ಅಧವಾ ಲೋಪ ಮಾಡಿಕೊಂಡು ಏಳಬಾರದೆಂದು ಆಗಮವಚನವದೆ. ಮತ್ತೂ ಇದರಿಂದ ಗುರೂಪದೇಶಕ್ಕೆ ಭಂಗ ಬಂದಂತಾಗುವದು ಆದ ಕಾರಣ ಮೊದಲು ತಮ್ಮ ಶಿವಲಿಂಗ ಪೂಜೆಯನ್ನು ಸಕ್ರಮವಾಗಿ ಮಾಡಿಕೊಂಡ ನಂತರ ಗುರು ಪೂಜೆಯನ್ನು ಮಾಡಿಸತಕ್ಕದ್ದೆಂದು ವೀರಶೈವನಿಗೆ ಯೋಗ್ಯವಾದದ್ದೆಂದು ಧರ್ಮಶಾಸ್ತ್ರವು ಹೇಳುತ್ತದೆ.

## ಶಿವಪೂಜಾ ಸಾಮಗ್ರಿಗಳ ಸಿದ್ಧತೆ

ಶಿವಪೂಜಕನು ಮೇಲೆ ಹೇಳಿದ ಯೋಗ್ಯಾಸನದ ಮೇಲೊಂದರಲ್ಲಿ ಕುಳಿತುಕೊಳ್ಳುವಾಗ ತನ್ನ ಬಲಭಾಗದಲ್ಲಿ ಒಂದು ಮಣಿಯ ಮೇಲೆ ಎಲ್ಲ ಪೂಜಾ ಸಾಮಗ್ರಿಗಳನ್ನು ಬೆಳಗಿಟ್ಟುಕೊಂಡಿರಬೇಕು. ಪ್ರತ್ಯೇಕವಾಗಿ ಶಿವಪೂಜೆಯ ಸಲುವಾಗಿ ಒಂದು ತಂಬಿಗೆ, ಒಂದು ತಾಲಿಯನ್ನು ಸಹ ಲಿಂಗ ಮುದ್ರಾಂಕಿತವನ್ನಾಗಿ

ಮಾಡಿಸಿ ಮೊದಲೇ ತಯಾರಿಸಿ ಇಟ್ಟುಕೊಂಡಿರಬೇಕು. ಆ ತಂಬಿಗೆ ತಾಲಿಯನ್ನು ಮನೆಯ ಯಾವ ಕೆಲಸಕ್ಕೂ ಬಳಕೆ ಮಾಡಬಾರದು. ಜಳಕ ಮಾಡಿ ತಂದ ಶುದ್ಧ ನೀರನ್ನು ಒಂದು ಶುದ್ಧ ವಸ್ತ್ರದಿಂದ ಸೋಸಬೇಕು. ಶರೀರವನ್ನು ಒರಿಸುವ ವಸ್ತ್ರದಿಂದಾಗಲೀ ಇಲ್ಲವೇ ಉಡುವ ಬಟ್ಟೆಗಳ ತುಂಡಿನಿಂದಾಗಲೀ ನೀರನ್ನು ಸೋಸಬಾರದು. ನೀರನ್ನು ಸೋಸುವದಕ್ಕೂ, ಮತ್ತು ಲಿಂಗವನ್ನು ಒರೆಸುವದಕ್ಕೂ ಎರಡು ವಸ್ತ್ರಗಳನ್ನು ಬೇರೆ ಮಾಡಿಕೊಂಡಿರಬೇಕು. ಸೋಸದ ನೀರು ಪೂಜೆಗೂ, ಅಭಿಷೇಕಕ್ಕೂ ನಿಷಿದ್ಧವೆನಿಸುವದು ಅಂಥ ನೀರನ್ನು ಕುಡಿಯುವದಾಗಲೀ ಅಥವಾ ಅಡಿಗೆ ಮಾಡುವದಾಗಲೀ ಮಾಡಬಾರದು. ಒಂದು ವೇಳೆ ಇದನ್ನು ಅಲಕ್ಷ ಮಾಡಿ ನೀರನ್ನು ಸೋಸದೆ ಕುಡಿದರೆ ಮಹತ್ತರ ಪಾಪ ಬರುವದೆಂದು ಲಿಂಗ ಪುರಾಣದಲ್ಲಿ ಹೇಳಲ್ಪಟ್ಟಿದೆ. ಮತ್ತು ಶಿವಪೂಜೆಗೆ ನೀರನ್ನು ಎಡಗೈಯಿಂದ ತರಬಾರದು. ಹಾಗೂ ಉಪ್ಪು ನೀರಿನಿಂದ (ಸೌಳು ನೀರಿನಿಂದ) ಅಭಿಷೇಕವನ್ನು ಮಾಡಬಾರದು. ಸೋಸಿದ ನೀರಿನಿಂದ ಗಂಧವನ್ನು ತೇದು ಒಂದು ಸಣ್ಣ ಬಟ್ಟಲಿನಲ್ಲಿಟ್ಟುಕೊಳ್ಳಬೇಕು ಕೊನೆ ಮುರಿಯದ ಅಕ್ಕೀಕಾಳು, ಮತ್ತು ಬಿಳೀ ಸಾಸಿವೆ,ಜವೆಗೋದಿ,ಬಿಳಿ ಯಳ್ಳು, ಹಾಗೂ ಚನ್ನಂಗಿ ಬ್ಯಾಳಿ ಇವುಗಳನ್ನು ಕೂಡಿಸಿ ಸೋಸಿದನೀರಿನಿಂದ ತೊಳೆದು ಇಟ್ಟುಕೊಳ್ಳಬೇಕು ಹೊಸ ಬಿಲ್ವ ಪತ್ರಗಳನ್ನು ತಂದು ಸೋಸಿ ಅಂದರೆ ಗೋಧೀಕಾಳ ಪ್ರಮಾಣ ತುಂಬನ್ನು ಬಿಟ್ಟು ಉಳಿದ ಮುಂದಿನ ತುಂಬನ್ನೆಲ್ಲ ಚಿವುಟಿ ಹಾಕಿ ತೊಳೆದು ಇಟ್ಟುಕೊಳ್ಳಬೇಕು. ಸಂಪೂರ್ಣ ತುಂಬುಗಳಿದ್ದ ಪತ್ರಗಳನ್ನು ಧರಿಸುವದರಿಂದ ಮಹಾದೋಷವುಂಟಾಗುವದೆಂದು ಉಪನಿಷತ್ತಿನ ವಚನವಿದೆ. ಕಾರಣ ಬಿಲ್ವವನ್ನು ಸೋಸಿ ಧರಿಸಬೇಕು. ಪುಷ್ಪಗಳನ್ನು ತೊಳೆಯದೇ ಧರಿಸಬೇಕು. ತೊಳೆದರೆ ಅವು ನಿರ್ಮಾಲ್ಯವೆನಿಸುತ್ತವೆ.

ದೇವೋ ಪರಿಧೃತಂ ತಾನು ಹಸ್ತೇ ಧೋವಸ್ತ್ರೇಚ ಧೃತಂಜತೀಽಂತಃಕ್ಷಾಲಿತಂ ಚ ಪುಷ್ಪಂನಿರ್ಮಾಲ್ಯಂ। ವರ್ಜ್ಯಂ ಪರ್ಯುಷಿತಂ ಪುಷ್ಪಂ ವರ್ಜ್ಯಂ ಪರ್ಯುಷಿತಂ ಜಲಂ ||

ಎಂಬ ನಿರ್ಣಯ ಸಿಂಧುವಿನ ಗ್ರಂಥ ಪ್ರಮಾಣದಂತೆ ದೇವರಿಗೆ ಧರಿಸಿದ ಎಡಗೈಯಿಂದ ಹಾಗೂ ಉಟ್ಟ ವಸ್ತ್ರದಲ್ಲಿ ತಂದ ಮತ್ತು ನೀರಿನಿಂದ ತೊಳೆದ ಹೂವುಗಳು ನಿರ್ಮಾಲ್ಯವಾಗುವದರಿಂದ ಅಂಥವುಗಳನ್ನು ಪೂಜೆಯ ಸಲುವಾಗಿ ಉಪಯೋಗಿಸಬಾರದು ಮತ್ತು ಹಳೇ ಪುಷ್ಪಗಳನ್ನು, ಹಳೇ ನೀರನ್ನೂ(ಒಂದು ರಾತ್ರಿ ಕಳೆದ ನಂತರ)ಪೂಜೆಗೆ ಉಪಯೋಗಿಸಬಾರದು. ಇನ್ನು ವಿಭೂತಿ, ರುದ್ರಾಕ್ಷಿ, ಧೂಪ-ದೀಪ, ಕರ್ಪೂರ, ನೈವೇದ್ಯ, ತಾಂಬೂಲ, ಘಂಟಾ, ದರ್ಪಣ, ಛತ್ರ ಛಾಮರ ವ್ಯಾಜನಾದಿ ಶಿವಪೂಜಾ ಸಾಮುಗ್ರಿಗಳನ್ನು ತಯಾರು ಮಾಡಿಟ್ಟು

ಕೊಂಡಿರಬೇಕು. ಆ ನಂತರ ಶಿವಪೂಜೆಗೆ ಕೂಡ್ರುವ ಮುಂದೆ ದೀಪವನ್ನು ಹಚ್ಚಿಕೊಂಡು ಶಿವಪೂಜೆಗೆ ಕೂಡ್ರಬೇಕು. ಮುಂದೆ ಶಿವಪೂಜಾ ಪ್ರಕರಣದಲ್ಲಿ ಹೇಳಿದಂತೆ ಪೂಜೆಯನ್ನು ಮಾಡಿಕೊಳ್ಳಬೇಕು.

ಶಿವಪೂಜಕನು ಆರಂಭದಲ್ಲಿ ಆಚಮನ, ಪ್ರಾಣಾಯಾಮಗಳನ್ನು ಮಾಡಬೇಕು (ಇವುಗಳನ್ನು ಗುರು ಮುಖದಿಂದ ತಿಳಕೊಂಡಿರಬೇಕು) ತದ ನಂತರ ಗುರು ಧ್ಯಾನ ಶಿವಧ್ಯಾನಗಳನ್ನು ಮಾಡಬೇಕು. ಆ ಮೇಲೆ ಕುರಂಗ ಮುದ್ರೆಯಿಂದ ಭಸ್ಮವನ್ನು ತೆಗೆದುಕೊಂಡು ಎಡಗೈ ಅಂಗೈಯಲ್ಲಿಟ್ಟು ಬಲ ಹಸ್ತವನ್ನು ಅದರ ಮೇಲೆ ಮುಚ್ಚಿ ಎಂಟು ಸಾರೆ ಪಂಚಾಕ್ಷರೀ ಮಂತ್ರದಿಂದ ಆ ವಿಭೂತಿಯನ್ನು ಅಭಿಮಂತ್ರಿಸಿ ಈಶಾನ್ಯ ಮಂತ್ರದಿಂದ ಶಿರಸ್ಸಿನ(ಮಸ್ತಕದ)ಮೇಲೆಯೂ, ತತ್ಪುರುಷ ಮಂತ್ರದಿಂದ ಮುಖದ ಮೇಲೆಯೂ, ಅಘೋರ ಮಂತ್ರದಿಂದ ಹೃದಯದಲ್ಲಿಯೂ, ವಾಮದೇವ ಮಂತ್ರದಿಂದ ಗುಹ್ಯ ಭಾಗದಲ್ಲಿಯೂ, ಸದ್ಯೋಜಾತ ಮಂತ್ರದಿಂದ ಎರಡೂ ಪಾದಗಳಲ್ಲಿಯೂ, ಓಂಕಾರದಿಂದ ಇನ್ನುಳಿದ ಅವಯವಗಳಲ್ಲಿಯೂ, ಉದ್ಧೂಲನ (ಲೇಪನ) ಮಾಡಿಕೊಳ್ಳಬೇಕು. ತದ ನಂತರ ಜಲಮಿಶ್ರವಾದ ವಿಭೂತಿಯಿಂದ ತ್ರಿಪುಂಡಧಾರಣ ಮಾಡಿಕೊಳ್ಳಬೇಕು.

## ತ್ರಿಪುಂಡ ಧಾರಣ ಕ್ರಮ-ವಿಚಾರ

ಮಧ್ಯಾಂಗುಲಿ ತ್ರಯೇಣೈವ ಸ್ವದಕ್ಷಿಣ ಕರಸ್ಯತು ।
ಷಡಂಗುಲಾಯತಂ ಮಾನಮಪಿ ಪಾಲಿಕ ಮಾನ ಕಂ ॥
ನೇತ್ರಾಯುಗ್ಮ ಪ್ರಮಾಣೇನ ಫಾಲೇ ದದ್ಯಾತ್ರಿಪುಂಡ್ರಕಂ ॥

ಎಂಬ ಸಿದ್ಧಾಂತ ಶಿಖಾಮಣಿ ಗ್ರಂಥೋಕ್ತಿಯಂತೆ ಶಿವಪೂಜಕನು ತನ್ನ ಬಲಗೈಯ ಕಿರುಬೆರಳು-ಹೆಬ್ಬೆರಳುಗಳನ್ನು ಬಿಟ್ಟು ನಡುವಿನ ಮೂರು ಬೆರಳುಗಳಿಂದ ಅಂದರೆ ತರ್ಜನೀ-ಮಧ್ಯಮ-ಅನಾಮಿಕ ಬೆರಳುಗಳಿಂದ ಆರು ಅಂಗುಲ ಪ್ರಮಾಣವಾಗಿ, ಅಥವಾ ತನ್ನ ಹಣೆಯ ವಿಸ್ತಾರದಷ್ಟಾಗಲಿ, ಇಲ್ಲವೇ ಎರಡೂ ಕಣ್ಣುಗಳ ಪ್ರಮಾಣಗಳಷ್ಟಾಗಲೀ ಹಣೆಯಲ್ಲಿ ಎಡದಿಂದ ಬಲಕ್ಕೆ ಒಂದಕ್ಕೊಂದು ತ್ರಿಪುಂಡಗಳು ಕೂಡದಂತೆ, ದೂರಾಗದಂತೆ ಶುಭ್ರವಾಗಿಯೂ, ಸರಳವಾಗಿ ರೇಖೆ ಬರುವಂತೆಯೂ ಧರಿಸಬೇಕು. ಇದೊಂದು ಕ್ರಮವಾಯಿತು. ಇನ್ನೊಂದು ಕ್ರಮವೆಂದರೆ ಬಲಗೈಯಲ್ಲಿಯ ಮಧ್ಯಮ-ಅನಾಮಿಕ ಬೆರಳುಗಳಿಂದ ಎಡದಿಂದ ಬಲಗಡೆಗೆ ಎರಡು ಭಸ್ಮ ರೇಖೆಗಳನ್ನೂ, ಹೆಬ್ಬೆರಳಿನಿಂದ ಬಲಗಡೆಯಿಂದ ಎಡಗಡೆಗೆ ಎರಡು ರೇಖೆಗಳ ಮಧ್ಯದಲ್ಲಿ ಒಂದಕ್ಕೊಂದು ಕೂಡದಂತೆ ಲೋಮ-ವಿಲೋಮವಾಗಿ ಧರಿಸಬೇಕು ಆದರೆ ಹಲ-ಕೆಲವು ಜನರು ಮಾತ್ರ ಆದರಲ್ಲಿಯೂ ಹೆಣ್ಣುಮಕ್ಕಳು ಮಾತ್ರ ವಿಶೇಷವಾಗಿ ಎರಡೇ ಬೆರಳುಗಳಿಂದ ಭಸ್ಮ ಧರಿಸುವರು.

ಈ ಅಶುದ್ಧ ಪದ್ಧತಿಯನ್ನು ಬಿಟ್ಟು, ಮೇಲಿನ ಸಕ್ರಮ ಪದ್ಧತಿಯನ್ನು ಬಳಿಕೆಯಲ್ಲಿ ಅವಶ್ಯವಾಗಿ ಬರಬೇಕು. ಅಂದರೆ ಸಮಾಜಕ್ಕೆ ಮಹದುಪಕಾರವಾಗುವದು.

ಸ್ತ್ರೀಭಿಸ್ತ್ರೀ ಪುಂಡ್ರ ಮಲಕಾವಧಿ ಧಾರಣೀಯಂ !
ಭಸ್ಮ ದ್ವಿಜಾತಿ ಭಿರದೋ ವಿಧವಾಭಿರೇವಂ ||
ತದ್ವತ್ಸದಾ ಶ್ರಮವತಾಂ ವಿಶದಾ ವಿಭೂತಿ |
ಧರ್ಮಾರ್ಯಾಃ ಪವರ್ಗ ಫಲದಾಸಕಲಾಘ ಹಂತ್ರೀ ||

ಎಂಬ ವ್ಯಾಸ ಮಹರ್ಷಿಗಳ ಅಭಿಪ್ರಾಯದಂತೆ ಮುತ್ತೈದೆಯವರೂ, ವಿಧವೆಯರೂ, ಬ್ರಾಹ್ಮಣರೂ ಸದಾ ಪಾಪನಾಶಕವಾದ ಮತ್ತು ಮೋಕ್ಷದಾಯಕವಾದ ಭಸ್ಮ ತ್ರಿಪುಂಢಧಾರಣ ಮಾಡಬೇಕು.

## ದೇಹದಾಂಗದಲ್ಲಿ ಭಸ್ಮ ಧಾರಣ ಕ್ರಮ

ಉತ್ತಮಾಂಗೇ ಲಲಾಟೇಚ ಶ್ರವಣ ದ್ವಿತಿಯೇ ತಥಾ ।
ಗಲೇ ಭುಜದ್ವಯೇ ಚೈವ ಹೃದಿ ನಾಭೌ ಪೃಷ್ಠಕೇ ||
ಬಾಹು ಯುಗ್ಮೇ ಕಕುದ್ದೇಶೀ ಮಣಿ ಬಂಧದ್ವಯೇ ತಥಾ |
ತ್ರಿಪುಂಢ್ರಂ ಭಸ್ಮನಾ ಧಾರ್ಯಂ ಮೂಲ ಮಂತ್ರೇಣ ಸಾಧಕೈಃ ||

ಎಂಬಂತೆ ಮಸ್ತಕ, ಹಣಿ, ಎರಡು ಕಿವಿ, ಕಂಠ, ಎರಡು ಭುಜ, ಎದೆ, ನಾಭಿ, ಬೆನ್ನು, ಎರಡು ಮೊಳಕೈ, ಹೆಗಲು, ಎರಡು ಮುಂಗೈ, ಒಟ್ಟು ಈ ಹದಿನೈದು ಅಂಗಗಳಲ್ಲಿ ವಿಭೂತಿ ಧರಿಸಬೇಕು. ವೀರಶೈವಾಗಮ ಗ್ರಂಥದಲ್ಲಿ ಮೂವತ್ತೆರಡು ಸ್ಥಾನಗಳಲ್ಲಿ ವಿಭೂತಿ ಧರಿಸುವ ಕ್ರಮವನ್ನು ಹೇಳಿದೆ. ಆದರೆ ಪ್ರಾಪಂಚಿಕರು ಮೇಲೆ ಬರೆದಂತೆ ನಾಭಿಯ ಕೆಳಗೆ ವಿಭೂತಿ ಧರಿಸಬಾರದು. ಕಾರಣ ಅಷ್ಟೇ ಸ್ಥಾನಗಳನ್ನು ಹೇಳಿದೆ. ಗೃಹಸ್ಥರು ವಿಭೂತಿಯನ್ನೂ ನೀರನ್ನೂ ಮಿಶ್ರ ಮಾಡಿ (ಕೂಡಿಸಿ) ಧರಿಸಬೇಕು. ಸನ್ಯಾಸಿಗಳು ಜಲರಹಿತವಾದ ಭಸ್ಮ ಧರಿಸಬೇಕು. ಈ ಪ್ರಕಾರವಾಗಿ ಸ್ಕಂದಪುರಾಣದಲ್ಲಿ ಹೇಳಿದೆ. ಆದರೆ ವಿಶೇಷ ಜನರು ಸನ್ಯಾಸಿಗಳಂತೆ ಜಲರಹಿತವಾಗಿ ವಿಭೂತಿಯನ್ನು ಧರಿಸುತ್ತಾರೆ. ಇದು ಯೋಗ್ಯವಾದುದಲ್ಲ. ಆದಷ್ಟು ನೀರನ್ನು ಮಿಶ್ರಮಾಡಿ ಭಸ್ಮ ಧರಿಸಿಕೊಳ್ಳುವ ರೂಢಿಯನ್ನಿಟ್ಟುಕೊಳ್ಳಬೇಕು.

ಯಾವಂತಃ ಪತಿತೌ ಭೂ ಮೌ ಭಸ್ಮನಃ ಪರಮಾಣವಃ|
ತಾವದ್ವರ್ಷಸಹಸ್ರಾಣಿ ರೌರವಂ, ನರಕಂ ಪ್ರಜೇತ್||
(ಕ್ರಿಯಾಸಾರ ಗ್ರಂಥ)

ಇನ್ನು ಭಸ್ಮದ ಮಹತ್ವವನ್ನು ಅರಿಯದೇ ಅನೇಕರು ವಿಭೂತಿಯನ್ನು ಧರಿಸುವಾಗ್ಗೆ ಮನಬಂದಂತೆ ವಿಭೂತಿಯನ್ನು ತಿಕ್ಕಿ ತಿಕ್ಕಿ ಕೈಯ್ಯಲ್ಲಿದ್ದಷ್ಟು

ವಿಭೂತಿಯನ್ನು ನೆಲದಮೇಲೆ ಕೆಡವಿಯೇ ಧರಿಸಿಕೊಳ್ಳುತ್ತಾರೆ. ಹೀಗೆ ಭಸ್ಮದ ಕಣಗಳನ್ನು ಕೆಡವುವದರಿಂದ ಅಂದರೆ ಎಷ್ಟು ಭಸ್ಮದ ಕಣಗಳು ಬೀಳುವವೋ ಅಷ್ಟು ಸಹಸ್ರವರ್ಷ ನರಕದಲ್ಲಿರುತ್ತಾರೆಂದು ಕ್ರಿಯಾಸಾರ ಗ್ರಂಥದಲ್ಲಿ ಹೇಳಿದೆ. ಆದಕಾರಣ ವಿಭೂತಿಯನ್ನು ಬಹು ಸೂಕ್ಷ್ಮವಾಗಿಯೂ ಸಾವಧಾನವಾಗಿಯೂ ಧರಿಸಿಕೊಳ್ಳಬೇಕು.

ಆಧುನಿಕ ಕಾಲದಲ್ಲಿ ಯಾವದೇ ಜನಾಂಗದವರಾದರೂ ಭಸ್ಮವ್ಯಾಪಾರವನ್ನು ಮಾಡುತ್ತಾರೆ. ಇಂಥವರು ಶಾಸ್ತ್ರೋಕ್ತವಾದ ವಿಭೂತಿಯನ್ನು ತಯಾರ ಮಾಡದೆ, ಲಾಭದ ಆಶೆಗಾಗಿ ಗಿರಣಿ ಅಥವಾ ಕುಲುಮೆಗಳಲ್ಲಿಯ ಬೂದಿಯನ್ನೇ ಉಂಡಿಗಳನ್ನಾಗಿ ಮಾಡಿ ಮಾರುತ್ತಾರೆ. ಇಂಥವು ಅಲ್ಪ ಬೆಲೆಗೆ ದೊರೆಯುವದರಿಂದ ಕೆಲವು ಕೃಪಣ ವೀರಶೈವರು ಅಂಥವುಗಳನ್ನೇ ಅಲ್ಪ ಬೆಲೆಗೆ ತೆಗೆದುಕೊಂಡು ಧರಿಸುತ್ತಿರುವರು. ಶಿವಶಿವಾ ಎಂಥ ಅನ್ಯಾಯುವಿದು, ಇಂಥವರಿಗೆ ಮುಕ್ತಿ ಹೇಗೆ ದೊರೆಯುವದು? ವೀರಶೈವ ಬಾಂಧವರೇ ಇನ್ನಾದರೂ ದುಡ್ಡಿನ ಆಶೆಯನ್ನು ಬಿಟ್ಟು ನೀಚ ಕುಲದವರಿಂದ ತಯಾರಾದ ವಿಭೂತಿಯನ್ನು ಧರಿಸಿ ಅಧೋಗತಿ ಹೊಂದುವದಕ್ಕಿಂತ ಶಾಸ್ತ್ರೋಕ್ತವಾಗಿ ಗೋಮಯದಿಂದ ತಯಾರಾದ ಭಸ್ಮವನ್ನು ಒಂದೆರಡು ದುಡ್ಡು ಹೆಚ್ಚಿಗೆ ಬಿದ್ದರೂ ಕೊಟ್ಟು ತೆಗೆದುಕೊಂಡು ಧರಿಸುವದರಿಂದ ಈ ಭವ ಬಂಧನ ಪಾಶದಿಂದ ಬಿಡುಗಡೆಯಾಗಿ ಮುಕ್ತಿಯನ್ನು ಹೊಂದುವಿರಿ.

ಭಸ್ಮವು ಅಷ್ಟಾವರಣಗಳಲ್ಲಿ ಒಂದಾಗಿರುವದು. ಗುರುಲಿಂಗ ಜಂಗಮರಲ್ಲಿಡುವಷ್ಟು ಪೂಜ್ಯ ಭಕ್ತಿಯನ್ನು ಈ ಭಸ್ಮದಲ್ಲಿಯೂ ಇಡಬೇಕಾಗುವದು ಅನಿವಾರ್ಯವಾದದ್ದಾಗಿದೆ. ಇಂಥ ಪವಿತ್ರವಾದ ಭಸ್ಮವನ್ನು ಕಂಡಕಂಡಲ್ಲಿಡಬಾರದು ದಾಟಬಾರದು. ಅಪವಿತ್ರ ಹಸ್ತದಿಂದ ಸ್ಪರ್ಶ ಮಾಡಬಾರದು ರೇಲ್ವೆ, ಮೋಟಾರಗಳಲ್ಲಿ ಒಯ್ಯಬಾರದು. ಒಯ್ಯುವ ಪ್ರಸಂಗ ಬಂದರೆ ಪುನಃ ಹೊಸ ಗಟ್ಟಿಗಳನ್ನೇ ತೆಗೆದುಕೊಂಡು ಹೋಗಿ ಉಪಯೋಗಿಸಬೇಕು. ಪಾದರಕ್ಷೆಗಳನ್ನು ಮೆಟ್ಟಿಕೊಂಡಾಗಲೀ ಅಥವಾ ಮೆಟ್ಟಿಕೊಂಡವರನ್ನು ಮುಟ್ಟುತ್ತಾ ಆಗಲೀ ತರಬಾರದು ಹಾಗೂ ಒಯ್ಯಬಾರದು. ಈ ಭಸ್ಮವನ್ನು ಲಿಂಗ-ಮಂತ್ರ ಮೊದಲಾದ ಅಷ್ಟಾವರಣಗಳನ್ನು ಅನುಗ್ರಹಿಸಿದ ಶ್ರೀ ಗುರುಮೂರ್ತಿಗಳಿಂದ ಮಂತ್ರ ಪೂತವನ್ನಾಗಿ ಮಾಡಿಸಿ ಧರಿಸಿಕೊಳ್ಳಬೇಕಲ್ಲದೆ ಕಂಡ ಕಂಡ ಗುರುಗಳಿಂದ ಶುದ್ಧ ಮಾಡಿಸಬಾರದು. ಒಂದು ವೇಳೆ ದುಡ್ಡಿನ ಭ್ರಾಂತಿಯಿಂದ ಶುದ್ಧ ಮಾಡಿಸಿದರೆ ಅದು ಶುದ್ಧವಾಗಲಾರದು. ಆದ ಕಾರಣ ಸದ್ಗುರುವಿನ ಹಸ್ತಕಮಲದಿಂದ ಶುದ್ಧವಾದ ಭಸ್ಮವು ಪ್ರಾಪ್ತವಾದ ನಂತರ ಅದನ್ನೇ ಧರಿಸಿಕೊಂಡು ಪುನೀತರಾಗಬೇಕು ಹಾಗೂ ಅಂಥ ಭಸ್ಮವನ್ನು ತನ್ನ ಪ್ರಾಣದಂತೆ ರಕ್ಷಿಸುತ್ತಾ ಪೂಜ್ಯ ಭಕ್ತಿ-ವಿಶ್ವಾಸಗಳಿಂದ ಉಪಯೋಗಿಸುತ್ತಿರಬೇಕು.

# ಶಾಸ್ತ್ರೋಕ್ತ ಹೊಸ ಭಸ್ಮಗಳನ್ನು ತಯಾರಿಸುವ ಕ್ರಮ

ವೀರಶೈವರಿಗೆ ಅಷ್ಟಾವರಣಗಳಲ್ಲೊಂದಾದ ವಿಭೂತಿಯು ಮಹಾತ್ಮೆಯು ಅತ್ಯಂತ ಮಹತ್ವದ್ದಾಗಿದೆ. ಇದು ಲೋಕದಲ್ಲಿ ಅತ್ಯಂತ ಪವಿತ್ರವಾದ ವಸ್ತುವಾಗಿದೆ. ಇಷ್ಟೇ ಅಲ್ಲ ಮೋಕ್ಷಪ್ರದಾಯಕವೂ ಆಗಿದೆ. ಅದರ ಕಾರಣ ಶಾಸ್ತ್ರೋಕ್ತವಾಗಿ ತಯಾರಿಸುವ ಪದ್ಧತಿಯು ನಮ್ಮೀ ವೀರಶೈವ ಬಾಂಧವರಿಗೆ ತಿಳಿಯಲೆಂಬ ಸದುದ್ದೇಶದಿಂದ ಇಲ್ಲಿ ನಾವು ಆ ಕ್ರಮವನ್ನು ವಿವರಿಸುತ್ತೇವೆ. ಸ್ವಲ್ಪ ಶ್ರಮವಾದಾಗ್ಯೂ ಈ ಶಾಸ್ತ್ರೋಕ್ತ ಪದ್ಧತಿಯಿಂದ ವಿಭೂತಿಯನ್ನು ಸ್ವಂತ ತಯಾರಿಸಿಕೊಂಡು ಧನ್ಯರಾಗಬೇಕಲ್ಲದೆ ನಮ್ಮ ಶ್ರಮವನ್ನೂ ಸಾರ್ಥಕಗೊಳಿಸಿದಂತಾಗುತ್ತದೆ. ಅಸ್ತು.

ವೀರಶೈವರ ಮುಖ್ಯ ಲಕ್ಷಣವಾದ ಅಷ್ಟಾವರಣಗಳಲ್ಲಿ (೧) ಆಂತರಿಕ ಅಷ್ಟಾವರಣವೆಂದೂ, (೨) ಬಹಿರಂಗ ಅಷ್ಟಾವಾರಣವೆಂದೂ ಎರಡು ವಿಧವಾಗಿದೆ. ಆಂತರಿಕ ಅಷ್ಟಾವರಣ ಶುದ್ಧತೆಯ ಸಲುವಾಗಿ ಬಹಿರಂಗ ಅಷ್ಟಾವರಣದ ಅತ್ಯವಶ್ಯಕತೆಯಿರುವಂತೆ ಭಸ್ಮವನ್ನು ತಯಾರಿಸುವದು ೧) ಸೋಪಾಧಿಕ, ೨) ನಿರೋಪಾಧಿಕ ಹೀಗೆ ಎರಡು ಪ್ರಕಾರವಾಗಿದೆ.

ಆ ದಿವ್ಯ ಜ್ಯೋತಿಸ್ವರೂಪನಾದ ಸಚ್ಚಿದಾನಂದ ಮೂರ್ತಿಯು (ಶಿವನ) ತೇಜಸ್ಸಿಗೆ ನಿರುಪಾಧಿಕವೆಂದೂ, ಅದೇ "ಚಿದ್ಭಸಿತ"ವೆಂದೂ ಹೇಳಲ್ಪಡುತ್ತದೆ. ಇಂಥ ಯಾವ ಶಿವನ ದಿವ್ಯ ತೇಜಸ್ಸನ್ನು ಪಡೆಯುವದಕ್ಕಾಗಿ ಬಹಿರಷ್ಟಾವರಣದಲ್ಲಿ ಉಪಯೋಗಿಸಲ್ಪಡುವ ಭಸ್ಮವು ಸೋಪಾಧಿಕವೆಂದು ಹೇಳಲ್ಪಡುವದು. ಶಿವನ ಸದ್ಯೋಜಾತಾದಿ ಪಂಚ ಮುಖಗಳಿಂದ ಉದ್ಭವಿಸಿದ ಕಪಿಲಾದಿ ವರ್ಣಗಳ ನಂದೆ-ಭದ್ರೆ ಮೊದಲಾದ ಪಂಚ ಗೋವುಗಳ ಸೆಗಣಿಯಿಂದ ತಯಾರಿಸಿದ ಭಸ್ಮವೇ ಸೋಪಾಧಿಕವೆಂದು ಹೇಳಲ್ಪಡುವದು. ಇಂಥ ಯಾವ ಸೋಪಾಧಿಕ ಭಸ್ಮವನ್ನು ತಯಾರು ಮಾಡುವ ಕ್ರಮದಲ್ಲಿ ೧) ಕಲ್ಪ, ೨) ಅನುಕಲ್ಪ, ೩) ಉಪಕಲ್ಪ, ೪) ಅಕಲ್ಪವೆಂದು ನಾಲ್ಕು ಪ್ರಕಾರಗಳಾಗಿವೆ.

೧) "ಕಲ್ಪ" ಭಸ್ಮವನ್ನು ತಯಾರಿಸುವ ರೀತಿಯು:– ಗೋವುಗಳ ಗೋಮವನ್ನು (ಆಕಳುಗಳ ಶೆಗಣಿಯನ್ನು) ಭೂಮಿಗೆ (ನೆಲಕ್ಕೆ) ಬೀಳದಂತೆ ಅಂತರವಾಗಿಯೇ ಸದ್ಯೋಜಾತ ಮಂತ್ರದಿಂದ ಹಿಡಿದುಕೊಂಡು ವಾಮದೇವ ಮಂತ್ರದಿಂದ ಉಂಡೆಯನ್ನು ಮಾಡಿ ತತ್ಪುರುಷ ಮಂತ್ರದಿಂದ ಒಣಗಿಸಿ, ಅಘೋರ ಮಂತ್ರದಿಂದ; ಶಿವ ಮಂತ್ರದಿಂದ ಸಂಸ್ಕರಿಸಿದ ಅಗ್ನಿಯಲ್ಲಿ ಸುಟ್ಟು ಬೂದಿಯನ್ನು ಮಾಡಿ ಅದನ್ನು ಮೂಲ ಮಂತ್ರದಿಂದ ಸೋಸಿ ತಯಾರ ಮಾಡುವದೇ ಕಲ್ಪಭಸ್ಮವೆನಿಸುವದು.

೨) ''ಅನುಕಲ್ಪ''ಭಸ್ಮವನ್ನು ತಯಾರಿಸುವ ಕ್ರಮ:- ಅಡವಿಯಲ್ಲಿ ಬಿದ್ದಿರುವ ಕಾಕುಳ್ಳುಗಳನ್ನು ಆರಿಸಿ ತಂದು ಅಘೋರ ಮಂತ್ರದಿಂದ ಸುಟ್ಟು ಬೂದಿ ಮಾಡಿ, ಶಿವ ಮಂತ್ರದಿಂದ ಸೋಸಿ ತಯಾರಪಡಿಸುವದೇ ಅನುಕಲ್ಪ ಭಸ್ಮವೆನಿಸುತ್ತದೆ.

೩) ''ಉಪಕಲ್ಪ'' ಭಸ್ಮವನ್ನು ತಯಾರಿಸುವ ಕ್ರಮ:- ಅಂಗಡಿ ಮೊದಲಾದ ಸ್ಥಳಗಳಲ್ಲಿ ಮಾರಲ್ಪಡುವ ಭಸ್ಮದ ಗಟ್ಟಿಗಳನ್ನು ತಂದು ಪುಡಿ ಮಾಡಿ, ಸೋಸಿ ಗೋಮೂತ್ರದಿಂದ ಕಲಿಸಿ, ಉಂಡೆ ಮಾಡಿ, ಅದನ್ನು ಮತ್ತೆ ಮೇಲಿನ ಕ್ರಮದಂತೆ ಸುಟ್ಟು ಸೋಸಿ ತಯಾರಮಾಡುವದೇ ಉತಕಲ್ಪ ಭಸ್ಮವೆನಿಸುವದು.

೪) ''ಅಕಲ್ಪ''ಭಸ್ಮವನ್ನು ತಯಾರಿಸುವ ಕ್ರಮ:-ಮಂತ್ರವಿಧಾನ ಗೊತ್ತಿಲ್ಲದವರು ಯಾರೇ ಆದರೂ ಗೋಮಯವನ್ನು ತಂದು ಮಂತ್ರ ಸಂಸ್ಕಾರವಿಲ್ಲದೆ ಸುಟ್ಟು ತಯಾರು ಮಾಡುವದೇ ಅಕಲ್ಪ ಭಸ್ಮವೆನಿಸುವದು. ಈ ಮೇಲೆ ವಿವರಿಸಿದ ಭಸ್ಮದಲ್ಲಿ ಮೊದಲನೆಯದಾದ ಕಲ್ಪ ಭಸ್ಮವು ಸರ್ವಶ್ರೇಷ್ಠವಾದುದು.

# ಭಸ್ಮದ ಪಂಚ ನಾಮಗಳೂ ಹಾಗೂ ಅವುಗಳ ಉಪಯೋಗಗಳು

ಸದ್ಯೋಜಾತ ಮುಖದಿಂದ ೧) ಶಿವನ ಪಂಚಮುಖದಲ್ಲಿ ಮೊದಲನೆಯದಾದ ''**ನಂದೆ**'' ಎಂಬ ಕಪಿಲ ವರ್ಣದ ಅಂದರೆ ಗೋರೋಚನ ಬಣ್ಣದ ಆಕಳು ಜನಿಸಿದ್ದು, ಅದರ ಶಗಣೆಯ ಬೂದಿಯಿಂದ ತಯಾರಾದದ್ದಕ್ಕೆ''**ವಿಭೂತಿ**''ಎನ್ನುವರು. ಇದು ಅಣಿಮಾಧ್ಯಷ್ಟ ಸಿದ್ಧಿಪ್ರದವಾದುದರಿಂದ ಶಿವಪೂಜಾದಿ ನಿತ್ಯಕಾರ್ಯಗಳಲ್ಲಿ ಉಪಯೋಗಿಸಬೇಕು.

೨) ಶಿವನ ಎರಡನೇಯದಾದ ವಾಮದೇವ ಮುಖದಿಂದ **ಭದ್ರೆ**ಯೆಂಬ ಕೃಷ್ಣವರ್ಣದ (ಕಪ್ಪು ಬಣ್ಣದ)ಆಕಳು ಜನಿಸಿದ್ದು ಅದರಶಗಣಿಯ ಬೂದಿಯಿಂದ ತಯಾರಾದುದಕ್ಕೆ ''**ಭಸಿತ**''ವೆಂದು ಹೇಳಲ್ಪಡುವದು. ಇದು ಶಿವತತ್ವ ಪ್ರಕಾಶವಾಗಿರುವದರಿಂದ ಇದನ್ನು ನೈಮಿತ್ತಿಕ ಕಾರ್ಯಗಳಲ್ಲಿ ಅಂದರೆ ಗುರು-ಜಂಗಮ-ಪಾದಪೂಜಾದಿ ಕಾರ್ಯಗಳಲ್ಲಿ ಉಪಯೋಗಿಸಬೇಕು.

೩) ಶಿವನ ಮೂರನೆಯದಾದ ಅಘೋರ ಮುಖದಿಂದ "**ಸುರಬಿ**"ಯೆಂಬ ಧವಲ ವರ್ಣದ ಅಂದರೆ ಬಿಳೇ ಬಣ್ಣದ ಆಕಳು ಜನಿಸಿದ್ದು, ಅದರ ಶಗಣಿಯ ಬೂದಿಯಿಂದ ತಯಾರಾದದ್ದು ''**ಭಸ್ಮ**''ವೆನಿಸಿಕೊಳ್ಳುವದು. ಇದನ್ನು ಎಲ್ಲಾ ಪ್ರಾಯಶ್ಚಿತ್ತ ಕಾರ್ಯಗಳಲ್ಲಿ ಉಪಯೋಗಿಸಬೇಕು, ಇದರಿಂದ ಪಾಪ ಕ್ಷಯವಾಗುವದು.

೪) ಶಿವನ ನಾಲ್ಕನೆಯದಾದ ತತ್ಪುರುಷ ಮುಖದಿಂದ ಸುಶೀಲೆಯೆಂಬ ಧೂಮ್ರ ವರ್ಣದ ಅಂದರೆ ಕಪ್ಪು-ಕೆಂಪು ಬಣ್ಣ ಕೂಡಿದ ಆಕಳು ಜನಿಸಿದ್ದು, ಅದರ ಶಗಣಿಯು ಬೂದಿಯಿಂದ ತಯಾರಾದುದಕ್ಕೆ "ಕ್ಷಾರ"ವೆಂಬ ಹೆಸರು. ಇದರಿಂದ ಸರ್ವ ಸಂಕಟಗಳು ನಿವಾರಣೆ ಹೊಂದುವ ಮೂಲಕ ಎಲ್ಲ ಕಾರ್ಯ ಕ್ರಿಯೆಗಳಲ್ಲಿ ಉಪಯೋಗಿಸಬೇಕು.

೫) ಶಿವನ ಐದನೇಯದಾದ ಈಶಾನ್ಯ ಮುಖದಿಂದ ಸುಮನವೆಂಬ ರಕ್ತವರ್ಣದ(ಕೆಂಪು ಬಣ್ಣದ) ಆಕಳು ಜನಿಸಿದ್ದು ಅದರ ಶಗಣಿಯಿಂದ ತಯಾರಾದುದಕ್ಕೆ "ರಕ್ಷೆ"ಎಂಬ ಹೆಸರಿನಿಂದ ಕರೆಯಲ್ಪಡುವದು. ಇದರಿಂದ ಭೂತ-ಪ್ರೇತಾದಿಗಳ ಭಯ ನಿವಾರಣೆ ಹಾಗೂ ನಾಶವಾಗುವದು. ಹೆಚ್ಚಾಗಿ ಇದನ್ನು ಮೋಕ್ಷಕಾರ್ಯದಲ್ಲಿ ಉಪಯೋಗಿಸಬೇಕಾಗುವದು.

## ಭಸ್ಮದ ಉಂಡಿಗಳನ್ನು ತಯಾರ ಮಾಡುವ ಕ್ರಮ

ಈ ಹಿಂದೆ ಹೇಳಿದ ಕಲ್ಪಾದಿ ನಾಲ್ಕು ಪ್ರಕಾರದ ಭಸ್ಮಗಳನ್ನು ತಯಾರ ಮಾಡುವ ಕ್ರಮದಲ್ಲಿಯ ಹೇಳಿಕೆಯಂತೆ ಬೂದಿಯನ್ನು ತಯಾರ ಮಾಡಿಕೊಂಡ ನಂತರ ಅದನ್ನು ಒಂದು ತಿಳುವಾದ ಶುದ್ಧ ಅರಿವೆಯಲ್ಲಿ ಹಾಕಿ ಶೋಧಿಸಬೇಕು ಹೀಗೆ ಶೋಧಿಸಿದ ಬೂದಿಯನ್ನು ಪುನಃ ಒರಳಲ್ಲಿ ಹಾಕಿ ಚನ್ನಾಗಿ ಕುಟ್ಟಿ, ಮತ್ತೆ ಶೋಧಿಸಬೇಕು. ಹೀಗೆ ಎರಡನೇ ಸಾರೆ ಶೋಧಿಸಿದ ಬೂದಿಯನ್ನು ಮಡಿ ನೀರಿನಿಂದ ತಿಳುವಾದ ಸಣ್ಣ ಸಣ್ಣ ಹಲಪಿಗಳಂತೆ ಮಾಡಿ, ಮಡಿ ಬಟ್ಟೆಗಳನ್ನು ಚನ್ನಾಗಿ ಹರಡಿ ಬಿಸಿಲಿನಲ್ಲಿ ಒಣಗಿಸಬೇಕು. ಹೀಗೆ ಒಣಗಿದ ಹಲಪಿಗಳನ್ನು ಮತ್ತೊಮ್ಮೆ ಕುಟ್ಟಿ ಶೋಧಿಸಿ ತಮಗೆ ಬೇಕಾದ ಆಕಾರಗಳ ಉಂಡಿಗಳನ್ನು ಕಟ್ಟಿ ಒಣಗಿಸಲು ಅವು ಶುದ್ಧವಾದ ಮತ್ತು ಶುಭ್ರವಾದ ಭಸ್ಮದ ಗಟ್ಟಿಗಳು ತಯಾರಾಗುತ್ತವೆ. ಬಟ್ಟಿಗಳಲ್ಲಿ ಗಟ್ಟಿಗಳನ್ನು ಸುಡುವದಕ್ಕಿಂತ ಬಿಸಿಲಲ್ಲಿ ಒಣಗಿಸುವದೇ ಶ್ರೇಷ್ಠವಾದುದು.

## ದೀಕ್ಷಾ-ಶಿಕ್ಷಾ-ಜ್ಞಾನ-ಭಸಿತಗಳನ್ನು ಸಿದ್ಧ ಮಾಡುವ ಪದ್ಧತಿ

೧) ಶಿವಮಂತ್ರ ಸಂಸ್ಕಾರದಿಂದ ಸುಡಲ್ಪಟ್ಟ ಬೂದಿಯನ್ನು ಮೂಲ ಮಂತ್ರದಿಂದ ಶೋಧಿಸಿ ಕೇವಲ ಸದ್ಗುರು ಪಾದೋದಕವನ್ನು ಮಿಶ್ರ ಮಾಡಿ ತಯಾರ ಮಾಡಿದ ಘಟ್ಟಿಗಳು ದೀಕ್ಷಾ ಭಸ್ಮ"ದ ಗಟ್ಟಿಗಳೆಂದು ಹೇಳಲ್ಪಡುತ್ತವೆ.

೨) ಮೇಲಿನಂತೆ ಶಿವಮಂತ್ರ ಸಂಸ್ಕಾರದಿಂದ ಸುಡಲ್ಪಟ್ಟ ಬೂದಿಯನ್ನು

ಕೇವಲ ಸದ್ಗುರು ಪಾದೋದಕ ಹಾಗೂ ಲಿಂಗಪಾದೋದಕಗಳನ್ನು ಮಿಶ್ರಮಾಡಿ ಚನ್ನಾಗಿ ಕಲಿಸಿ, ತಯಾರ ಮಾಡಿದ ಘಟ್ಟಿಗಳು ''ಶಿಕ್ಷಾ ಭಸ್ಮ''ದ ಗಟ್ಟಿಗಳೆಂದು ಹೇಳಲ್ಪಡುತ್ತದೆ.

೩) ಶ್ರೀ ಗುರುವಿನ ಪಾದೋದಕದಲ್ಲಿ ತಯಾರ ಮಾಡಿದ ಘಟ್ಟಿಗಳನ್ನು ಪುನಃ ಲಿಂಗ ಪಾದೋದಕ-ಜಂಗಮ ಪಾದೋದಕದ ಪ್ರೋಕ್ಷಣೆಯಿಂದ ಪ್ರಣ ಮಾಕ್ಷರಗಳನ್ನು ಸಂಬಂಧ ಮಾಡಿದ ನಂತರ "ಜ್ಞಾನ ಭಸ್ಮ"ವೆಂದು ಹೇಳಲ್ಪಡುತ್ತದೆ. ಮತ್ತು ಇದೇ ''ಕ್ರಿಯಾಭಸ್ಮ''ವೆನಿಸಿಕೊಳ್ಳುವದು.

## ಭಸ್ಮವನ್ನು ಉಪಯೋಗಿಸುವ ಮೂರು ಕ್ರಮಗಳು

ವೀರಶೈವರು ಭಸ್ಮ ಧಾರಣ ಮಾಡಬೇಕಾದರೆ ಭಸ್ಮಧಾರಣ ಕ್ರಮದಲ್ಲಿ ಮೂರು ಪ್ರಕಾರಗಳಿವೆ. ೧) ಭಸ್ಮಸ್ನಾನ ಧಾರಣ ಕ್ರಮ ೨) ಉದ್ಧೂಳನ ಕ್ರಮ ೩) ಧಾರಣವೆಂಬ ಕ್ರಮ ಇವುಗಳ ಧರಿಸುವ ಪದ್ಧತಿಯನ್ನು ಕೆಳಗೆ ವಿವರಿಸಲ್ಪಡುವದು.

೧) ವೀರಶೈವನು ಶುದ್ಧ ನೀರಿನಿಂದ ಝಳಕ ಮಾಡಿ, ಮಡಿ ಬಟ್ಟೆಯುಟ್ಟು ಯೋಗ್ಯ ಆಸನದಲ್ಲಿ ಕುಳಿತನಂತರ ಪ್ರಣಾಯಾಮಾದಿಗಳನ್ನು ಮಾಡಬೇಕು. ಆ ನಂತರ ಭಸ್ಮಸ್ನಾನದ ಸಂಕಲ್ಪ ಮಾಡಿ ಭಸ್ಮವನ್ನು ಎಡಗೈಯ ಅಂಗೈಯಲ್ಲಿಟ್ಟು, ಆ ಕೈಯನ್ನು ಬಲದೊಡೆಯಮೇಲಿಟ್ಟು ಅದರಮೇಲೆ ಬಲಹಸ್ತವನ್ನು ಮುಚ್ಚಿ ಮೂಲಮಂತ್ರದಿಂದ ಎಂಟುಸಲ ಅಭಿಮಂತ್ರಿಸಬೇಕು. ಆ ನಂತರ ''ಈಶಾನ'' ಮಂತ್ರದಿಂದ ಮಸ್ತಕಕ್ಕೂ ತತ್ಪುರುಷ ಮಂತ್ರದಿಂದ ಮುಖಕ್ಕೂ, ಅಘೋರ ಮಂತ್ರದಿಂದ ಹೃದಯಕ್ಕೂ, ವಾಮದೇವ ಮಂತ್ರದಿಂದ ಗುಹ್ಯ ಸ್ಥಾನಕ್ಕೂ, ಸದ್ಯೋಜಾತ ಮಂತ್ರದಿಂದ ಪಾದಗಳಿಗೂ, ಧರಿಸಿ, ಪ್ರಣಮಾಕ್ಷರಗಳ ಉಚ್ಚಾರಣೆಯಿಂದ ಸರ್ವಾಂಗಗಳಲ್ಲಿಯೂ ಲೇಪನ ಮಾಡಿಗೊಳ್ಳುವದಕ್ಕೆ **ಭಸ್ಮಸ್ನಾನ ವೆನ್ನುವರು.** ಮತ್ತು ಇದೇ ಆಗ್ನೇಯಸ್ನಾನವೆಂದು ಹೇಳಲ್ಪಡುವದು.

೨) ಭಸ್ಮದ ಗಟ್ಟಿಗೆ ಏಳುಸಾರೆ ಮೂಲ ಮಂತ್ರದಿಂದ ಅಭಿಮಂತ್ರಿಸಿ ಅದನ್ನು ಸರ್ವಾಂಗಕ್ಕೆ ಲೇಪನ ಮಾಡಿಕೊಳ್ಳುವದಕ್ಕೆ **ಉದ್ಧೂಲನ ಕ್ರಮ** ವೆಂದು ಹೇಳಲ್ಪಡುತ್ತದೆ.

೩) ಈ ಮೂರನೆಯದಾದ ಧಾರಣ ಕ್ರಮವನ್ನು ಈ ಹಿಂದೆ ತ್ರಿಪುಂಡ ಭಸ್ಮ ಧಾರಣ ಭಸ್ಮ ಧಾರಣ ಕ್ರಮದಲ್ಲಿ ಹೇಳಿದ್ದೇವೆ. ಅಲ್ಲಿ ನೋಡಿ ಅದರಂತೆ ಭಸ್ಮ ಧಾರಣಮಾಡುವ ಕಮ್ರಕ್ಕೆ **ಧಾರಣ ಕ್ರಮವೆಂದು** ಹೇಳುತ್ತಾರೆ. ಮತ್ತು ಭಸ್ಮ ವನ್ನುಧರಿಸುವ ದೇಹದ ಸ್ಥಾನಗಳನ್ನೂ ಹೇಳಿದೆ. ವೀರಶೈವನು ಸದಾ ಭಸ್ಮಧಾರಿಯಾಗಿರಬೇಕು. ಕನಿಷ್ಠವಾಗಿ ಪ್ರಾತಃಕಾಲ, ಮಧ್ಯಾನ್ಹಕಾಲ, ಸಾಯಂಕಾಲ ಈ ಕಾಲತ್ರಯದಲ್ಲಾದರೂ ಧರಿಸಿಕೊಳ್ಳಬೇಕು,

ಈ ಪ್ರಕಾರವಾಗಿ ಶಾಸ್ತ್ರೋಕ್ತ ಭಸ್ಮದ ಘಟ್ಟಿಗಳನ್ನು ತಯಾರಿಸಬೇಕಾದ್ದರಿಂದ ಇದು ಹಲಕೆಲವಸಗೆ ಪ್ರಾಪಂಚಿಕ ಲಂಪಟದಲ್ಲಿ ಸಮಯದ ಅಭಾವದ ಮೂಲಕ ಅಸಾಧ್ಯವೆನಿಸುವದು. ಸರ್ವರಿಗೂ ಸಾಧಿಸಲಿಕ್ಕಾಗದ ವಿಷಯವಾಗಿದೆ. ಕಾರಣ ಇಂಥ ಶಾಸ್ತ್ರೋಕ್ತ ಭಸ್ಮದ ಘಟ್ಟಿಗಳನ್ನು ತಯಾರಿಸಿ, ವೀರಶೈವರಿಗೆ ಸದುಪಯೋಗವಾಗಿ, ಅವುಗಳ ಧಾರಣೆಯಿಂದ ವೀರಶೈವ ಸಮಾಜವೇ ಮೋಕ್ಷ ಹೊಂದಲೆಂಬ ಅತ್ಯುಚ್ಚಧ್ಯೇಯದಿಂದ ಲಿಂಗೈಕ್ಯ ಹಾನಗಲ್ಲ ಶ್ರೀ ಕುಮಾರ ಮಹಾಸ್ವಾಮಿಗಳು ಸ್ಥಾಪಿಸಿದ್ದ **"ಶಿವಯೋಗ ಮಂದಿರ"**ದಲ್ಲಿ ಉಪರೋಕ್ತ ವಿವರಿಸಿದ ಶಾಸ್ತ್ರೋಕ್ತ ತಯಾರಾದ ಸಕಲ ತರದ ಭಸ್ಮಗಳು ಇಂದಿಗೂ ತಯಾರಾಗುತ್ತವೆ. ಅಂಥವುಗಳನ್ನು ತರಿಸಿ, ಧರಿಸಿಕೊಂಡು, ವೀರಶೈವರು ಧನ್ಯರಾಗಬೇಕು. ಮತ್ತು ಸಶಾಸ್ತ್ರೀಯವಾಗಿತಯಾರಿಸಿದ**"ಶಿವದಾರ ಲಿಂಗುಗಳೂ"**ಸಹ ದೊರೆಯುತ್ತವೆ. ಅವನ್ನೂ ಸಹ ಅಲ್ಲಿಯೇ ತರಿಸಿ ಉಪಯೋಗಿಸುವದು ಶುದ್ಧ ಕ್ರಿಯೆಯೆನಿಸುವದಲ್ಲದೆ ಉತ್ತಮ ಮಾರ್ಗವೆಂದೆನಿಸುವದು.

## ರುದ್ರಾಕ್ಷಧಾರಣ-ಕ್ರಮ-ವಿಚಾರವು

ಧಾರಯೇತ್ಸರ್ವಕಾಲಂತು ರುದ್ರಾಕ್ಷಂ ಶಿವಪೂಜಕಃ ।
ಏವಂ ರುದ್ರಾಕ್ಷಧಾರೀಯಃ ಸರ್ವ ಕಾಲೇತು ವರ್ತತೇ ॥
ತಸ್ಯ ಪಾಪಕಥಾನಾಸ್ತಿ ಮೂಢಸ್ಯಾಪಿ ನ ಸಂಶಯಃ ॥

(ಶಿದ್ಧಾಂತ ಶಿಖಾಮಣಿ)

ಎಂಬಂತೆ ಶಿವಪೂಜಾ ಧುರೀಣನು ಸರ್ವ ಕಾಲದಲ್ಲಿಯೂ ರುದ್ರಾಕ್ಷವನ್ನು ಧರಿಸಬೇಕು. ಎಂಥ ಮೂಢನಾಗಿದ್ದಾಗ್ಯೂ ರುದ್ರಾಕ್ಷಧಾರಣದಿಂದ ಅವನಿಗೆ ಪಾಪಾದಿಗಳು ಸ್ಪರ್ಶ ಸಹ ಮಾಡಲಾರವು. ರುದ್ರಾಕ್ಷ ಧಾರಣದ ನಂತರವೇ ಪೂಜಾದಿಗಳನ್ನು ಮಾಡಬೇಕು.

## ರುದ್ರಾಕ್ಷಿಗಳನ್ನು ಪೋಣಿಸಿ ಮಾಲೆ ಮಾಡುವ ರೀತಿ

ರುದ್ರಾಕ್ಷಿಗಳ ಮಾಲೆಯನ್ನು ಸಶಾಸ್ತ್ರೀಯವಾಗಿ ತಯಾರಿಸಬೇಕಲ್ಲದೆ ಅಕ್ರಮವಾಗಿ ಪೋಣಿಸಿದ ಮಾಲೆಯು ಸಿದ್ಧಿದಾಯಕವಾಗದೇ ನಿಷ್ಫಲದಾಯಕವಾಗಿರುತ್ತದೆ. ಆದ ಕಾರಣ ಈ ರುದ್ರಾಕ್ಷಿಗಳ ಮಾಲೆಯನ್ನು ತಯಾರ ಮಾಡುವದು ಹೇಗಂದರೆ:— ರುದ್ರಾಕ್ಷಿಯ ಮುಖಕ್ಕೆ ಮುಖವನ್ನು; ಪೃಷ್ಠಕ್ಕೆ ಪೃಷ್ಠವನ್ನು ಜೋಡಿಸಿ ಸಂಬಂಧ ಮಾಡಿ ಮಧ್ಯದಲ್ಲಿ ರುದ್ರಗಂಟು ಅಂದರೆ ಎರಡು ಸುತ್ತಿನ ೩ ಗಂಟು ಹಾಕುತ್ತ ಪೋಣಿಸುತ್ತ ಹೋಗಬೇಕು. ಮಾಲಿಕೆಯ ಆರಂಭದಲ್ಲಿ ಮೊದಲನೆಯ ರುದ್ರಾಕ್ಷಿಯದು ಮೇಲ್ಮುಖವಾಗಿರಬೇಕು. ಕೊನೆಗೆ ಒಂದು

ದಪ್ಪವಾದ ರುದ್ರಾಕ್ಷಿ ಪೋಣಿಸಿ ಮಾಲಿಕೆಯು ಮುಗಿದ ನಂತರ ಆರಂಭದ ಮತ್ತು ಕೊನೆಯು ದಾರವನ್ನು ಚನ್ನಾಗಿ ಬಿಗಿದು ಕೂಡಿಸಿ ಮೇಲಿನ ವಿಭಾಗ ದಲ್ಲಿ ಹೆಚ್ಚಿಗೆ ರುದ್ರಾಕ್ಷಿಯೊಂದನ್ನು (ಇದಕ್ಕೆ ತೋರುಮಣಿಯನ್ನುತ್ತಾರೆ.) ಎರಡು ಎಳೆಯಲ್ಲಿ ಪೋಣಿಸಿ ಅದರ ಮೇಲೆ ರುದ್ರಗಂಟು ಹಾಕಬೇಕು. ಜಪ ಮಾಲೆಗೆ ಮಾತ್ರ ಬೇರು ಮಣಿಯನ್ನು ಎರಡು ಅಂಗುಲ ಪ್ರಮಾಣ ಬಿಟ್ಟು ಕಟ್ಟಬೇಕಾಗುವದು. ಈ ಪ್ರಕಾರವಾಗಿ ೧-೮ ರುದ್ರಾಕ್ಷಿಗಳುಳ್ಳ ಜಪ ಮಾಲೆ ಮಾಡಿ ತಯಾರ ಮಾಡಬೇಕು. ಮತ್ತು ಕೊರಳಲ್ಲಿ ಕೈಗಳಲ್ಲಿ ಧರಿಸುವ ಸರಗ ಳನ್ನು ಬೇರೆ ಮಾಡಬೇಕು. ಹೀಗೆ ತಯಾರಿಸಿದ ರುದ್ರಾಕ್ಷಿಗಳ ಸರವನ್ನು ಶ್ರೀ ಗುರುಗಳ ಮುಖಾಂತರವಾಗಿ ಪಂಚಾಮೃತದಿಂದ ಶುದ್ಧಗೊಳಿಸಿಕೊಂಡು ಪದ್ಧ ತಿಯ ಪ್ರಕಾರ ಧರಿಸಿಕೊಳ್ಳಬೇಕು. ಮತ್ತು ಅವುಗಳನ್ನು ತನ್ನ ಪ್ರಾಣದಂತೆ ರಕ್ಷಣೆ ಮಾಡಬೇಕು. ಜಪಮಾಲೆಯನ್ನು ಮಾತ್ರ ಶರೀರದಲ್ಲಿ ಧರಿಸಬಾರದು. ಶರೀರದಲ್ಲಿ ಧರಿಸಿದ್ದ ಸರದಿಂದ ಜಪವನ್ನು ಮಾಡಬಾರದು. ಅಲಿಂಗಿಗಳಿಗೆ ತೋರಿಸಬಾರದು. ಎಡಗೈಯಿಂದ ಮುಟ್ಟಬಾರದು. ಪೂಜಿಸಬೇಕಾದರೂ ಬಲಹಸ್ತದಿಂದಲೇ ತೆಗೆದುಕೊಂಡು ಪೂಜಿಸಬೇಕು. ಕೆಳಗಿನ ಅವಯವಗಳಿಗೂ ಮುಟ್ಟಬಾರದು. ನೆಲದ ಮೇಲೆ ಇಡಬಾರದು. ಅಪವಿತ್ರ ಕೈಗಳಿಂದ ಹಾಗೂ ಅಲಿಂಗಿಗಳು ಮುಟ್ಟಬಾರದು. ರೇಲ್ವೆ, ಮೋಟರುಗಳಲ್ಲಿ ಮೈದರೆ ಅವುಗಳನ್ನು ತೊಳೆದು ಪಂಚಾಮೃತದಿಂದ ಶುದ್ಧ ಮಾಡಿ ಮಂತ್ರ ಜಪದಿಂದ ಪ್ರಾಯಶ್ಚಿತ್ತ ಹೊಂದಿ ಅದರಿಂದ ಪುನಃ ನಿತ್ಯ ಜಪವನ್ನು ಮಾಡಬೇಕು. ಹೀಗೆ ಮಾಡದಿದ್ದರೆ ಆ ಸರವು ಕಲಾರಹಿತವಾಗಿ ಜಪಿಸಿದ ಮಂತ್ರವು ನಿಷ್ಫಲವಾಗಿ ಉಗ್ರ ಸ್ವರೂಪ ಹೊಂದುವದು.

## ಜಪಮಾಲೆಯನ್ನು ಹಿಡಿದು ಜಪಿಸುವ ಕ್ರಮ.

ಜಪಮಾಲಿಕೆಯ ಮೇರು ಮಣಿಯನ್ನು ಅನಾಮಿಕ ಬೆರಳಿನ ಮೇಲ್ಭಾಗ ದಲ್ಲಿ ವಿನ್ಯಾಸ ಮಾಡಿ ಅಂಗುಷ್ಠ ಅನಾಮಿಕ ಮಧ್ಯ ಬೆರಳುಗಳಿಂದ ಒಂದೊಂದೇ ಮಣಿಯನ್ನು ಅರ್ಥ ಸಹಿತವಾಗಿ ಮಂತ್ರದೊಡನೆ ನಾವಕಾಶವಾಗಿ ಎಳೆಯ ಬೇಕಲ್ಲದೆ ಮನಬಂದಂತೆ ಎಳೆಯಬಾರದು. ಒಂದು ವೇಳೆ ಅಲಕ್ಷ್ಯದಿಂದ ಅಥವಾ ಶ್ರೀಮಂತಿಕೆಯ ಮದದಿಂದ ಕೆಳಗೆ ಬಿದ್ದರೆ ಇಲ್ಲವೇ ವ್ಯವಹಾರಿಕ ಲೆಕ್ಕ ದಲ್ಲಿ ಲಕ್ಷಹೋಗಿ ಅಲಕ್ಷದಿಂದ ಕೆಳಗೆ ಬಿದ್ದರೆ ಪುನಃ ಮೊದಲಿನಂತೆ ಜಪ ಮಾಡಿ ಮಂತ್ರ ಸಂಖ್ಯೆಯನ್ನು ಪೂರ್ಣ ಮಾಡಬೇಕು.

ಇನ್ನು ಹಲಕೆಲವು ಜನರು ಡಾಂಭಿಕಕ್ಕಾಗಿ, ಜಪದ ಕ್ರಮವನ್ನು ಅರಿ ಯದೇ ಜಪಮಾಲಿಕೆಯನ್ನು ತೋರು ಬೆರಳಿನ (ತರ್ಜನೀ ಬೆರಳಿನ) ಮೇಲೆ

ಇಟ್ಟುಕೊಂಡು ಹೆಬ್ಬೆರಳಿನಿಂದ ಸಾಕಾಗುವ ವರೆಗೂ ಏಳದೇ ಎಳೆಯುತ್ತಾರೆ. ಆ ಮೇರು ಮಣಿಯು ವಿರಾಮ ಹೊಂದದೆ ಒಂದೇ ಸವನೆ ತಿರುಗುತ್ತಿರುತ್ತದೆ. ಮತ್ತೆ ಕೆಲ ಜನರ ಜಪವು ಲೆಕ್ಕವಿಲ್ಲದೆ ನಡೆದು ಪ್ರಸಾದವು ಸಮ್ಮುಖದಲ್ಲಿ ಬಂದೊಡನೆಯೇ ಮುಗಿಯುವ ರೂಢಿಯುಂಟು. ಇಂಥವರಿಗೆ ಯಮದೇವನು ಯಾವ ಶಿಕ್ಷೆಯನ್ನು ವಿಧಿಸುವನೋ ಎಂಬುದು ಆ ಶಿವನೇ ಅರಿದ ವಿಷಯವಾಗಿದೆ.

## ಯಾವ ಪ್ರಮಾಣದ ರುದ್ರಾಕ್ಷಿಗಳನ್ನು ಧರಿಸಬೇಕು?

ಧಾತ್ರೀ ಫಲಪ್ರಮಾಣಂ ಯಚ್ಛ್ರೇಷ್ಠಮೇತದುದಾ ಹೃತಂ ।
ಬದರೀ ಫಲ ಮಾತ್ರಂಚ ಮಧ್ಯಮಂ ಪ್ರೋಚ್ಯತೇ ಬುಧೈಃ ॥
ಅಧಮಂ ಚಣಕಾಕಾರಂ ಪ್ರಕ್ರಿಯೈಷಾಮಯೋದಿತಾ ॥

ಅರ್ಥ:— ನೆಲ್ಲಿಕಾಯಷ್ಟೇ ಗಾತ್ರವುಳ್ಳ ರುದ್ರಾಕ್ಷಿಗಳು ಶ್ರೇಷ್ಠವಾದವುಗಳು. ಎಲಚೀಕಾಯಿ ಅಂದರೆ ಬೋರೇ ಹಣ್ಣಿನಷ್ಟು ಗಾತ್ರವುಳ್ಳವು ಮಧ್ಯಮವಾದವು. ಕಡಲೆಯ ಕಾಳಿನಷ್ಟು ಗಾತ್ರವುಳವು ಅಧಮ (ಕನಿಷ್ಠ) ವಾದವುಗಳು. ಆದ ಕಾರಣ ನೆಲ್ಲೀಕಾಯಿ ಪ್ರಮಾಣ ಗಾತ್ರವುಳ್ಳ ರುದ್ರಾಕ್ಷಿಗಳನ್ನು ಧರಿಸಲಿಕ್ಕೂ ಜಪ ಮಾಡಲಿಕ್ಕೂ ಉಪಯೋಗಿಸಿಕೊಳ್ಳುವದು ಶ್ರೇಷ್ಠವಾದುದು.

ಕರಪೀಠಾರ್ಚನಂ ಕುರ್ಯಾದಾಗಮೋಕ್ತ ವಿಧಾನತಃ ।
ಕರಸ್ಥಲ ಗತಂ ಲಿಂಗವಾಮತಃ ಕೃತ ಗೋಮುಖಮಂ ॥

ಎಂಬ ವೀರಶೈವ ಕೌಸ್ತುಭಗ್ರಂಥ ಪ್ರಮಾಣದಂತೆ (ರುದ್ರಾಕ್ಷಧಾರಣನಂತರ) ಇಷ್ಟಲಿಂಗಮೂರ್ತಿಯನ್ನು ಕರಡಗಿಯಿಂದ ಹೊರಗೆ ತೆಗೆದು ಎಡಗೈ ಅಂಗೈಯಲ್ಲಿ ಎಡಗಡೆಗೆ ಲಿಂಗುವಿನ ಮುಖ ಮಾಡಿ ಅಂದರೆ ವಾಮಗೋಮುಖವಾಗಿಟ್ಟುಕೊಂಡು ಮಂತ್ರಪೂರ್ವಕವಾಗಿ ಅಭಿಷೇಕವನ್ನು ಸಕ್ರಮವಾಗಿ ಮಾಡಬೇಕು.

ಬಹುಸಂಖ್ಯಾಕರು ಹೀಗೆ ಮಾಡದೆ ಸ್ನಾನ ಮಾಡಿ ಬಂದು ಆಸನದ ಮೇಲೆ ಕುಳಿತುಕೊಂಡಕೂಡಲೇ ಲಿಂಗುವಿಗೆ ಭಸ್ಮ ರುದ್ರಾಕ್ಷಿ ಧರಿಸದೆ ನಾವೇ ಮೊದಲು ಧರಿಸಬಾರದೆಂಬ ಅಶುದ್ಧ ಭಾವನೆಯಿಂದ ಹಾಗೆಯೇ ಕರಡಿಗೆಯಿಂದ ಲಿಂಗಮೂರ್ತಿಯನ್ನು ತೆಗೆದು ಕೈಯಲ್ಲಿಟ್ಟುಕೊಂಡು ಶಿವಪೂಜೆಯನ್ನು ಮಾಡಲು ಆರಂಭ ಮಾಡುವರು. ಭಸ್ಮ ರುದ್ರಾಕ್ಷಿಗಳನ್ನು ಧಾರಣ ಮಾಡಿಕೊಳ್ಳದೆ, ಹೀಗೆ ಅಮಂಗಲದೇಹಿಗಳಾಗಿ, ಆ ಲಿಂಗಮೂರ್ತಿಯನ್ನು ಪೂಜಿಸುವದು ಬಹು ಅಯೋಗ್ಯಕರವಾದ ಕಾರ್ಯವಾಗಿರುತ್ತದೆ. ಈ ಪ್ರಕಾರವಾಗಿ ಶಿವಪೂಜೆಯನ್ನು ಮಾಡುವವರಿಗೆ "ಅಜಾಗಲಸ್ತನಸ್ಯೇವ ತಸ್ಯಜನ್ಮ ನಿರರ್ಥಕಂ" ಎಂಬಂತೆ ಯಾವ ಫಲವೂ ದೊರಕದಂತೆ ಆಡಿನ ಕೊರಳಲ್ಲಿ ಜೋತಾಡುವ ಎರಡು ಮೊಲೆ

ಗಳಂತೆ ಶಿವಪೂಜೆಯು ಫಲವು ನಿಷ್ಫಲವಾಗಿ, ಶಿವಪೂಜಕನ ಜನ್ಮವು ನಿರರ್ಥಕ ವಾಗುವದು. ಆದ್ದರಿಂದ ಶಿವಪೂಜಕನು ಮೊದಲು ತಾನು ಭಸ್ಮ ರುದ್ರಾಕ್ಷಿ ಗಳನ್ನು ಧರಿಸಿ ರುದ್ರನಾಗಿ ಅಂದರೆ ಶಿವನ ಸ್ವರೂಪಿಯಾಗಿ ಶಿವನನ್ನು (ರುದ್ರ ನನ್ನು) ಪೂಜಿಸಬೇಕೆಂದು ಶಂಕರ ಸಂಹಿತೆಯಲ್ಲಿ ಹೇಳಲಾಗಿದೆ.

## ಶಿವನ ಸ್ವರೂಪಿಯಾಗಿ ಶಿವನನ್ನು ಪೂಜಿಸಬೇಕು

ರುದ್ರೋ ಭೂತ್ವಾ ಯಜೇದ್ರುದ್ರಂ ನಾರುದ್ರೋ
ರುದ್ರಮರ್ಚಯೇತ್।
ಪ್ರಾಣಲಿಂಗಾಂಗ ಸಂಬಂಧಿ ಸರುದ್ರೋನಾತ್ರ ಸಂಶಯಃ॥

ಎಂಬಂತೆ ರುದ್ರನಾಗಿ ರುದ್ರನನ್ನು ಪೂಜಿಸಬೇಕು. ರುದ್ರನಾಗದೆ ರುದ್ರ ನನ್ನು ಪೂಜಿಸಬಾರದು. ರುದ್ರನಾಗಿ ರುದ್ರನನ್ನು ಪೂಜಿಸುವ, ಅಂದರೆ ಶಿವನ ಸ್ವರೂಪ ಧಾರಣ ಮಾಡಿ ಶಿವನನ್ನು ಪೂಜಿಸಿದರೆ ವೀರಶೈವನು ಸಾಕ್ಷಾತ್ ಶಿವನೇ ಆಗುತ್ತಾನೆಂದು ನಿಸ್ಸಂದೇಹವಾಗಿ ಧರ್ಮಶಾಸ್ತ್ರವು ಹೇಳುತ್ತದೆ.

## ಲಿಂಗದಡಿಯಲ್ಲಿ ಪತ್ರಿಯನ್ನಿಡಬಾರದು

ಮಮಾಸನಂ ಬಿಲ್ವಪತ್ರಂ ಮಾ ಕುರ್ವೀತ ಕದಾಚನ।
ಯದಿ ಮೋಹತ್ಸ್ಕರತೇ ಯೋऽಪಿ ಮದ್ದ್ರೋಹೀಸನ ಸಂಶಯಃ॥

ಹಲ ಕೆಲವರು ಲಿಂಗಪೂಜಾ ಸಮಯದಲ್ಲಿ ಹಸ್ತದಲ್ಲಿ ಒಂದು ಬಿಲ್ವಪತ್ರಿಯ ದಳವನ್ನು ಇಟ್ಟು ಅದರ ಮೇಲೆ ಲಿಂಗವನ್ನು ಇಟ್ಟು ಪೂಜೆ ಮಾಡುತ್ತಾರೆ. ಮತ್ತೆ ಕೆಲವರು ಬಿಲ್ವದಳವನ್ನು ಲಿಂಗದಡಿಯಲ್ಲಿಟ್ಟು ಕರಡಗಿಯಲ್ಲಿಟ್ಟುಕೊಳ್ಳು ವದು ಈ ಉಭಯ ಪದ್ಧತಿಗಳು ಯೋಗ್ಯವಾದವುಗಳಲ್ಲ ಅಂಗೈಯಲ್ಲಿ ಪ್ರಣಮಾಕ್ಷರವನ್ನು ಬರೆದು ಲಿಂಗಮೂರ್ತಿಯನ್ನಿಟ್ಟು ಪೂಜಿಸಬೇಕು. ಬಿಲ್ವ ಪತ್ರವನ್ನು ಎಂದೂ ಆಸನವನ್ನಾಗಿ ಮಾಡಬಾರದೆಂದೂ ಒಂದು ವೇಳೆ ಅಜ್ಞಾನ ದಿಂದ ಮಾಡಿದರೂ ಮರೆವೆಯಾದರೂ ಅದು ಶಿವದ್ರೋಹವಾಗುವದು. ಕಾರಣ ಈ ಪದ್ಧತಿಯನ್ನು ಬಿಡಬೇಕೆಂದು ಶಿವಲಿಂಗಾರ್ಚನಾ ತಂತ್ರದಲ್ಲಿ ಹೇಳಲಾಗಿದೆ.

## ಗಂಧಾಕ್ಷತೆ ಪತ್ರ-ಪುಷ್ಪಗಳನ್ನು ಧರಿಸುವ ಕ್ರಮ.

ಮಧ್ಯಮಾ ನಾಮಿಕಾ ಮಧ್ಯೇ ಪುಷ್ಪಂ ಸಂಗೃಹ್ಯ ಪೂಜಯೇತ್ ।
ಅಂಗುಷ್ಟ ತರ್ಜನ್ಯ ಗ್ರಾಭ್ಯಾಂ ನಿರ್ಮಲ್ಯಮಪ ನೋದಯೇತ್ ॥

ಎಂಬ ಕ್ರಿಯಾಸಾರ ಗ್ರಂಥೋಕ್ತಿಯಂತೆ ಕೇವಲ ಗಂಧಾಕ್ಷತೆಗಳನ್ನು ಅನಾಮಿಕ ಬೆರಳಿನಿಂದ ಧರಿಸಬೇಕು. ಪತ್ರ-ಪುಷ್ಪಗಳನ್ನು ಮಧ್ಯಮ-ಅನಾಮಿಕ ಬೆರಳುಗಳಿಂದಹಿಡಿದು ಧರಿಸಬೇಕು ಕೊನೆಗೆ ಅಂಗುಷ್ಠ ತರ್ಜನೀ ಬೆರಳುಗಳಿಂದ ಹಿಡಿದು ನಿರ್ಮಾಲ್ಯವನ್ನು ತೆಗೆದುಹಾಕಬೇಕು.

ಪುಷ್ಪ ಮೂರ್ಧ್ವಮುಖಂ ಯೋಜ್ಯಂ ಪತ್ರಂ ಯೋಜ್ಯಂ ।
ತ್ವದೋ ಮುಖಂ । ಫಲಂತು ಸಂಮುಖಂ ಯೋಜ್ಯಂ ಯಥೋತ್ಪನ್ನಂ
ತಥಾಽರ್ಪಯೇತ್ ॥
( ಉಕ್ತಂಚ ಸ್ಕಂದ ಪುರಾಣಂ )

ಎಂಬಂತೆ ಪುಷ್ಪ(ಹೂವು)ಗಳನ್ನು ಮೇಲು ಮುಖವಾಗಿಯೂ, ಪತ್ರಿಯನ್ನು ಕೆಳಮುಖವಾಗಿಯೂ, ಹಣ್ಣುಗಳನ್ನು ಇದಿರ್ಮುಖವಾಗಿಯೂ ಅರ್ಪಿಸಬೇಕೆಂದು ಸ್ಕಂದ ಪುರಾಣದಲ್ಲಿ ಹೇಳಿದಹಾಗೆ ಧರಿಸಬೇಕು.

ಏಕ ಮನಸ್ಸಿನಿಂದ ಜಪವನ್ನು ಮಾಡಬೇಕು. ತದನಂತರ ಧೂಪ-ದೀಪ ನೈವೇದ್ಯ-ತಾಂಬೂಲ-ಪ್ರದಕ್ಷಿಣೆ ನಮಸ್ಕಾರಾದಿಗಳಿಂದ ಪೂಜಿಸಿ, ಪುಷ್ಪಾಂಜಲಿಯನ್ನು ಮಾಡಿ ಒಂದೇ ಒಂದು ಮನಸ್ಸಿನಿಂದ, ತನ್ನ ಕಣ್ಣುಗಳ ಸಮರೇಖೆಯಲ್ಲಿ ಅಂದರೆ ತನ್ನ ಎದುರಿನ ಸಮನೋಟದ ಸಮಾನವಾಗಿ ಲಿಂಗದ ಎಡಗೈಯನ್ನು ಎತ್ತಿಕೊಂಡು ಕಣ್ಣುಗಳಿಂದ ಹನ್ನೆರಡು ಅಂಗುಲ ಪ್ರಮಾಣ ದೂರದಲ್ಲಿ ಹಿಡಕೊಂಡು ರೆಪ್ಪೆಯನ್ನು ಬಡೆಯದಂತೆ, ಪಿಳಕಿಸದಂತೆ ಲಿಂಗಮೂರ್ತಿಯಲ್ಲಿ ಅಚಲವಾದ-ಸ್ಥಿರವಾದ ದೃಷ್ಟಿಯನ್ನಿಟ್ಟು, ಶ್ರೀ ಗುರುವಿನಿಂದುಪದೇಶ ಹೊಂದಿದ ಶಿವ ಪಂಚಾಕ್ಷರೀ ಮಂತ್ರವನ್ನು ಒಂದುನೂರಾ ಎಂಟು ಸಾರೆ ಅಥವಾ ಸಾಧ್ಯವಾದರೆ ಒಂದುಸಾವಿರ ಸಾರೆ ಜಪಿಸಬೇಕು.

ಶಿವಲಿಂಗೇ ಮಗ್ನದೃಷ್ಟಿಂ ಶಿವಯೋಗಾತ್ತ ಮಾನಸಂ ।
ಶಿವಮಂತ್ರ ಸ್ಥಿತಿಕೃತಂ ಶಿವಜ್ಞಾನೀ ನವಾಚಯೇತ್ ॥
ಜಪಕಾಲೇಚ ಜಪಿನಂಯೋ ವಾಚಯತಿ ಮೋಹತಃ ।
ನತಸ್ಯ ನಿಷ್ಕೃತಿಃ ಶಕ್ಯಾಕರ್ತುಂ ವರ್ಷ ಶತೈರಪಿ ॥

ಎಂಬಂತೆ ಶಿವಲಿಂಗದಲ್ಲಿ ದೃಷ್ಟಿಯನ್ನಿಟ್ಟಂಥ, ಶಿವಯೋಗದಲ್ಲಿ ಮನಸ್ಸನ್ನು ಸ್ಥಿರಗೊಳಿಸಿದಂಥ ಹಾಗೂ ಶಿವಮಂತ್ರವನ್ನು ಜಪಿಸುತ್ತಿರುವಂಥ ವ್ಯಕ್ತಿಯನ್ನು ಮಾತಾಡಿಸಬಾರದು. ಒಂದು ವೇಳೆ ಅಜ್ಞಾನ ವಶದಿಂದ ಮಾತಾಡಿಸಿದರೆ ಅಂಥವನಿಗೆ ನೂರು ವರ್ಷಗಳಾದರೂ ಪ್ರಾಯಶ್ಚಿತ್ತವು ದೊರೆಯಲಾರವೆಂದು ಧರ್ಮಶಾಸ್ತ್ರವು ಹೇಳುವ ಕಾರಣ ಮಂತ್ರ ಜಪದ ಕಾಲದಲ್ಲಿ ಮಾತಾಡಿಸಬಾರದು.

# ಮಂತ್ರ ಜಪ ಮಾಡುವ ಕ್ರಮ- ವಿಚಾರ

ಮಂತ್ರ ಜಪ ಮಾಡಲಿಕ್ಕೆ ೧೦೮ ರ ರುದ್ರಾಕ್ಷ ಮಾಲೆಯೇ ಉತ್ತಮವಾದ ದ್ದೆಂದು ಹಿಂದೆ ರುದ್ರಾಕ್ಷ ಧಾರಣ ಕ್ರಮದಲ್ಲಿ ಹೇಳಲಾಗಿದೆ. ಅದರಂತೆ ಜಪ ಮಾಲೆಯಿಂದ ಜಪವನ್ನು ಆದಿಯಲ್ಲಿ ಶ್ರೀ ಗುರುವಿನ ಮುಖಾಂತರ ತಿಳಕೊಂಡು ಕ್ರಮವರಿತು ಮಾಡಬೇಕು. ಒಂದು ವೇಳೆ ಜಪಮಾಲಿಕೆಯಿಂದ ನಿತ್ಯದಲ್ಲಿ ಸಾಧ್ಯವಾಗದಿದ್ದರೆ ಅಂಗುಲಿರೇಖಾ ಜಪವನ್ನು ಅಂದರೆ ಮಧ್ಯ ಅಥವಾ ಅನಾ ಮಿಕ ಬೆರಳಿನ ನಡುವಿನ ರೇಖೆಯನ್ನು ಕೇಂದ್ರವಾಗಿಟ್ಟುಕೊಂಡು ಜಪಮಾಡಿ ಜಪಸಂಖ್ಯೆ ಪೂರ್ತಿಗೊಳಿಸಲು ಅಡ್ಡಿಯಿಲ್ಲ. ಸಾಧ್ಯವಾದಂತೆ ಮಾಡಬೇಕು. ಈ ಉಭಯ ಪದ್ಧತಿಗಳೂ ಶ್ರೇಷ್ಠವಾದವುಗಳು ಇರುತ್ತವೆ.

ಶಿವಪೂಜಕನು ಲಿಂಗಾರ್ಚನೆಯ ಆರಂಭದಲ್ಲಿಯೇ ಋಷಿ ದೇವತಾ ಛಂದಸ್ಸು ಬೀಜ-ಶಕ್ತಿ-ಕೀಲಕಾದಿಗಳನ್ನೂ ಹಾಗೂ ಕರನ್ಯಾಸ-ದೇಹನ್ಯಾಸ ಅಂಗನ್ಯಾಸಾದಿಗಳನ್ನೂ ತಿಳಿದುಕೊಂಡು ಜಪಿಸಬೇಕು. ಆಶ್ರಮದ ಅನುಸಾ ರವಾಗಿ ನ್ಯಾಸಾದಿ ಕ್ರಮಗಳು ಬೇರೆ ಬೇರೆಯಾಗಿರುವವಲ್ಲದೆ ಎಲ್ಲ ಆಶ್ರಮಗಳಿಗೆ ಒಂದೇ ಕ್ರಮವಾಗಿರುವದಿಲ್ಲ ಇವುಗಳ ಭೇದವನ್ನು ಮುಂದೆ ಶಿವಪೂಜಾ ಪ್ರಕ ರಣದಲ್ಲಿ ಮಾಡಲಾಗಿದೆ ನೋಡಿಕೊಳ್ಳಬೇಕು.

# ಜಪಲಕ್ಷಣದ ಭೇದ ಹಾಗೂ ಫಲ ವಿಚಾರ

ಶಿವಪೂಜಕನು ಜಪದ ಲಕ್ಷಣ ಹಾಗೂ ಅವುಗಳ ಭೇದವನ್ನು ತಿಳಿದು ಕ್ರಮವರಿತು ಜಪಸಂಖ್ಯಾ ನಿಶ್ಚಯಮಾಡಿಕೊಂಡು ಜಪಮಾಡೇಕು. ಹೀಗಿಲ್ಲ ದಿದ್ದರೆ ಸಂಖ್ಯಾಹೀನನಾಗಿ ಮತ್ತು ಗೊತ್ತು ಗುರಿಯಿಲ್ಲದೆ ಮಾಡಿದ ಜಪದಿಂದ ಯಾವ ಫಲ ಸಿದ್ಧಿಯಾಗಲಾರದೆಂದೂ, ಅದು ರಾಕ್ಷಸರಿಗೆ ಲಭಿಸುವವದೆಂದೂ ''ವೀರಶೈವ ಕೌಸ್ತುಭ ಗ್ರಂಥ''ದಲ್ಲಿ ಹೇಳಲಾಗಿದೆ.

ಜಪವು, ವಾಚಕ-ಉಪಾಂಶು-ಮಾನಸವೆಂದು ಮೂರು ಪ್ರಕಾರವಾಗಿದೆ. ೧) ತನ್ನ ಸಮೀಪವಿದ್ದ ಜನಗಳಿಗಷ್ಟೇ ಕೇಳುವಂತೆ ಜಪಿಸುವದಕ್ಕೆ "ವಾಚಕ" ಜಪವೆಂದು ಹೇಳುತ್ತಾರೆ. ಇದು ಕನಿಷ್ಟ ಫಲಕಾರಿಯಾದುದು.

೨) ಸಮೀಪಿದ್ದ ಜನರಿಗೂ ಕೇಳಿಸದಂತೆ ಕೇವಲ ತುಟಿಯನ್ನು ಅಲ್ಲಾಡಿ ಸುತ್ತ ಮಂತ್ರೋಚ್ಚಾರಣ ಮಾಡಿ ಜಪಿಸುವದೇ"ಉಪಾಂಶು"ಜಪವೆಂದು ಹೇಳ ಲ್ಪಡುತ್ತದೆ. ಇದು ಮಧ್ಯಮ ಫಲಕಾರಿಯಾದುದು.

೩) ತುಟಿಗಳನ್ನೂ ಸಹ ಅಲ್ಲಾಡಿ ನಾಲಿಗೆಯ ತುದಿಯೂ ಅಗಲಾ ಡದಂತೆ ಕೇವಲ ಮನಸ್ಸಿನಲ್ಲಿಯೇ ಜಪಿಸುವದೇ"ಮಾನಸ"ಜಪವೆಂದು ಹೇಳಲ್ಪ ಡುತ್ತದೆ. ಇದು ಅತ್ಯುತ್ತಮ ಫಲಕಾರಿಯಾದ್ದುದು.

ಈ ಪ್ರಕಾರವಾಗಿ ಶಿವಾಗಮ ಗ್ರಂಥಗಳು ಸಕ್ರಮವಾಗಿ ಜಪಿಸಬೇಕೆಂದು ಹೇಳುವ ಸಮಯದಲ್ಲಿ ಬಹುಸಂಖ್ಯಾಕರು ಆಗಮಗಳ ಮೇರೆಯನ್ನು ಮೀರಿ ಮನಸ್ಸಿಗೆ ಬಂದಂತೆ ಮಂತ್ರ ಜಪವನ್ನು ಮಾಡುತ್ತಾರೆ. ಮಂತ್ರಜಪವನ್ನು "ಧ್ವನಿವಾಹಕ ಯಂತ್ರದಂತೆ" ಮಾಡಬಾರದೆಂದು ಪ್ರಮಾಣವಧೆ.

ಗುರುಸ್ತಂತ್ರಶ್ಚ ಮಂತ್ರಶ್ಚ ಗೋಪನೀಯಃ ಪ್ರಯತ್ನತಃ ।
ಪ್ರಕಾಶಾತ್ ಶಿದ್ಧಿ ಹಾನಿಃ ಸ್ಯಾದಿತ್ಯಾಹ ಭಾಗವಾನ್ ಶಿವಃ ॥

ಎಂಬ ಪ್ರಮಾಣದಂತೆ ಗುರುವನ್ನೂ, ತಂತ್ರವನ್ನೂ, ಮಂತ್ರವನ್ನೂ, ಆದಷ್ಟು ಗುಪ್ತವಾಗಿರಿಸಬೇಕು. ಒಂದು ವೇಳೆ ಅವನ್ನು ಪ್ರಕಾಶ ಮಾಡಿದರೆ ಬಯಲಿಗೆ ಮನಬಂದಂತೆ ಅನ್ಯರು ಕೇಳುವಂತೆ ಮಾಡಿದರೆ ಫಲಸಿದ್ಧಿಯಾಗಲಾರದು. ಆದ ಕಾರಣ ಮಂತ್ರವನ್ನು ಪ್ರಕಾಶವಾಗಿ ಉಚ್ಚರಿಸದೆ ಮನಸ್ಸಿನಲ್ಲಿಯೇ ಜಪಿಸುವದು ಸದ್ಗತಿಗೆ ಕಾರಣವಾಗಿದೆ. ಜಪಿಸುವ ಕಾಲಕ್ಕೆ ಆಕಳಿಸುವಿಕೆ, ಸೀನುವಿಕೆ ಕ್ಯಾಕರಿಸುವಿಕೆ, ಸಿಟ್ಟು, ಗರ್ವ, ವ್ಯವಹಾರಿಕ ಲೆಕ್ಕ ಇತ್ಯಾದಿಗಳನ್ನು ಬಿಟ್ಟು ಏಕಚಿತ್ತವಾಗಿ ಜಪಿಸಬೇಕು. ಹಾಗೂ ಬೆಕ್ಕು, ನಾಯಿ ಮೊದಲಾದ ದುಷ್ಟ ಪ್ರಾಣಿಗಳನ್ನೂ, ಅಧಮರನ್ನೂ, ಆಚಾರಹೀನರನ್ನೂ, ಅಂತ್ಯಜರನ್ನೂ ಲಿಂಗವಿಲ್ಲದ ಭವಿಗಳನ್ನೂ ನೋಡಬಾರದು. ಒಂದು ವೇಳೆ ನೋಡಿದರೆ ಆಚಮನವನ್ನು ಮಾಡಿ ಸರ್ವೋತ್ಕೃಷ್ಟವಾದ ಪಂಚಾಕ್ಷರೀ ಮಂತ್ರವನ್ನು ಜಪಿಸಬೇಕು.

## ಲಿಂಪಪೂಜೆಯ-ಸಮಾಪ್ತಿ-ಕ್ರಮ-ವಿಚಾರ.

ಪರಮಪಾವನವಾದ ಶಿವಪಂಚಾಕ್ಷರೀ ಮಂತ್ರದ ಜಪವು ಮುಗಿದ ನಂತರ ಲಿಂಗದ ಮಸ್ತಕದ ಮೇಲಿರುವ ಪತ್ರ ಪುಷ್ಪಗಳನ್ನು ಮಜ್ಜನ ಪಾತ್ರೆಯಲ್ಲಿ ಹಾಕಿ ಶಂಭು ಪಾದೋದಕವನ್ನು ಸ್ವೀಕರಿಸಿ ಸಂಕ್ಷಿಪ್ತವಾಗಿ ಮತ್ತೆ ಪೂಜೆ ಮಾಡಿ, ಮಡಿ ಮಾಡಿದ ಉದಕದ ಪಾವಡದಲ್ಲಿ ಲಿಂಗಮೂರ್ತಿಯನ್ನಿಟ್ಟು ಪತ್ರ ಪುಷ್ಪ ಸಹಿತವಾಗಿ ಕರಡಿಗೆಯಲ್ಲಿಟ್ಟುಕೊಳ್ಳಬೇಕು. ಪುನಃ ಕೈಗಳಿಗೆ ಭಸ್ಮವನ್ನು ಲೇಪಿಸಿಕೊಂಡು ಮಂತ್ರಗಳ ಲೋಪಾದಿ ಪ್ರಾಯಶ್ಚಿತ್ತಕ್ಕಾಗಿ ಹನ್ನೊಂದು ಸಾರೆ ಮೂಲ ಮಂತ್ರವನ್ನು ಜಪಿಸಬೇಕು. ತದನಂತರ ಬಲಗೈಯಲ್ಲಿ ಪತ್ರ ಪುಷ್ಪ ಗಂಧಾಕ್ಷತೆಗಳನ್ನು ಹಾಕಿಕೊಂಡು "ಪೂಜನಮಿದಂ ಶಿವಾರ್ಪಣಂ ಭೂಯಾತ್" ಎಂದು ಕಿರುಬೆರಳಿನ ಮುಖಾಂತರವಾಗಿ ನೀರನ್ನು ಬಿಡಬೇಕು. ಅಂದರೆ ಕೊನೆಗೆ "ತರ್ಪಣ"ಕೊಟ್ಟಂತಾಗುವದು.

ಇನ್ನು ಹಲಕೆಲವರು ಭಕ್ತಿಯಿಲ್ಲದೆ ಮನಸ್ಸಿಗೆ ಬಂದಂತೆ ಕಂಡ ಕಂಡಲ್ಲಿ ಅವನಿಗೆ ಧರಿಸಿದ ಪತ್ರ-ಪುಷ್ಪಾದಿಗಳನ್ನು (ನಿರ್ಮಾಲ್ಯವನ್ನು)ಚಲ್ಲುತ್ತಾರೆ. ಇದು

ಮಹಾದ್ರೋಹವೆನ್ನಿಸುವದು. ಮತ್ತೆ ಕೆಲವರು ಬಚ್ಚಲದಲ್ಲಿ ಚಲ್ಲುತ್ತಾರೆ. ಇದೂ ಅಯೋಗ್ಯವಾದುದು. ಆದರೆ ಶಿವನಷ್ಟೇ ಪೂಜ್ಯತ್ವವು ನಿರ್ಮಾಲ್ಯದಲ್ಲಿರುವದು. ಆದ ಕಾರಣ ನಿರ್ಮಾಲ್ಯವನ್ನು ಮಜ್ಜನ ಪಾತ್ರೆಯಲ್ಲಿ ಹಾಕಿ ಅದನ್ನು ಹೂವಿನ ಗಿಡಗಳಲ್ಲಾಗಲೀ ಅಥವಾ ಒಂದು ತಗ್ಗು ಗೊತ್ತುಮಾಡಿ ಅದರಲ್ಲಾಗಲೀ ಹಾಕ ಬೇಕು ನಿರ್ಮಾಲ್ಯವನ್ನು ಅಲಕ್ಷ ಮಾಡಿದ ಇಂದ್ರನಿಗೆ-ದೂರ್ವಾಸ ಋಷಿಯು ಕೊಟ್ಟ ಶಾಪದಿಂದ ಘಟಿಸಿದ ಹೀನಾವಸ್ಥೆಯನ್ನೂ ಹಾಗೂ ಅನೇಕ ತಪಸ್ಸುಗ ಳನ್ನು ಮಾಡಿ ಸಿದ್ಧಿ ಪಡೆದುಕೊಂಡ ಪುಷ್ಪದಂತನು ಶಿವ ನಿರ್ಮಾಲ್ಯವನ್ನು ದಾಟಿದ ಮೂಲಕ ಆ ಸಿದ್ಧಿಗಳನ್ನೆಲ್ಲ ಕಳೆದುಕೊಂಡ ಸ್ಥಿತಿಯನ್ನು ನೆನಪಿಗೆ ತಂದು ಕೊಂಡು ಆಚರಿಸುವದುತ್ತಮವು.

## ಶಿವಾರ್ಪಿತ ನಿರ್ಮಾಲ್ಯವು-ನಿಷಿದ್ಧವಲ್ಲ

ಅಭಿಷೇಕ ಪಾತ್ರೆಯನ್ನಾಗಲೀ, ಅಥವಾ ಮಜ್ಜನಸಾಲೆಯಲ್ಲಾಗಲೀ ಇಲ್ಲವೆ ನಿರ್ಮಾಲ್ಯವನ್ನಾಗಲೀ ಮುಟ್ಟಿದಕೂಡಲೇ ಕೈ ತೊಳೆದುಕೊಳ್ಳುವ ರೂಢಿಯಿರುವದರಿಂದ, ನಿರ್ಮಾಲ್ಯವು ನಿಷಿದ್ಧವೆಂದು ಅನೇಕ ಜನರ ಮನಸ್ಸಿ ನಲ್ಲಿ ಬೇರೂರಿದ ವಿಷಯವಾಗಿದೆ. ಇದು ಕೇವಲ ತಪ್ಪು ತಿಳಿವಳಿಕೆಯ ವಿಷ ಯವಾಗಿದೆ. ಆದರೆ ಶಿವನಿರ್ಮಾಲ್ಯವು ಅರ್ಪಿತವಸ್ತುವಾಗಿದ್ದರಿಂದ ಅದನ್ನು ಮುಟ್ಟಿ, ಶಿವನಿಗೆ ಅರ್ಪಿತವಾಗದಿದ್ದ ವಸ್ತುವನ್ನು ಮುಟ್ಟುವದರಿಂದ ಅರ್ಪಿತ— ಅನರ್ಪಿತ ವಸ್ತುಗಳೆಲ್ಲವೂ ಒಂದೇಯಾಗುತ್ತವೆ. ಅನರ್ಪಿತ ವಸ್ತುಗಳು ಶಿವನಿಗೆ ಅರ್ಪಿಸಲಿಕ್ಕೆ ಬರುವದಿಲ್ಲ ಮಾತ್ರ ಅರ್ಪಿತ ವಸ್ತುಗಳನ್ನು ಮುಟ್ಟಿ ಅನರ್ಪಿತ ವಸ್ತುಗಳನ್ನು ಮುಟ್ಟಬಾರದೆಂಬ ಕಾರಣದಿಂದಲೇ ಕೈಯನ್ನು ತೊಳೆದುಕೊಳ್ಳುವ ದಲ್ಲದೆ ಬೇರೊಂದು ಯಾವ ಕಾರಣವಿಲ್ಲೆಂದು ತಿಳಿಯಬೇಕು. ನಿಜವಾದ ವಸ್ತು ಸ್ಥಿತಿ ಹೀಗಿದ್ದಾಗ್ಗೆ ನಿರ್ಮಾಲ್ಯವು ನಿಷಿದ್ಧವಲ್ಲೆಂದು ಆಳವಾಗಿ ಅರಿತು ಕೊಂಡು ಆಚರಿಸಬೇಕು.

## ಊಟಮಾಡುವಿಕೆ-ನೀರು ಕುಡಿಯುವಿಕೆಯ-ವಿಚಾರ.

ರುದ್ರೇಣಾತ್ತ ಮಶ್ನಂತಿ ರುದ್ರೇಣ ಪೀತಂ ಪಿಬಂತಿ ।
ರುದ್ರೇಣಾ ಘ್ರಾತಂ ಜಿಘ್ರಂತಿ ತಸ್ಮಾದ್ಬ್ರಾಹ್ಮಣಾಃ ।
ಪ್ರಶಾಂತ ಮನಸೋ ವಿದ್ವಾಂಸೋ ನಿರ್ಮಾಲ್ಯಮೇವ ಭಕ್ಷಯಂತಿ ॥
(ಜಾಬಾಲ ಶ್ರುತಿ)

ಶಿವಪೂಜಕನು ತನ್ನ ಶಿವಲಿಂಗಪೂಜೆಯನ್ನು ಸಮಾಪ್ತಿಗೊಳಿಸಿದ ನಂತರ ತಾನು ಊಟ ಮಾಡತಕ್ಕ ಯಾವತ್ತೂ ಪದಾರ್ಥಗಳನ್ನು (ಊಟದ) ಮೊಟ್ಟ ಮೊದಲೇ ನೀಡಿಸಿಕೊಂಡು ಶಿವಲಿಂಗಕ್ಕೆ ನೈವೇದ್ಯ ಮಾಡಿ ಜಲವನ್ನು ಸಮರ್ಪಿಸಿ ಊಟ ಮಾಡಬೇಕು. ಶಿವನಿಗೆ ಅರ್ಪಿತವಾದದ್ದನ್ನೇ ವೀರಶೈವನು ಉಣ್ಣಬೇಕು ಕುಡಿಯಬೇಕು. ಮೂಸಿನೋಡಬೇಕು ಎಂದು ಶೃತಿಯ ವಚನವದೆ. ಆದ್ದರಿಂದ ಶಾಂತ ಮನಸುಳ್ಳವನಾಗಿ ವೀರಶೈವನು ತನ್ನ ಶಿವಲಿಂಗಕ್ಕೆ ಅರ್ಪಿತ ಪದಾರ್ಥಗಳನ್ನೇ ಸೇವಿಸಬೇಕು. ಇಲ್ಲವಾದರೆ ಅದು ದುರ್ಗತಿಗೆ ಸಾಧನವಾಗಿದೆ ವಸ್ತು ಸ್ಥಿತಿ ಹೇಗಿದ್ದರೂ ಆಧುನಿಕ ಕಾಲದಲ್ಲಿ ಅನೇಕರು ನೈವೇದ್ಯವನ್ನು ಮಾಡದೇ ಊಟ ಮಾಡುತ್ತಾರೆ. ಹೀಗೆ ಊಟ ಮಾಡಿದರೆ ಕ್ರಿಮಿ ಕೀಟಕಾದಿಗಳನ್ನು ಭೊಜನ ಮಾಡಿದಂತಾಗುತ್ತದೆಂದು ''ಕಾರ ಶ್ರುತಿಯು'' ವಚನವದೆ. ಆದ್ದರಿಂದ ಪ್ರತಿಯೊಬ್ಬ ವೀರಶೈವನು ಶಿವಾರ್ಪಿತ ಪದಾರ್ಥಗಳನ್ನೇ ಸದಾ ಊಟ ಮಾಡಿ ಸದ್ಗತಿಗೆ ಕಾರಣನಾಗಬೇಕು. ಹೆಣ್ಣುಮಕ್ಕಳೂ ಸಹ ಇದರಂತೆ ಆಚರಿಸಬೇಕು. ಅತ್ತೆ ಮಾವಂದಿರು ಹಾಗೂ ಪತಿದೇವನು ಊಟ ಮಾಡುವ ಮೊದಲು ಎಂದೂ ಮಾಡದೆ ಅವರಿಗೂ ಅತಿಥಿಗಳು ಬಂದಿದ್ದರೆ ಅವರಿಗೂ ನೀಡಿ ತೃಪ್ತಿಪಡಿಸಿ, ತದನಂತರ ತಾವು ತಮ್ಮ ಇಷ್ಟಲಿಂಗಕ್ಕೆ ಅರ್ಪಿಸಿ ಊಟ ಮಾಡಬೇಕು.

## ನೀರು ಕುಡಿಯುವಿಕೆಯ ವಿಚಾರ.

ಅದ್ಧೃತ್ಯ ವಾಮಹಸ್ತೇನ ಯತ್ತೋಯಂ ಪಿಬತಿದ್ವಿಜಃ ।
ಸುರಾಪಾನೇನ ತತ್ತುಲ್ಯಂ ಮನುರಾಹ ಪ್ರಜಾಪತಿಃ ॥

ಎಂಬಂತೆ ಊಟವಾದ ಕೂಡಲೆ ಅಥವಾ ಊಟ ಮಾಡುವ ಸಮಯದಲ್ಲಿ ಯಾವದೇ ಪ್ರಸಂಗದಲ್ಲಾದರೂ ಎಡಗೈಯನ್ನೆತ್ತರಿಸಿ ನೀರು ಕುಡಿಯಬಾರದು. ಹೀಗೆ ಕುಡಿದರೆ ಅದುಸುರಾಪಾನ ಮಾಡಿದಂತೆ ಆಗುವದೆಂದು ಧರ್ಮಶಾಸ್ತ್ರವದೆ. ಆದ ಕಾರಣ ಥಾಲಿಯಲ್ಲಿ ತಂಬಿಗೆಯಿಂದ ನೀರನ್ನುಹಾಕಿಕೊಂಡು ಬಲಗೈಯಿಂದ ಕುಡಿಯಬೇಕು. ಕೊನೆಗೆ ಆಥಾಲಿಯನ್ನು ಗಂಗಾಳದಲ್ಲಿಟ್ಟು ಕೈ ತೊಳೆದುಕೊಳ್ಳಬೇಕು. ತದನಂತರ ಎಲ್ಲವನ್ನೂ ಬೆಳಗಿ ಶುದ್ಧ ಮಾಡಬೇಕು.

## ತಾಂಬೂಲ ಸ್ವೀಕೃತ ಕ್ರಮ ವಿಚಾರ.

ಪರ್ಣಮೂಲೇ ಭವೇದ್ವ್ಯಾಧಿಃ ಪರ್ಣಾಗ್ರೇಚಾದಿ ಸಂಭವಃ ।
ಚೂರ್ಣಂ ಪರ್ಣಂ ಹರತ್ಯಾಯುಃ ಶಿರಾ ಬುದ್ಧಿ ವಿನಾಶಿನೀ ।
ತಸ್ಮಾದ ಗ್ರಂಚ ಮೂಲಂಚ ಶಿರಾ ಜ್ಜೈವ ವಿಶೇಷತಃ ।

ಚೂರ್ಣಂ ಪರ್ಣಂ ವರ್ಜಯಿತ್ವಾ ತಾಂಬೂಲಂ ಖಾದಯೇನ್ನರಃ ||
ಅಖಂಡಿತಂಚ ಕಮುಕಂ ಪರ್ಣಮಕ್ಷಾಲಿತಂ ತಥಾ |
ಅಶೋಧಿತಂ ತಥಾ ಚೂಣಂ ಭಕ್ಷಯನ್ ಸರ್ವ ದೋಷ ಭಾಕ್ ||
ಅನಿಧಾಯ ಮುಖೇ ಪರ್ಣಂ ಪೂಗಾನ್ ಖಾದತಿ-ಯೋ ನಃ |
ಸಪ್ತ ಜನ್ಮ ದ್ರರಿದ್ರಃ ಸ್ಯಾನ್ನರಕೇಷು ನಿಮಜ್ಜತಿ ||
ಚೂರ್ಣಮಂತರ್ನಕುರ್ವೀತ ನಬಹಿಶ್ಚಾವ ಕುಠನಂ |
ಪ್ರಾತಃಕಾಲೇ ಫಲಾಧಿಕ್ಯಂ ಚೂರ್ಣಂ ಮಧ್ಯಂದಿನೇಽಧಿಕಂ ||
ಸಾಯಂ ಪರ್ಣಸ್ಯಚಾಧಿಕ್ಯಂ ಕ್ರಿದಾ ತಾಂಬೂಲ ಭಕ್ಷಣಂ ||
(ಸ್ಮೃತಿಮುಕ್ತ ಫಲಗ್ರಂಥ)

ಊಟವಾದ ಮೇಲೆ ತಾಂಬೂಲವನ್ನು ಸೇವಿಸಬೇಕು. ತಾಂಬೂಲವನ್ನು ಪದ್ಧತಿಯ ಪ್ರಕಾರವಾಗಿ ಸೇವಿಸಬೇಕಲ್ಲದೆ ಅಕ್ರಮವಾಗಿ ಸೇವಿಸಿದರೆ ಅದರಿಂದ ಬಹು ಅನರ್ಥಗಳು ಉಂಟಾಗುತ್ತವೆ.

ಎಲೆಯ ತುಂಬು ಹಾಗೂ ತುದಿಯು ರೋಗವನ್ನುಂಟುಮಾಡುವದೆಂದೂ ಕೇವಲ ಸುಣ್ಣದ ಎಲೆಯು ಆಯುಷ್ಯವನ್ನು ವಿನಾಶಗೊಳಿಸುವದೆಂದೂ ಎಲೆಯ ಮೇಲಿದ್ದ ಕಡ್ಡಿಯಂತೆ ಇರುವ ನಾಡಿಯೆಂಬ ಕಸರು ಬುದ್ಧಿಯನ್ನು ಭ್ರಷ್ಟ ಮಾಡುತ್ತದೆಂದೂ, ಮೇಲಿನ ವಚನದಿಂದ ತಿಳಿಯುತ್ತದೆ. ಆದ ಕಾರಣ ಇವೆಲ್ಲವುಗಳನ್ನು ತೆಗೆದುಹಾಕಿ ತಾಂಬೂವನ್ನು ಸೇವಿಸಬೇಕು. ಮತ್ತು ಒಡೆಯದಿದ್ದ ಅಡಿಕೆ ಸ್ವಚ್ಛವಾಗಿ ತೊಳೆಯದೇ ಇದ್ದ ಎಲೆ ಶೋಧಿಸದಿದ್ದ ಸುಣ್ಣವನ್ನು ಹಾಕಿಕೊಳ್ಳಬಾರದು. ಎಲೆ ಇಲ್ಲದೆ ಕೇವಲ ಅಡಿಕೆಯನ್ನು ತಿನ್ನಬಾರದು. (ಕೇವಲ ಅಡಿಕೆಯನ್ನು ತಿನ್ನುವದು ಆರೋಗ್ಯ ದೃಷ್ಟಿಯಿಂದ ಹಾನಿಕರವಾಗಿರುತ್ತದೆ. ಪುರುಷನ ವೀರ್ಯವು ನೀರಾಗುವದೆಂದೂ, ಹಾಗೂ ಸ್ತ್ರೀಯಳ ರೇತಸ್ಸು ನಾಶವಾಗುವದೆಂದೂ ಆರೋಗ್ಯವಿಜ್ಞಾನಿಗಳು ಹೇಳುತ್ತಾರೆ. ಆದ್ದರಿಂದ ಧಾರ್ಮಿಕರೂ ಸಹ ಒಂದು ಕಟ್ಟಪ್ಪಣೆ ಮಾಡಿದ್ದಾರೆ.) ಕೇವಲ ಅಡಿಕೆಯನ್ನು ತಿಂದರೆ ಸಪ್ತ ಜನ್ಮಗಳಲ್ಲಿ ದರಿದ್ರನಾಗಿ ಜನಿಸುವನೆಂದು ಹೇಳಲಾಗುತ್ತದೆ. ಸುಣ್ಣವನ್ನು ಎಲೆಯ ಒಳಭಾಗದಲ್ಲಿ ಹಚ್ಚದೆ ಹೊರಭಾಗದಲ್ಲಿ ಹಚ್ಚಬೇಕು- ಬೆಳಿಗ್ಗೆ ಅಡಿಕೆಯನ್ನೂ, ಮಧ್ಯಾಹ್ನಕ್ಕೆ ಸುಣ್ಣವನ್ನೂ, ರಾತ್ರಿಯಲ್ಲಿ ಎಲೆಯನ್ನೂ ಹೆಚ್ಚು ಹಾಕಬೇಕೆಂದು ಸ್ಮೃತಿ ಗ್ರಂಥಗಳು ಹೇಳುತ್ತವೆ. ಆದ ಕಾರಣ ಈ ಪ್ರಕಾರವಾಗಿ ತಾಂಬೂಲವನ್ನು ಸೇವಿಸಬೇಕು.

## ಯಾವ ಬೆರಳಿನಿಂದ ಸುಣ್ಣವನ್ನು ಹಚ್ಚಬೇಕು

''ತರ್ಜನ್ಯಾ ಚೂರ್ಣಮಾದಾಯ ಪತ್ರಸ್ಯೋಪರಿಯೇತ್''

ಎಂಬಂತೆ ತರ್ಜನೀ ಬೆರಳಿನಿಂದ(ತೋರು ಬೆರಳಿನಿಂದ) ಸುಣ್ಣವನ್ನು ತೆಗೆ

ದುಕೊಂಡು ಎಲೆಯ ಮೇಲೆ ಹಚ್ಚಬೇಕು. ಆದರೆ ತರ್ಜನೀ ಬೆರಳಿನ ಹೊರ ತಾಗಿ ಅನ್ಯ ಬೆರಳಿನಿಂದ ಹಚ್ಚಬಾರದು. ಕೆಲವರು ಹೆಬ್ಬೆರಳಿನಿಂದ ಹಚ್ಚುವರು ಹಾಗೆ ಹಚ್ಚಬಾರದು. ಮತ್ತೆ ಕೆಲವರು ಸುಣ್ಣಕ್ಕೆ ದೋಷವಿಲ್ಲೆಂದು ಭಾವಿಸಿ ಭವಿಗಳು ಮುಟ್ಟಿದಂಥ ಸುಣ್ಣವನ್ನು ಹಾಕಿಕೊಳ್ಳುತ್ತಾರೆ. ಇದು ಕೇವಲ ತಪ್ಪಾಗುವದು. ಯಾಕಂದರೆ—ನೀರಿನಿಂದೊಡಗೂಡಿದ ಪ್ರತಿಯೊಂದು ವಸ್ತುಗಳು ಲಿಂಗವಿಲ್ಲದ ಭವಿಗಳ(ಅಲಿಂಗಿಗಳ)ಸ್ಪರ್ಶವಾದರೆ(ಮುಟ್ಟಿದರೆ)ಅಶುದ್ಧವಾಗುವದು. ಕಾರಣ ಭವಿಗಳು ಮುಟ್ಟಿದ ಸುಣ್ಣವನ್ನು ಹಾಕಬಾರದು. ಶುದ್ಧವಾದ ನೀರಿನಿಂದ ತಯಾರಾದ ಸುಣ್ಣವನ್ನೇ ತೆಗೆದುಕೊಂಡು ತಾಂಬೂಲವನ್ನು ಸ್ವೀಕರಿಸಬೇಕು. ತದನಂತರ ತಮ್ಮ ತಮ್ಮ ನಿತ್ಯದ ಉದ್ಯೋಗ-ವ್ಯಾಪಾರಳ ಕಾರ್ಯಗಳನ್ನು ಕೈಕೊಳ್ಳಬೇಕು.

## ಗ್ರಹಣದಲ್ಲಿ ಆಚರಣೆಯು-ವಿಚಾರ

ಸೂರ್ಯೇಂದು ಗ್ರಹಣಂ ಯಾವತ್ತಾವತ್ಕುರ್ಯಾಜ್ಜ ಪಾದಿಕಂ ।
ನ ಸ್ವಪ್ಯಾನ್ನ ಚ ಭುಂಜೀತ ಸ್ನಾತ್ವಾ ಭುಂಜೀತ ಮುಕ್ತಯೋಃ ॥
ಆದಿತ್ಯ ಶೀತ ಕಿರಣೌ ಗನ್ತ್ವಾ ವಸ್ತಂಗತೌ ಯದಾ ।
ದೃಷ್ಟ್ವಾ-ತ ದಾನ್ಯ ದಿವಸೇ ಸ್ನಾತ್ವಾ ಭುಂಜೀತ ವಾಗ್ಯತಃ ।
ದೇವಾರ್ಚನಾದಿಕಂ ಕರ್ಮ ಕಾರ್ಯಂ ದೀಕ್ಷಾನ್ವಿತೈಃ ಸದಾ ।
ಪೌರ್ಣಮಾಸ್ಯಾ ಮಮಾವಾಸ್ಯಾಂ ಗ್ರಹಣೇ ಚಂದ್ರ ಸೂರ್ಯಯೋಃ॥
ಪಂಚಾಮೃತೈಃ ಸುಸಂಸ್ನಾಪ್ಯ ಲಿಂಗಮೂರ್ತಿಧರಂ ಹರಂ ।
ಪೂಜಾಯಿತ್ವಾ ವಿಧಾನೇನ ಸರ್ವಪಾಪೈಃ ಪ್ರಮುಚ್ಯತೇ ॥

ಎಂಬಂತೆ ಸೂರ್ಯ-ಚಂದ್ರರಿಗೆ ಗ್ರಹಣ ಸಂಬಂಧವಾದ ಸಮಯದಲ್ಲಿ ಗ್ರಹಣಸ್ಪರ್ಶಕಾಲದಿಂದ ಮೋಕ್ಷ ಕಾಲದ ವರೆಗೂಜಪಾದಿಗಳನ್ನು ಮಾಡಬೇಕು. ಆ ಕಾಲದಲ್ಲಿ ಮಲಗಬಾರದು. ಊಟಮಾಡಬಾರದು. ಗ್ರಹಣ ಬಿಟ್ಟ ಬಳಿಕ ಜಳಕ ಮಾಡಿ ಊಟ ಮಾಡಬೇಕು. ಗ್ರಹಣವು ಹಿಡಕೊಂಡು ಮುಳುಗಿದರೆ ಮರುದಿನದ ಚಂದ್ರನನ್ನಾಗಲೀ ಸೂರ್ಯನನ್ನಾಗಲೀ ನೋಡಿ ಮತ್ತೊಮ್ಮೆ ಜಳಕ ಮಾಡಿ ಮೌನವಾಗಿ ಊಟಮಾಡಬೇಕು. ದೀಕ್ಷಾಬದ್ಧರೂ ಸಹ ಶಿವ ಪೂಜಾದಿಗಳನ್ನು ಮಾಡಬೇಕು. ಗ್ರಹಣ ಸಮಯದಲ್ಲಿ ಯಾವನು ಕ್ರಮದಂತೆ ಪಂಚಾಮೃತಗಳಿಂದ ಅಭಿಷೇಕ ಮಾಡಿ ಪೂಜಿಸುತ್ತಾನೆಯೋ ಅವನು ಸರ್ವ ಪಾಪಗಳಿಂದ ಬಿಡುಗಡೆ ಹೊಂದುತ್ತಾನೆಂದು ಧರ್ಮಶಾಸ್ತ್ರಗಳು ಹೇಳುತ್ತವೆ ಗ್ರಹಣ ಸಮಯದಲ್ಲಿ ಪೂಜಾ ಹಾಗೂ ಜಪಾದಿ ಕಾರ್ಯಗಳಲ್ಲಿ ಮಗ್ನರಾಗಿರಬೇಕು. ಅನ್ಯ ಕಾರ್ಯಗಳಲ್ಲಿ ತೊಡಗಿರಬಾರದು. ಗ್ರಹಣ ಸಮಯದಲ್ಲಿಯು

ದಾನವು ಪುಣ್ಯಕರದ್ದಾಗಿರುವದರಿಂದ ಶಕ್ತ್ಯಾನುಸಾರ ಆಕಳು-ಭೂಮಿ-ಬಂಗಾರ ಮೊದಲಾದವುಗಳನ್ನು ದಾನಮಾಡಬೇಕು. ಗ್ರಹಣ ಸಮಯದಲ್ಲಿದ್ದ ನೀರನ್ನು ಉಪಯೋಗಿಸಬಾರದು. ಗ್ರಹಣ ಬಿಟ್ಟ ನಂತರ ಬಟ್ಟೆ ಹಾಗೂ ಅಡಿಗೆ ಪಾತ್ರೆಗಳನ್ನು ಬೆಳಗಿ ತೊಳೆದು ಹೊಸ ನೀರನ್ನು ಮಡಿಯಿಂದ ತಂದು ಅಡಿಗೆಯನ್ನು ಮಾಡಬೇಕು. ಇದು ವೀರಶೈವರಿಗೆ ಧಾರ್ಮಿಕ ವಿಧಿಯಲ್ಲ.

## ವೀರಶೈವರಿಗೆ ಉಪವಾಸಾದಿ ವ್ರತ ನಿಯಮಗಳೂ, ಗ್ರಹಣ-ಸಂಕ್ರಾಂತಿ ವಾರ ದೋಷಗಳೂ ಇರುವದಿಲ್ಲ.

ಮೇಲೆ ಗ್ರಹಣ ಆಚರಣೆಯನ್ನು ಬರೆದು ಈಗ ವೀರಶೈವರಿಗೆ ಅವು ಸಂಬಂಧವಿಲ್ಲೆಂಬುವ ಅಭಿಪ್ರಾಯವೇಕೆ? ಎಂಬುದೊಂದು ಪ್ರಶ್ನೆ ಉದ್ಭೂತವಾಗುವದು. ಗ್ರಹಣ ಕಾಲದಲ್ಲಿಯ ನಿಯಮಾದಿಗಳನ್ನು ಆಚರಿಸಬೇಕೆಂದರೆ ಆರೋಗ್ಯ ದೃಷ್ಟಿಯಿಂದ ಆಚರಿಸಬೇಕಾಗುವದು. ಯಾಕಂದರೆ ಆರೊಗ್ಯ ಹಾಗೂ ಧಾರ್ಮಿಕ ನಿಯಮಗಳಿಗೆ ನಿಕಟ ಸಂಬಂಧವಿರುವದು. ಉದಾಹರಣಾರ್ಥವಾಗಿ ಸ್ನಾನವಿಲ್ಲವೆ ಶಿವಪೂಜೆ ಮಾಡಬಾರದೆಂದು ಧಾರ್ಮಿಕ ಗ್ರಂಥವು ಹೇಳುತ್ತದೆ. ಇದೇ ವಿಷಯವನ್ನೇ ಆರೋಗ್ಯ ಶಾಸ್ತ್ರವುಊಟ ಮಾಡಿದ ನಂತರ ಜಳಕ ಮಾಡಿದರೆ ಆರೋಗ್ಯಕ್ಕೆ ಹಾನಿಕರವೆಂದು ಹೇಳುತ್ತದೆ. ಇದರಿಂದ ಧಾರ್ಮಿಕ ಹಾಗೂ ಆರೋಗ್ಯದ ನಿಯಮಗಳಿಗೆ ಎಷ್ಟು ಸಂಬಂಧವಿದೆಯೆಂದು ವ್ಯಕ್ತವಾಗುತ್ತದೆ. ಆದರೆ ಶುದ್ಧ ವೀರಶೈವನಿಗೆ ಏನೂ ಸಂಬಂಧವಿಲ್ಲೆಂಬುದಕ್ಕೆ ವೀರಶೈವ ಸಿದ್ಧಾಂತ ಪ್ರಕಾರವಾಗಿ ಕೆಳಗೆ ಆಧಾರಪೂರ್ವಕವಾಗಿ ಸ್ಪಷ್ಟಪಡಿಸಲಾಗಿದೆ. ಆದರೆ ವೀರಶೈವನು ಅಷ್ಟಾವರಣ ಹಾಗೂ ಷಟ್‌ಸ್ಥಲ ಸಂಪನ್ನನಾಗಿ ಪರಮ ಪಾವನನಾದ ಆ ಶಿವಲಿಂಗ ಮೂರ್ತಿಯನ್ನು ಸದಾವಕಾಲತನ್ನ ಶರೀರದ ಮೇಲೆ ಧಾರಕನಾಗಿ ನಿತ್ಯದಲ್ಲಿ ತ್ರಿಕಾಲ ಪೂಜಕನಾಗಿರುತ್ತಾನೆ.

ಸೌಮೇ ಭೌಮೇ ದಿನೇ ಪೂರ್ಣೇ ಸಂಕ್ರಾಂತಿ ಶಿವರಾತ್ರಯೋಃ ।
ಏಕಭುಕ್ತ ವಿಧಿಂ ಕುರ್ಯಾನ್ನರಕೇ ಕಾಲಮಕ್ಷಯಮ್ ॥
ತಿಥಿ ವಾರಂ ಚ ಲಗ್ನಂ ಚಯ: ಕುರ್ಯಾಚ್ಛಿವ ಭಕ್ತಿವಾನ್ ।
ಸೋಽವಪ್ಯ ಘೋರ ಮವಾಪ್ನೋತಿ ರೌರವಂ ನರಕಂ ತಥಾ ॥

ಎಂಬಂತೆ ಶಿವರಹಸ್ಯ ಗ್ರಂಥ ಪ್ರಮಾಣಾನುಸಾರವಾಗಿ, ಸೋಮವಾರ ಮಂಗಳವಾ, ಹುಣ್ಣಿವೆ, ಸಂಕ್ರಾಂತಿ, ಶಿವರಾತ್ರಿ ಮೊದಲಾದ ದಿನಗಳಲ್ಲಿ ಉಪವಾಸ ವ್ರತವನ್ನು ಮಾಡಿದ್ದಾದರೆ, ಹಾಗೂ ತಿಥಿ ವಾರವೆಂದು, ಲಗ್ನವೆಂದು ತಿಳಿದು ಅವುಗಳ ಕ್ರಿಯೆಗಳನ್ನು ಸದ್ಭಕ್ತನಾದ ವೀರಶೈವನು ಆಚರಿಸಿದ್ದಾದರೆ ಅಘೋರ ಪಾಪವನ್ನು ಹೊಂದುವನಲ್ಲದೆ ರೌರವ ನರಕವನ್ನು ಹೊಂದುವನು.

ಇದು ಅನ್ವಯಿಸುವ ವೀರಶೈವನು ಶುದ್ಧ ಆಚರಣೆಯುಳ್ಳವನಾಗಿ ಅಷ್ಟಾವರಣ ಷಟ್‌ಸ್ಥಲ ಪಂಚಾಚಾರ ಸಂಪನ್ನನಾಗಿರಬೇಕು. ಆಚರಣೆಯನ್ನು ಕೃತಿಯೊಳಗೆ ತರದೆ ಕೇವಲ ಬಾಯಿಪುರಾಣ ಓದುವವರಿಗೆ ತಮ್ಮ ಅನುಕೂಲಸಿಂಧು ವಿಷಯವನ್ನು ಆರಿಸಿಕೊಂಡು ಅನ್ಯ ವಿಷಯಗಳನ್ನು ಬಿಟ್ಟು ಬಿಡುತ್ತಾರೆ. ಆಧುನಿಕ ಕಾಲದಲ್ಲಿ ಇಂಥ ವೀರಶೈವರು ಹೆಚ್ಚಾಗಿದ್ದರಿಂದ ಅಂಥವರಿಗೆ ಅದು ಭೂಷಣವಾದುದಲ್ಲೆಂದು ತಿಳಿಯಬೇಕು.

ಮತ್ತೆ ಕೆಲವರು ನಾವು ವ್ಯವಹಾರಿಕರು–ನೌಕರೀವಂತರು ನಮಗೆ ಯಾವ ಆಚರಣೆಗೈಯಲು ಸಾಧ್ಯವಿಲ್ಲ, ಶಿವಪೂಜಾದಿಗಳು ಕೇವಲ ಗುರುಗಳಿಗೆ ಇವೆ. ನಮ್ಮ ಪಾಲಿನದೂ ನೀವೇ ಮಾಡಿರಿ. ನಾವು ಎಲ್ಲಿಯಾದರೂ ಸ್ನಾನ ಮಾಡುವೆವು, ಊಟ ಮಾಡುವೆವು. ಏನನ್ನಾದರೂ ಉಟ ಮಾಡಿ ಪ್ರಾಪಂಚಿಕ ವ್ಯವಹಾರಕ ಕಾರ್ಯಗಳನ್ನು ಲಾಭದಾಯಕ ಮಾಡುವದೇ ನಮ್ಮ ಕರ್ತವ್ಯವೆಂದು ಆಡಂಬರ ಮಾತುಗಳನ್ನು ಉದ್ದುದ್ದವಾಗಿ ಹೇಳುವರು. ಆದರೆ ಪೂರ್ವಜ ವೀರಶೈವರು, ಬಸವಾದಿ ಪ್ರಮಥರು, ಧಾರ್ಮಿಕ ಸದಾಚಾರ ಸದ್ವರ್ತನೆಯಲ್ಲಿ ನುಡಿದಂತೆ ನಡೆದು ಬದುಕಿ ಬಾಳಿ ಸಾಮ್ರಾಜ್ಯಸ್ಥಾಪಕರಾಗಿ ಅಜರಾಮರ ಕೀರ್ತಿಯನ್ನು ಪಡೆದು ಅಷ್ಟಾವರಣ, ಷಟ್‌ಸ್ಥಲ ಸಂಪನ್ನರಾಗಿ ಶಿವನಲ್ಲಿ ಐಕ್ಯಹೊಂದಿದರು. ಇದನ್ನರಿತು ಆಧುನಿಕ ವೀರಶೈವರು ಪಂಚಾಚಾರ, ಅಷ್ಟಾವರಣ, ಷಟ್‌ಸ್ಥಲ ಸಂಪನ್ನರಾಗಿ ನಡೆದು ಪೂರ್ವಜರಂತೆ ಕೀರ್ತಿಶಾಲಿಗಳೂ,ಸಾಮ್ರಾಜ್ಯ ನಿರ್ಮಾಪಕರೂ ಆಗಬೇಕೆಂದು ಮುಖ್ಯ ಉದ್ದೇಶವಾಗಿದೆ.

**ಇದೇ ವಿಷಯದಲ್ಲಿ ಬಸವಾದಿ ಪ್ರಮಥರು ನುಡಿದ ವಚನ ಹೀಗಿದೆ.**

ತಿಥಿವಾರವೆಂದರಿಯೆನಯ್ಯಾ ಲಗ್ನವಿಲಗ್ನವೆಂದರಿಯೆನಯ್ಯಾ
ಇದನರಿತು ಪದಿನಾರು ವಾರ ಹದಿನೆಂಟು ಕುಲವೆಂದೆಂಬರು
ನಾವಿದನರಿಯೆವಯ್ಯಾ ಇರುಳೊಂದು ವಾರ ಹಗಲೊಂದು ವಾರ
ಭವಿಯೊಂದು ಕುಲ ಭಕ್ತನೊಂದು ಕುಲ ನಾವು ಬಲ್ಲುದುದು ಇಮತಾನೆ
ಬಸಪ್ರಿಯ ಕೂಡಲ ಚೆನ್ನ ಸಂಗಮದೇವಾ ?

ಆದ್ದರಿಂದ ವೀರಶೈವರಿಗೆ ಅಷ್ಟಾವರಣ ಷಟಸ್ಥಲ ಪಂಚಾಚಾರ ನಿತ್ಯ ಶಿವಲಿಂಗ ಪೂಜಾ ಇತ್ಯಾದಿಗಳು ಒಳ್ಳೇ ಪ್ರಾಮುಖ್ಯವಾದವುಗಳೆಂದು ವೀರಶೈವ ಧಾರ್ಮಿಕ ಸಿದ್ಧಾಂತವು ಬೋಧಿಸುತ್ತದೆ.



# ಚತುರ್ಥ - ರತ್ನ

## ಶಿವಪೂಜಾ ವಿಧಾನವು

## ವೀರಶೈವರಿಗೆ ಇಷ್ಟಲಿಂಗ ಪೂಜೆಯೇ ಪ್ರಾಮುಖ್ಯವು

"ಶಿವಾರ್ಚಾಕರ್ಮ ವಿಜ್ಞೇಯಂ ಬಾಹ್ಯಾಂ ಯಾಗಾದಿನೋಚ್ಯತೇ॥"

ಎಂಬ ಸಿದ್ಧಾಂತ ಶಿಖಾಮಣಿಯ ಪ್ರಮಾಣಾನುಸಾರವಾಗಿ ವೀರಶೈವ ಮತೀಯರಿಗೆ ಶಿವಪೂಜೆಯೇ ಮುಖ್ಯ ಕರ್ತವ್ಯಕರ್ಮವಾಗಿದೆ. ಇನ್ನುಳಿದ ಬಾಹ್ಯ ಕರ್ಮಗಳಾದ ಯಜ್ಞ-ಯಾಗಾದಿ ಕರ್ಮಗಳಿಂದ ಶಾಶ್ವತ ಫಲಗಳು ದೊರೆಯದ ಮೂಲಕ ಅವುಗಳನ್ನು ನಿಷೇಧ ಮಾಡಲ್ಪಟ್ಟಿವೆ. ಆದ್ದರಿಂದ ಆಚಾರ ಸಂಪನ್ನನಾದ ವೀರಶೈವನು ಗುರುವಿನಿಂದ ಅನುಗ್ರಹಿಸಲ್ಪಟ್ಟ ಇಷ್ಟಲಿಂಗವನ್ನು ಧರಿಸಿಕೊಂಡ ಬಳಿಕ ತನ್ನ ಮರಣಪರ್ಯಂತವಾಗಿ ನಿತ್ಯ ಸಂಕಲ್ಪ ಮಾಡಿ ಇಷ್ಟ ಲಿಂಗಾರ್ಚನೆಯನ್ನು ಮಾಡಬೇಕು. ಈ ಮಧ್ಯದಲ್ಲಿ ಶಿರಚ್ಛೇದವಾದಾಗ್ಯೂ ಪ್ರಾಣ ಸಂಕಟ ಬಂದಾಗ್ಯೂ, ಇಷ್ಟ ಲಿಂಗಾರ್ಚನೆಯನ್ನು ಬಿಡಕೂಡದು. ಮತ್ತು ನಿತ್ಯ ಲಿಂಗಾರ್ಚನೆಯನ್ನು ಮಾಡಿಕೊಳ್ಳದೆ ಊಟ ಮಾಡಬಾರದೆಂದು ಶಿವರಹಸ್ಯವು ಬೋಧಿಸುತ್ತದೆ, ಮತ್ತು ಉದಯ ಕಾಲ, ಮಧ್ಯಾಹ್ನ ಕಾಲ, ಸಾಯಂಕಾಲ ಹೀಗೆ ತ್ರಿಕಾಲದಲ್ಲಿ ನಿತ್ಯವಾಗಿ ಇಷ್ಟಲಿಂಗಾರ್ಚನೆಯನ್ನು ಮಾಡಿಕೊಳ್ಳಬೇಕು. ಇಲ್ಲವಾದರೆ—

"ಸ್ನಾತ್ವಾದ್ವಿವಾರಂ ಶಿವಮರ್ಚಯಿಷ್ಯ ನ್ಭುಂಜೀತನೋ ಚೇನ್ನರಕಂ ಪ್ರಯಾತಿ"

ಎಂಬ ಕ್ರಿಯಾಸಾರ ಗ್ರಂಥೋಕ್ತಿಯಂತೆ ದ್ವಿಕಾಲದಲ್ಲಿ (ಮುಂಜಾನೆ—ಸಾಯಂಕಾಲದಲ್ಲಾದರೂ) ಇಷ್ಟ ಲಿಂಗಾರ್ಚನೆಯನ್ನು ಮಾಡಿಕೊಂಡು ಊಟ ಮಾಡಬೇಕು. ಆದರೆ ಸ್ನಾನ ಮಾಡದೆ ಇಷ್ಟ ಲಿಂಗಾರ್ಚನೆಯನ್ನು ಮಾಡಬಾರದು. ಒಂದು ವೇಳೆ ಇದನ್ನು ಉಲ್ಲಂಘಿಸಿದರೆ ನರಕ ಪ್ರಾಪ್ತಿಯೆಂದು 'ಪಂಡಿತಾರಾಧ್ಯ' ಗ್ರಂಥವು ಹೇಳುತ್ತದೆ. ಸ್ತ್ರೀಯಾಗಲೀ ಅಥವಾ ಪುರುಷನಾಗಲೀ ಇಷ್ಟ ಲಿಂಗಧಾರಣವಾದ ನಂತರ ಶಿವಪೂಜೆಯನ್ನು ಮಾಡಿಯೇ ಊಟ ಮಾಡಬೇಕು. ಆದರೆ—

"ನಾನ್ಯ ದೇವಾರ್ಚಕಾನ್ಮರ್ತ್ಯಾನ್ಪೂಜಾ ಕಾಲೇ ನಿರೀಕ್ಷಯೇತ್"

ಎಂಬ ಸಿದ್ಧಾಂತ ಶಿಖಾಮಣಿ ಗ್ರಂಥ ಪ್ರಮಾಣದಂತೆ ಶಿವಾರ್ಚನೆಯ ಕಾಲದಲ್ಲಿ ಭವಿಗಳನ್ನು (ಅಲಿಂಗಿಗಳನ್ನು) ನೋಡಬಾರದು. ನೋಡಬಾರದೆಂದ ಬಳಿಕ ಮಾತನಾಡಬಾರದೆಂಬುದನ್ನೂ ಸಹಜ ಸಿದ್ಧಮಾಡಿ ಹೇಳಿದಂತಾಯಿತ್ತು,

ವೀರಶೈವ ಧರ್ಮಾಚಾರವು ಹೀಗಿದ್ದ ಪಕ್ಷದಲ್ಲಿ ಆಧುನಿಕ ಕಾಲದಲ್ಲಿ ಬಹು ಸಂಖ್ಯಾಕರರು ಸ್ನಾನ ಮುಗಿಸಿಕೊಂಡು ಶಿವಪೂಜಾ ಗೃಹಕ್ಕೆ ಬಂದೊಡನೆಯೇ ಮನೆಯ ಆಡಳಿತವನ್ನು ವಿಚಾರ ಮಾಡುತ್ತ ಇಷ್ಟ ಲಿಂಗಾರ್ಚನೆ ಪ್ರಾರಂಭ ಮಾಡುವರು. ತದನಂತರ ಅಂಗಡಿಯ ಕಾರಕೂನನ್ನು ಹೊರಗೆ ನಿಲ್ಲಿಸಿ ಒಂದೊಂದು ಮಂತ್ರವನ್ನು ಅನ್ನುತ್ತ ಒಂದೊಂದು ವ್ಯವಹಾರದ ಲೆಖ್ಖವನ್ನು ಒಪ್ಪಿಸಿಕೊಳ್ಳುತ್ತಾರೆ. ಬಳಿಕ ಮಂತ್ರಜಪವನ್ನು ಆರಂಭ ಮಾಡಿದ ಕೂಡಲೇ ಒಟ್ಟು ಅಢಾವೆ ಎಷ್ಟೆಂದು ಕೇಳುವರು. ಹೀಗೆ ಅಢಾವೆಯ ಲೆಖ್ಖವನ್ನು ಒಪ್ಪಿಸಿ ಕೊಳ್ಳುತ್ತಲೇ ಮಂತ್ರಜಪವನ್ನು ಪೂರೈಸುವರು. ಇದು ಶುದ್ಧ ಕ್ರಿಯಾದೀಕ್ಷೆ ಯಾದವರ ಒಳ್ಳೇ ಆಚಾರ ಸಂಪನ್ನರಾದ ವ್ಯಾವಹಾರ ಚತುರರ ನಡತೆಯಾಗಿದೆ. ಇಂಥವರಿಗೆ ಏಕ ಮನಸ್ಸೆಲ್ಲಿ ? ಮುಕ್ತಿ ಇನ್ನೆಲ್ಲಿ? ಇಂಥವರಿಗೆ ಯಾವ ಶಾಸ್ತ್ರ ಏನು ಹೇಳಬಲ್ಲದು?

ಹೀಗೆ ಮಾಡುವದರಿಂದ ಮನಸ್ಸಿನ ಏಕಾಗ್ರತೆಯುಳಿಯಲಾರದು. ಕಾರಣ ವೀರಶೈವ ಬಾಂಧವರು ಮೇಲಿನಂತೆ ಮಂತ್ರ-ಜಪದ ಹೊರ್ತಾಗಿ ಅಢಾವೆಯ ಜಪ ಮಾಡದೆ ಶಿವಪೂಜಾ ಗ್ರಹದ ಕದವನ್ನು ಮುಚ್ಚಿಕೊಂಡು ಏಕಾಗ್ರ ಚಿತ್ತದಿಂದ ಇಷ್ಟಲಿಂಗಾರ್ಚನೆಯನ್ನು ಕನಿಷ್ಟ ಪಕ್ಷ ಏಕಕಾಲ (ಬೆಳಿಗ್ಗೆ) ಮಾಡಿಯಾದರೂ ಊಟಮಾಡಬೇಕು. ಕೊನೆಗೆ ಹೀಗೆ ನಿತ್ಯದಲ್ಲಿ ನಡೆಯತಕ್ಕವನ ನಡತೆಯಷ್ಟು ನಿರ್ಮಲವಾದುದು! ಆತನ ಜೀವನ ಎಷ್ಟು ಪವಿತ್ರವಾದುದು! ಇದನ್ನಾರು ಬಲ್ಲರು? ಹೀಗೆ ವಚನ ಶಾಸ್ತ್ರಕಾರರು ಪ್ರತಿಪಾದಿಸುತ್ತಾರೆ.

## ಇಷ್ಟಲಿಂಗಾರ್ಚನೆಯ ಮಹತ್ವ

ತ್ರಿಕಾಲಮರ್ಚಯೇಲ್ಲಿಂಗ ಮೇಕ ಕಾಲೇತು ಭಾವಿತಮ್||
ನರೋಭವತಿ ದಾನೇನ ನ ತೀರ್ಥೇವ ನರಾಜಿಸು||

ಎಂಬ ಶಿವರಹಸ್ಯ ಗ್ರಂಥ ಪ್ರಮಾಣಾನುಸಾರವಾಗಿ ವೀರಶೈವನು ತ್ರಿಕಾಲ ಪೂಜೆ ಸಾಧ್ಯವಾಗದಿದ್ದರೆ ಕೊನೆಗೆ ಏಕಕಾಲವಾದರೂ ಮಾಡಬೇಕು. ಹಾಗೂ ಈ ಶಿವಪೊಜೆಯಲ್ಲಿಯೇ ಅನೇಕ ದಾನಗಳೂ, ಕೋಟಿ ತೀರ್ಥಂಗಳೂ ಎಲ್ಲಾ ಪುಣ್ಯತೀರ್ಥಂಗಳೂ ಇರುವವೆಂದು ಶಿವಪುರಾಣ ಗ್ರಂಥವೂ, ವಚನಶಾಸ್ತ್ರವೂ ಹೇಳುವದು ಅಷ್ಟೇ ಅಲ್ಲ ಆದರೆ ಈಶ್ವರ ಬ್ರಹ್ಮಾದಿ ದೇವತೆಗಳೂ, ಶಿಖೆಯಲ್ಲಿ ಲಿಂಗಧಾರಣ ಮಾಡಿಕೊಂಡು ಲಿಂಗಾರ್ಚನೆಯನ್ನು ಪ್ರತಿನಿತ್ಯದಲ್ಲಿ ತಪ್ಪದೇ ಮಾಡುವರೆಂದು ಬೋಧಿಸಲಾಗಿದೆ. ಮತ್ತು "ಅಣೋರಣಿಯಾನ್ ಮಹಿತೋ ಮಹಿಯಾನ್" ೨) "ಯತೋವಾಚೋ ನಿರ್ವಂತೇ" ೩) "ಅತ್ಯತಿಷ್ಠದ್ದಶಾಂಗಲಮ್" ಹೀಗೆಂದು ವೇದನಾಮಗಳು ಹೇಳುತ್ತವೆ. ಆದರೆಈಮಾಯಾ

ಮೋಹ ಮದ ಮತ್ಸರಗಳೆಂಬ ಅರಿಷಡ್ವರ್ಗದ ಜಾಲದಲ್ಲಿ ಸಿಲುಕಿ, ಈಭವಬಂಧನ ಪಾಶದೊಳಗೆ ಹೊರಳಾಡುವವನಿಗೆ ಇಷ್ಟ ಲಿಂಗ ಪೂಜೆಯೇ ಪ್ರಾಮುಖ್ಯವೆಂದೂ, ಹಾಗೂ ಈ ಇಷ್ಟಲಿಂಗಾರ್ಚನೆಯಿಂದಲೇ ಭವಪಾಶದ ಪರಿಹರಿದು ಮೋಕ್ಷ ಪದ ವಿಯು ಪ್ರಾಪ್ತವಾಗುವದೆಂದು ವೇದಾಗಮಗಳು ಬೋಧಿಸುತ್ತವೆ. ಕಾರಣ ಇಲ್ಲಿ ಮುಂದೆ ನಿತ್ಯ ಇಷ್ಟಲಿಂಗಾರ್ಚನೆಯ ಪದ್ಧತಿಯು ಮಂತ್ರಗಳನ್ನು ಸಕ್ರಮ ವಾಗಿ ಬರೆಯಲಾಗಿದೆ. ಅದರಂತೆ ನಿತ್ಯದಲ್ಲಿ ವೀರಶೈವ ಬಾಂಧವರು ತನು, ಮನ, ಧನವೆಂಬ ತ್ರಿಕರಣ ಶುದ್ಧಿಯುಳ್ಳವರಾಗಿ ಇಷ್ಟಲಿಂಗಾರ್ಚನೆಯನ್ನು ಮಾಡಿ ಸದ್ಗತಿಯನ್ನು ಪಡೆದು ಧನ್ಯರಾಗಬೇಕು.

## ಇಷ್ಟಲಿಂಗಾರ್ಚನೆಯನ್ನು ಕ್ರಮಬದ್ಧವಾಗಿ ಮಾಡುವ ಮಂತ್ರಾದಿಗಳು-ಪ್ರಾರಂಭವು.

### ಸ್ನಾನೋದಕವನ್ನು ಶುದ್ಧ ಮಾಡುವ ಮಂತ್ರ.

ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿ
ಸ್ತೋಮಂಗ್ಂ ಸಚತಾ ಪರುಷ್ಣಿಯಾ । ಅಸಿಕ್ನಿಯಾ ಮರುದ್ವೃಧೇ
ವಿತಸ್ತಯಾರ್ಜೀಕೀಯೇ ಶೃಣು ಹ್ಯಾಸುಷೋಮಯಾ ॥

ಈ ಮಂತ್ರದಿಂದ ಸ್ನಾನ ಮಾಡುವ ನೀರನ್ನು ಮೊದಲು ಒಂದು ತಂಬಿಗೆ ಯಲ್ಲಿ ತೆಗೆದುಕೊಂಡು ಅದನ್ನು ಅಭಿಮಂತ್ರಿಸಿ (ಮುಖದಿಂದ ಪಠಣ ಮಾಡಿ) ಕೆಳಗಿನ ಮಂತ್ರದಿಂದ ಮುಖ ಹಸ್ತಾದಿಗಳನ್ನು ತೊಳೆದುಕೊಳ್ಳಬೇಕು.

### ಹಸ್ತ-ಮುಖವನ್ನು ತೊಳೆದುಕೊಳ್ಳುವ ಮಂತ್ರ.

ಯದಪಾಂ ಕ್ರೂರಂ ಯದಮೇಧ್ಯಂ ಯದಶಾಂತಂ ತದಪ
ಗಚ್ಛತಾತ್। ಅತ್ಯಾಶನಾದಲೇವಾನಾದ್ಯಚ್ಚ ಉಗ್ರಾತ್ ಪ್ರತಿಗ್ರಹಾತ್।
ಲಗ್ನೇವರುಣೋ ರಾಜಾ ಪಾಣಿನಾ ಹ್ಯವಮರ್ಶತು ॥

### ಸ್ನಾನ ಮಾಡುವಾಗ ಅನ್ನುವ ಮಂತ್ರ.

ಆಪೋವಾ ಇದ ಇದಗ್ಂ ಸರ್ವಂ ವಿಶ್ವಾ ಭೂತಾನ್ಯಾಪಃ
ಪ್ರಾಣಾವಾ ಆಪಃ ಪಶವ ಆಪೋಽಮೃತ ಮಾಪೋನ್ನ ಮಾಪಸ್ಸಮ್ರಾ
ಡಾಪೋ ವಿರಾಡಪಃ ಸ್ವರಾಡಾಪಶ್ಛಂದಾಗ್ಂಸ್ಯಾಪೋ ಜ್ಯೋತೀಗ್ಂ
ಷ್ಯಾಪೋ ಯಜೂಗ್ಂಷ್ಯಾಪಸ್ಸತ್ಯ ಮಾಪಸ್ಸರ್ವಾ ದೇವತಾ ಆಪೋ
ಭೂರ್ಭುವಸ್ಸುವರಾಪಓಂ ॥ (ಅಥವಾ)

ಪುನಂತು ಮಾದೇವಜನಾಃ ಪುನಂತು ಮನಸಾಧಿಯಃ ।
ಪುನಂತು ವಿಶ್ವಾ ಭೂತಾನಿ ಜಾತವೇದಂ ಪುನೀಹಿಮಾ ॥

ಮೊದಲಿನ ಅಥವಾ ಎರಡನೆಯ ಮಂತ್ರವನ್ನು ಅನ್ನುತ್ತಾ ಝುಳಕ ಮಾಡಬೇಕು. ತದನಂತರ ಮಡಿಬಟ್ಟೆಯನ್ನು ಉಟ್ಟುಕೊಳ್ಳಬೇಕು.

## ಬಟ್ಟೆಯನ್ನು ಉಟ್ಟುಕೊಳ್ಳುವಾಗ ಅನ್ನುವ ಮಂತ್ರ.

ಯುವಂ ವಸ್ತ್ರಾಣಿ ಪೀವಸಾ ವಸಾಥೇಯುವೋ ರಚ್ಛಿದ್ರಾ
ಮಂತವೋಽಹಸರ್ಗಾಃ । ಅವಾತಿರತ ಮನೃತಾನಿ ವಿಶ್ವಋತೇನ ಮಿತ್ರಾ
ವರುಣಾ ಸಚೇಥೇ ॥

ಈ ಮಂತ್ರವನ್ನು ಅನ್ನುತ್ತಾ ಮಡಿಬಟ್ಟೆಯನ್ನುಟ್ಟುಕೊಂಡು ಕೈಯಲ್ಲಿ ಶುದ್ಧ ನೀರು ತುಂಬಿದ ಒಂದು ಚರಿಗೆಯನ್ನು ತೆಗೆದುಕೊಂಡು ಶಿವಪೂಜಾ ಸ್ಥಳದ (ಕೋಣೆಯ) ವರೆಗೆ ಸ್ವಲ್ಪ ಸ್ವಲ್ಪ ನೀರನ್ನು ಸಿಂಪಡಿಸುತ್ತ ಹೋಗಬೇಕು. ಹೀಗೆ ಹೋಗುವಾಗ ಕೆಳಗಿನ ಮಂತ್ರವನ್ನು ಅನ್ನುತ್ತ ಹೋಗಬೇಕು.

## ಶಿವಪೂಜಾ ಕೋಲೆಗೆ ಹೋಗುವಾಗ ಅನ್ನುವ ಮಂತ್ರ.

ಚತ್ವಾರಿ ಶೃಂಗಾ ತ್ರಯೋ ಅಸ್ಯ ಪಾದಾದ್ವೇ ಶಿರ್‍ಷೆಸಪ್ತ
ಹಸ್ತಾಸೋ ಅಸ್ಯ । ತ್ರಿಧಾ ಬದ್ಧೋ ವೃಷಭೋ ರೋರ ವೀತಿ ಮಹೋ
ದೇವೋ ಮರ್ತ್ಯಾಗ್ಂ ಆವಿವೇಶ ॥

ಈ ಮಂತ್ರವನ್ನು ಅನ್ನುತ್ತ ಶಿವಪೂಜಾ ಕೋಲೆಯೊಳಗೆ ಹೋದ ನಂತರ ಅಲ್ಲಿ ಆಸನದ (ಗದ್ದುಗೆಯ) ಮೇಲೆ ಪೂರ್ವಕ್ಕೆ ಮುಖಮಾಡಿ ಅಥವಾ ಉತ್ತರಕ್ಕೆ ಮುಖಮಾಡಿ ಕೂಡ್ರಬೇಕು. ( ಒಂದು ವೇಳೆ "ಓಂ ಸರ್ವೇಶ್ವರಾಯನಮಃ" ಎಂದು ಸಂಕ್ಷಿಪ್ತವಾಗಿ ಅನ್ನುತ್ತ ಹೋದರೂ ಬರುವದು.)

## ಆಸನದ ಮೇಲೆ ಕೂಡ್ರುವಾಗ ಅನ್ನುವ ಮಂತ್ರ.

ಆಸನಮಂತ್ರಸ್ಯ ಪೃಥಿವ್ಯಾ ಮೇರು ಪೃಷ್ಠ ಋಷಿಃ ।
ಸುತಲಂ ಛಂದಃ ಪರಶಿವ ಪ್ರೇರಿತೋ ವಿಷ್ಣುರುದ್ರಾಂಶೋದೇವತಾ॥
ಲಂ ಪೃಥಿವ್ಯಾತ್ಮನೇ ಅಷ್ಟಮೂರ್ತ್ಯಂತರ್ಗತಾಂತರ್ಯಾಮಿಣೇ-
ಶ್ರೀಕಂಠ ರುದ್ರಾಯನಮಃ । ಓಂ ಹ್ಲಾಂ, ಹ್ಲೂಂ, ಹರ ಹರ ಸೋಹಂ
ಹಂಸಃ ಪೃಥಿವೀ ಶುದ್ಧ್ಯರ್ಥಿವಾಯ ಪರಮಾಸನಾಯನಮಃ ॥

ಅ ಥ ವಾ

ಪೃಥ್ವಿತ್ವಯಾಧೃತಾಲೋಕಾ ದೇವಿತ್ವಂ ವಿಷ್ಣುನಾಧೃತಾ ।
ತ್ವಂಚ ಧಾರಯಮಾಂ ದೇವಿ ಪವಿತ್ರಂ ಕುರುಚಾಸನಂ ॥

ಈ ಎರಡರಲ್ಲೊಂದು ಮಂತ್ರ ಅನ್ನುತ್ತ ಆಸನದ ಮೇಲೆ ಕೂಡ್ರಬೇಕು.

## ಶುದ್ಧೋದಕ ಮಾಡುವ ಮಂತ್ರ.

ಓಂ ಗಂಗೇಚ ಯಮುನೇಚೈವ ಗೋದಾವರೀ ಸರಸ್ವತೀ ।
ನರ್ಮದಾ ಸಿಂಧು ಕಾವೇರಿ ಜಲೆಸ್ಮಿನ್ ಸನ್ನಿಧಿಂ ಕುರು ॥

ಎಂಬ ಮಂತ್ರವನ್ನು ಅನ್ನುತ್ತ ತುಂಬಿದ ತಂಬಿಗೆಯಲ್ಲಿ ಭಸ್ಮಲೇಪಿಸಿ ಕೊಂಡ ಬೆರಳಿನಿಂದ "ಓಂ" ಕಾರ ಪ್ರಣವಾಕ್ಷರವನ್ನು ಬರೆದು ಅಂಗೈಗೆ ಪುನಃ ಭಸ್ಮ ಧರಿಸಿಕೊಂಡು ಅದನ್ನು ಆ ತಂಬಿಗೆಯ ಮೇಲೆ ಮುಚ್ಚಿ ಮಂತ್ರವನ್ನು ಪೂರ್ಣ ಅಂದು ಪೂರ್ತಿಗೊಳಿಸಬೇಕು. ಈ ಪ್ರಕಾರ ಶುದ್ಧೋದಕವಾಡಿದ್ದನ್ನು ತನ್ನ ಯಾವತ್ತೂ ಪೂಜಾ ಸಾಮಗ್ರಿಗಳಿಗೆ ಹಾಗೂ ಮಸ್ತಕಕ್ಕೆ ಸಿಂಪಡಿಸಬೇಕು. ಅಂದರೆ ಅವು ಶುದ್ಧವಾಗುವವು.

## ದಿಗ್ಬಂಧನ ಮಾಡುವ ಮಂತ್ರ.

ಆಪಸರ್ಪಂತು ಯೇ ಭೂತಾಯೇ ಭೂತಾಭುವಿ ಸಂಸ್ಥಿತಾಃ ।
ಯೇಭೂ ತಾ ವಿಘ್ನಕರ್ತಾ ರಸ್ತೇನಸ್ಯಂತು ಶಿವಾಜ್ಞಯಾ ॥

ಈ ಮಂತ್ರದಿಂದ ಪೂರ್ವಾದಿ ನಾಲ್ಕೂ ದಿಕ್ಕುಗಳಿಗೂ, ಅಗ್ನೇಯಾದಿ ನಾಲ್ಕೂ ಮೂಲೆಗಳಿಗೂ ಮೇಲೆ ಹಾಗೂ ಕೆಳಗೆ ಹೀಗೆ ಹತ್ತು ದಿಕ್ಕುಗಳಿಗೂ ಶುದ್ಧ ಮಾಡಿದ ನೀರನ್ನು ತೆಗೆದುಕೊಂಡು ಸಿಂಪಡಿಸಬೇಕು.

# ಸಂಕಲ್ಪ-ಮಂತ್ರ

ಓಂ ಶಿವಶಿವಶಂಭೋರಾಜ್ಞಾಯಾಪ್ರವರ್ತ ಮಾನಸ್ಯಾದ್ಯಬ್ರಹ್ಮಣಃ ದ್ವಿತೀಯ ಪರಾರ್ಧೇ ಶ್ವೇತ ವರಾಹ ಕಲ್ಪೇ ವೈವಸ್ವತ ಮನ್ವಂತರೇ ಕಲಿಯುಗೇ ಪ್ರಥಮ ಪಾದೇ ಜಂಬೂದ್ವೀಪೇ ಮೇರೋರ್ದಕ್ಷಿಣ ದಿಗ್ಭಾಗೇ ಭರತಖಂಡೇ ಭಾರತ ವರ್ಷೇ ದಂಡಕಾರಣ್ಯೆ ಗೋದಾವರ್ಯಾಃ ದಕ್ಷಿಣ ಕೂಲೇ ಶಾಲಿವಾಹನಶಕೇ ಬೌದ್ಧಾವತಾರೇ ಶ್ರೀ ಶೈಲಸ್ಯ ಪಶ್ಚಿಮ ಪ್ರದೇಶೇ ಕಾರ್ನಾಟಕ ದೇಶೇ ಅಸ್ಮಿನ್ ವರ್ತಮಾನೇ ವ್ಯಾವಹಾರಿಕ ಚಂದ್ರಮಾನೇ ಪ್ರಭಾದಿ ಷಷ್ಟಿ ಸಂವಂತ್ಸರಾಣಾಮಧ್ಯೇ ( ) ಸಂವತ್ಸರೇ ( ) ಅಯನೇ ( ) ಋತೌ ( ) ವರ್ಷೇ ( ) ಮಾಸೇ ( ) ಪಕ್ಷೇ ( ) ವಾರೇ ( ) ನಕ್ಷತ್ರೇ ( ) ಯೋಗೇ ( ) ಕರಣಯುಕ್ತಾ ಯಾಂ ಅ ಸ್ಯಾಂಶುಭತಿಥೌ ( ) ಗೋತ್ರೋತ್ಪನ್ನೋಽಹಂ ಮಮೋಪಾತ್ತದುರಿತ ಕ್ಷಯದ್ವಾರಾ ಅಸ್ಮಾಕಂ ಸಕುಟುಂಬಾನಾಂ ಕ್ಷೇಮ ಸ್ಥೈರ್ಯ ವಿಜಯಾ ಭಯಾಯುರಾರೋಗ್ಯೈಶ್ವರ್ಯಾಭಿ ವೃದ್ಧ್ಯರ್ಥಂ ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗ ಪೂಜಾಯಾ ತನುತ್ರಯ ಶುದ್ಧಿ ದ್ವಾರಾ ಶ್ರೀಗುರು ಲಿಂಗ ಜಂಗಮ ಪ್ರಸಾದ ಸಿದ್ಧ್ಯರ್ಥಂ ಪ್ರಾಣಲಿಂಗ ಭಾವಲಿಂಗಾಧಿಷ್ಠಾಷ್ಟನೇಷ್ಟ ಲಿಂಗ ಯಥಾಶಕ್ತಿ ಇಷ್ಟಲಿಂಗ ಪೂಜಾಂ ಕರಿಷ್ಯೇ.

ಹೀಗೆ ಸಂಕಲ್ಪವನ್ನು ಮಾಡಿ ಜಲಾಕ್ಷತೆಯನ್ನು ಬಿಡಬೇಕು. ತದನಂತರ ;ನ ಶಿವಧ್ಯಾನ ಮಾಡಿ ಭಸ್ಮ-ರುದ್ರಾಕ್ಷ ಧಾರಣ ಮಾಡಿಕೊಳ್ಳಬೇಕು.

# ಗುರುಧ್ಯಾನ

ಗುರುದೇವೋ ಮಹಾದೇವೋ ಗುರುದೇವೊ ಸದಾಶಿವಃ।
ಗುರುದೇವಾತ್ಪರಂ ನಾಸ್ತಿ ತಸ್ಮೈ ಶ್ರೀ ಗುರುವೇನಮಃ॥

# ಶಿವಧ್ಯಾನ

ಶಾಂತಂ ಪದ್ಮಾಸನ್ಥಂ ಶಶಿಧರ ಮುಕುಟಂ ಪಂಚ ವಕ್ತ್ರಂತ್ರಿನೇತ್ರಂ॥
ಶೂಲಂ ವಜ್ರಂಚ ಖಡ್ಗಂ ಪರಶುಮಭಯದಂದಕ್ಷ ಭಾಗೇವಹಂತಂ॥
ನಾಗಂ ಪಾಶಂಚ ಘಂಟಾಂ ಪ್ರಳಯಹುತವಹಂ ಸಾಂಕುಶಂ ವಾಮಭಾಗೇ।
ನಾನಾಲಂಕಾರ ದೀಪ್ತಂ ಸ್ಫಟಿಕ ಮಣಿ ನಿಭಂ ಪಾರ್ವತೀಶಂ ನಮಾಮಿ॥

**( ಶಿವಧ್ಯಾನದ ನಂತರ ಕರನ್ಯಾಸ-ಅಂಗನ್ಯಾಸ ಮಾಡಬೇಕು )**

## ಕರನ್ಯಾಸ

ಕಾಲಾಯನಮಃ। ಅಂಗುಷ್ಠಾಭ್ಯಾಂ ನಮಃ॥ ಕಲವಿಕಾರಣಾ ಯನಮಃ ತರ್ಜನೀಭ್ಯಾಂ ನಮಃ। ಬಲವಿಕರಣಾಯನಮಃ ಮಧ್ಯಮಾಭ್ಯಾ ನಮಃ। ಬಲಪ್ರ ಮಥ ನಾಯನಮಃ ಅನಾಮಿಕಾಭ್ಯಾನಮಃ। ಸರ್ವಭೂತ ದಮನಾಯನಮಃ ಕನಿಷ್ಠಿಕಾಭ್ಯಾಂನಮಃ।ಮನೋನ್ಮಾನಾಯನಮಃ ಕರತಲಕರ ಪೃಷ್ಠಾಭ್ಯಾನಮಃ।

## ಅಂಗನ್ಯಾಸ

ಕಾಲಾಯನಮಃ ಹೃದಯಾಯನಮಃ। ಕಲವಿಕರಣಾಯನಮಃ ಶಿರ ಸೇಸ್ವಾಹಾ। ಬಲವಿಕರಣಾಯನಮಃ ಶಿಖಾಯೈ ವೌಷಟ್। ಬಲ ಪ್ರಮಥಾಯ ನಮಃ ಕವಚಾಯ ಹುಂ। ಸರ್ವಭೂತ ದಮನಾಯನಮಃ ನೇತ್ರ ತ್ರಯಾಯ ವೌಷಟ್। ಮನೋನ್ಮನಾಯನಮಃ ಅಸ್ತ್ರಾಯಫಟ್॥

# ಭಸ್ಮಧಾರಣ ಕ್ರಮ

ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವ ಮೃತ್ವಿಜಂ।
ಹೋತಾರಂ ರತ್ನಧಾತಮಂ॥

ಎಂಬೀ ಮಂತ್ರವನ್ನು ಪಠಿಸುತ್ತ ಭಸ್ಮಕ್ಕೆ ನಮಸ್ಕಾರವನ್ನು ಮಾಡಿ, ಬಲ ಗೈಯ ಹೆಬ್ಬರಳು ಮಧ್ಯಬೆರಳು, ಅನಾಮಿಕ ಬೆರಳುಗಳಿಂದ (ಕುರಂಗ ಮುದ್ರೆ ಯಿಂದ) ಆ ಭಸ್ಮವನ್ನು ತೆಗೆದುಕೊಂಡು ಎಡ ಅಂಗೈಯ್ಯಲ್ಲಿಟ್ಟು, ಎಡಗೈಯನ್ನು ಬಲದೊಡೆಯಮೇಲಿಟ್ಟು ಅದರ ಮೇಲೆ ಬಲಗೈಯನ್ನು ಬಾಳೆ ಹೂವಿನ ಆಕೃತಿ ಯಂತೆ ಮುಚ್ಚಿ "ಓಂ ನಮಃ ಶಿವಾಯ" ಎಂಬ ಮೂಲಮಂತ್ರದಿಂದ ಹನ್ನೊಂದು ಸಾರೆ ಅಭಿಮಂತ್ರಿಸಿ ತದನಂತರ ಎರಡೂ ಅಂಗೈಗಳಿಗೆ ತುಂಬ ಲೇಪಿಸಿಕೊಂಡು ಆ ಹಸ್ತಗಳನ್ನು ಕುತ್ತಿಗೆಯ ಹಿಂಭಾಗದಿಂದ ತಲೆಯಮೇಲೆ ಹಾಯಿಸಿ ಮುಖಕ್ಕೆ

ಹಾಗೂ ಎಲ್ಲಾ ಅಂಗಗಳಿಗೂ ಲೇಪಿಸಿಕೊಳ್ಳಬೇಕು. ಇದು ಭಸ್ಮೋದ್ಧೂಳನ (ಭಸ್ಮಸ್ನಾನ) ವೆನಿಸುವದು. ತದನಂತರ ಭಸ್ಮವನ್ನು ಜಲಮಿಶ್ರಿತ ಮಾಡಿ ಧರಿಸಿಕೊಳ್ಳಬೇಕು.

## ಭಸ್ಮವನ್ನು ಜಲ ಮಿಶ್ರಿತ ಮಾಡುಡುವಾಗ ಅನ್ನುವಮಂತ್ರ

ಮಾಸನ್ತೋ ಕೇ ತನಯೇಮಾನ ಆಯುಷಿಮಾನೋ ಗೋಷು
ಮಾನೋ ಅಶ್ವೇಷು ರೀರಿಷಃ| ವೀರಾನ್ಮಾನೋ ರುದ್ರಭಾಮಿತೋ
ವಧೀರ್ಹ ವಿಷ್ಮಂತೋ ನಮನಾ ವಿಧೇಮತೇ||

ಎಂಬ ಮಂತ್ರದಿಂದ ಭಸ್ಮವನ್ನು ಜಲಮಿಶ್ರಿತ ಮಾಡಬೇಕು. ತದನಂತರ "ತ್ರ್ಯಾಯುಷಂ ಜಮದಗ್ನೇಃ ಕಸ್ಯಪಶ್ಯ ತ್ರ್ಯಾಯುಷಂ| ಯದ್ದೇ ವಾನಾಂ ತ್ರ್ಯಾಯುಷಂ ತನ್ಮೇ ಅಸ್ತು ತ್ರ್ಯಾಯುಷಂ||

ಈ ಮಂತ್ರವನ್ನು ಪಠಿಸಬೇಕು ಬಳಿಕ ಕೆಳಗೆ ಬರೆದ ಮಂತ್ರವನ್ನು ಉಚ್ಚರಿಸುತ್ತ ಹದಿನೈದು ಸ್ಥಾನಗಳಲ್ಲಿ ತ್ರಿಪುಂಡ ಧಾರಣ ಮಾಡಿಕೊಳ್ಳಬೇಕು. (ಇದರ ವಿಶೇಷ ಮಾಹಿತಿಯನ್ನು ಹಿಂದೆ ಆಚಾರ ಪ್ರಕರಣದಲ್ಲಿ ಬರೆದಿದೆ)ಭಕ್ತರು ಮಾತ್ರ ನಾಭಿಯ ಕೆಳಗೆ (ಹೊಕ್ಕಳ ಸ್ಥಾನ ಕೆಳಗೆ) ಭಸ್ಮಧಾರಣ ಅಥವಾ ಭಸ್ಮಲೇಪನ ವಗೈರೆ ಮಾಡಿಕೊಳ್ಳಬಾರದು. ವಿಶೇಷ ಮಹತಿಯನ್ನು ಹಿಂದೆ"ಭಸ್ಮ-ಮಹಿಮೆ" ಪ್ರಕರಣದಲ್ಲಿ ಹೇಳಲಾಗಿದೆ.

## ತ್ರಿಪುಂಡ ಧಾರಣ ಸ್ಥಾನ ೧೫

ಓಂ ಶಿವಾಯನಮಃ ಎಂದು ಮಸ್ತಕದಲ್ಲಿ ಧರಿಸಿಕೊಳ್ಳಬೇಕು.
ಓಂ ಮಹೇಶ್ವರಾಯನಮಃ ,, ಹಣೆಯಲ್ಲಿ ಧರಿಸಿಕೊಳ್ಳಬೇಕು.
ಓಂ ರುದ್ರಾಯನಮಃ ,, ಎರಡೂ ಕಿವಿಗಳಲ್ಲಿ ಧರಿಸಿಕೊಳ್ಳಬೇಕು.
ಓಂ ಶ್ರೀಕಂಠಾಯನಮಃ ,, ಕಂಠದಲ್ಲಿ ಧರಿಸಿಕೊಳ್ಳಬೇಕು.
ಓಂ ಶಂಭವೇನಮಃ ,, ಎರಡೂ ಭುಜಗಳಲ್ಲಿ ಧರಿಸಬೇಕು.
ಓಂ ಈಶ್ವರಾಯನಮಃ ,, ಹೃದಯದಲ್ಲಿ ಧರಿಸಿಕೊಳ್ಳಬೇಕು.
ಓಂ ಮಹಾದೇವಾಯನಮಃ ,, ನಾಭಿಯಲ್ಲಿ ಧರಿಸಿಕೊಳ್ಳಬೇಕು.
ಓಂ ಪಶುಪತಯೇನಮಃ ,, ಬೆನ್ನಿನಲ್ಲಿ ಧರಿಸಿಕೊಳ್ಳಬೇಕು.
ಓಂ ಶಂಕರಾಯನಮಃ ,, ಎರಡೂ ಮೊಳಕೈಯಲ್ಲಿ ಧರಿಸಿಕೊಳ್ಳಬೇಕು.
ಓಂ ವೃಷಧ್ವಜಾಯನಮಃ ,, ಹೆಗಲಿನಲ್ಲಿ ಧರಿಸಿಕೊಳ್ಳಬೇಕು.
ಓಂ ಪರಮಾತ್ಮನೇನಮಃ ,, ಎರಡೂ ಮುಂಗೈಗಳಲ್ಲಿ ಧರಿಸಿಕೊಳ್ಳಬೇಕು.

ಈ ಪ್ರಕಾರವಾಗಿ ಭಸ್ಮ ತ್ರಿಪುಂಡಧಾರಣ ಮಾಡಿಕೊಂಡ ಬಳಿಕ ರುದ್ರಾಕ್ಷ ಧಾರಣ ಮಾಡಿಕೊಳ್ಳಬೇಕು.

  

ಶನ್ನೋ ವ್ವಿಷ್ಣುರುರುಕ್ರಮಃ ॥ ೯ ॥ ಶನ್ನೋವ್ವಾತಃ ಪವತಾಗ್ಂ ಶನ್ನಸ್ತ ಪತು ಸೂರ್ಯಃ ॥ ಶನ್ನಃ ಕನಿಕ್ರದ್ದೇವಃ ಪರ್ಜನ್ಯೋ ಅಭಿವರ್ಷತು ॥೧೦॥ ಅಹಾನಿಶವ್ಭವಸ್ತುನಃ ಶಗ್ಂ ರಾತ್ರೀಃ ಪ್ರತಿ ಧೀಯತಾವರ್ ॥ ಶನ್ನಽ ಇನ್ದ್ರಾಗ್ನೀ ಭವತಾ ಮವೋಭಿಃ ಶನ್ನಽ ಇನ್ದ್ರಾವರುಣಾ ರಾತಹವ್ಯಾ ॥ ಶನ್ನಽ ಇನ್ದ್ರಾ ಪೂಷಣವ್ವಾಜ ಸಾತೌಶ ಮಿನ್ದ್ರಾ ಸೋಮಾ ಸುವಿತಾ ಯಶಂ ಯ್ಯೋಃ॥೧೧॥ ಶನ್ನೋದೇವೀ ರಭಿಷ್ಟಯಽ ಆಪೋಭವ ಸ್ತುಪೀತಯೇ॥ ಶಂಯ್ಯೋ ರಭಿಸ್ರವನ್ತುನಃ ॥ ೧೨ ॥ ಸ್ಯೋನಾಪೃಥಿವಿ । ನೋಭವಾನೃಕ್ಷರಾನಿವೇಶನೀ ॥ ಯಚ್ಛಾನಃ ಶರ್ಮಸಪ್ರಥಾಃ ॥ ೧೩ ॥ ಆಪೋಹಿ । ಷ್ಠಾ ಮಯೋಭುವಸ್ತಾನಽ ಊರ್ಜೇದ ಧಾತನ। ಮಹೇರಣಾ ಯಚಕ್ಷಸೇ ॥೧೪॥ ಯೋವಃ ಶಿವತಮೋ ರಸ ಸ್ತಸ್ಯಭಾ ಜಯತೇಹನಃ। ಉಶತೀರವ ಮಾತರಃ ॥೧೫॥ ತಸ್ಮಾಂ ಅರಙ್ಗಮಾ ಮವೋಯಸ್ಯಕ್ಷಯಾಯ ಜಿನ್ವಥ। ಆಪೋಜನಯಥಾಚನಃ ॥ ೧೬ ॥ ದ್ಯೌಃ ಶಾನ್ತಿರನ್ತರಿಕ್ಷಗ್ಂ ಶಾನ್ತಿಃ ಪೃಥವೀ ಶಾನ್ತಿಃ ರಾಪಃ ಶಾನ್ತಿ ರೋಷಧಯಃ ಶಾನ್ತಿಃ॥ ವನಸ್ಪತಯಃ ಶಾಂತಿರ್ವಿಶ್ವೇದೇವಾಃ ಶಾನ್ತಿಃ ಬ್ರಹ್ಮ ಶಾನ್ತಿಃ ಸರ್ವಗ್ಂ ಶಾನ್ತಿಃ ಶಾನ್ತಿದೇವ ಶಾನ್ತಿಃ ಸಾಮಾಶಾನ್ತಿರೇಧಿ ॥೧೭॥ ದೃತೇದೃಗ್ಂ ಹಮಾಮಿ ತ್ರಸ್ಯ ಮಾಚಕ್ಷುಷಾ ಸರ್ವಾಣಿ ಭೂತಾನಿ ಸಮೀಕ್ಷನ್ತಾಮ್ ಮಿತ್ರಸ್ಯಾಹಞ್ಚ ಕ್ಷುಷಾ ಸರ್ವಾಣಿ ಭೂತಾನಿ ಸಮೀಕ್ಷೇ ॥ ಮಿತ್ರಸ್ಯ ಚಕ್ಷುಷಾ ಸಮೀಕ್ಷಾ ಮಹೆ ॥೧೮॥ ದೃತೆದೃಗ್ಂ ಹಮಾ। ಜ್ಯೋಕ್ತೆ ಸನ್ದೃಶಿಜೀವ್ಯಾಸ ಇಜ್ಯೋಕ್ತೆ ಶಿಜೀವ್ಯಾಸಮ್ ॥೧೯॥ ನಮಸ್ತೇ ಹರಸೇಶೋಚಿಷೇ ನಮಸ್ತೇಽ ಅಸ್ತ್ವರ್ಚಿಷೇ ಅನ್ಯಾಂಸ್ತೇಽ ಅಸ್ಮತ್ತಪನ್ತು ಹೇತಯಃ ಪಾವಕೋ ಅಸ್ಮಭ್ಯಗ್ಂ ಶಿವೋಭವ ॥೨೦॥ ನಮಸ್ತೇ ಅಸ್ತು ವಿದ್ಯುತೇ ನಮಸ್ತೇಽ ಸ್ತನಯಿತ್ನವೆ ॥ ನಮಸ್ತೇ ಭಗವನ್ನಸ್ತು ಯತಃಸ್ವಃ ಸಮೀಹಸೇ ॥೨೧॥ ಯತೋಯತಃ ಸಮೀಹಸೆ ತತೋ ನೋಽಭಯಙ್ಕುರು॥ ಶನ್ನಃ ಕುರುಪ್ರಜಾ ಪ್ರಜಾಭ್ಯೋಭಯನ್ನಃ ಪಶುಭ್ಯಃ ॥೨೨॥ ಸುಮಿತ್ರಿಯಾಽನ ಆಪಽಜಷಧಯಃ ಸನ್ತು ದುರ್ಮಿತ್ರಿ ಯಾಸ್ತಸಸ್ಮೈ ಸನ್ತುಯೋಸ್ಮಾನ್ದ್ವೇಷ್ಟಿಯಞ್ಚವಯ ದ್ವಿಷ್ಮಃ ॥೨೩॥ ತಚ್ಚಕ್ಷುರ್ದೇವ ಹಿತಮ್ಪು ರಸ್ತಾಚ್ಛುಕ್ರ ಮುಚ್ಚರತ್॥ ಪಶ್ಯೇಮಶರದಃ ಶತ ಜೀವೇಮ ಶರದಃ ಶತಗ್ಂ ಶೃಣುಯಾಮ ಶರದಃ ಶತಂಪ್ರಬ್ರವಾಮಶರದಃ ಶತಮದಿನಾಃ ಸ್ಯಾಮ ಶರದಃ ಶತಮ್ಭೂಯಶ್ಚಶರದಃ ಶತಾತ್ ॥ ೨೪ ॥

॥ ಇತಿ ರುದ್ರೇ ಶಾನ್ತ್ಯಧ್ಯಾಯ ಸಮಾಪ್ತಿ ॥

## ಶ್ರೀ ರುದ್ರ ಸ್ವಸ್ತಿ ಪ್ರಾರ್ಥನಾ ಮಂತ್ರಾಧ್ಯಾಯ

ಹರಿಃ ಓಂ ಸ್ವಸ್ತಿನಽ ಇನ್ದ್ರೋವೃದ್ಧಶ್ರವಾಃ ಸ್ವಸ್ತಿನಃ ಪೂಷಾ ವಿಶ್ವ ವೇದಾಃ ॥ ಸ್ವಸ್ತಿನಸ್ತಾರ್ಕ್ಷ್ಯೋಽ ಅರಿಷ್ಟನೇಮಿಃ ಸ್ವಸ್ತಿನೋಬೃಹಸ್ಪತಿ ರ್ದ

ಧಾತು ||೧|| ಓಂ ಪಯಃ ಪೃಥಿವ್ಯಾಂ ಪ್ಪಯಃ ಓಷಧೀಷುಪಯೋ ದಿವ್ಯನ್ತರಿಕ್ಷೇ ಪಯೋಧಾಃ। ಪಯಸ್ವತೀಃ ಪ್ರದಿಶಸನ್ತುಮಹ್ಯಮ್ ||೨|| ಓಂ ವಿಷ್ಣೋ ರರಾಟಮಸಿ ವಿಷ್ಣೋಃ ಶ್ನಪ್ತ್ರೇಸ್ಥೋ ವಿಷ್ಣೋಸ್ಸ್ಯೂರಸಿ ವಿಷ್ಣೋರ್ಧ್ರುವೋಸಿ || ವೈಷ್ಣವ ಮಸಿ ವಿಷ್ಣವೇತ್ವಾ || ವೈಷ್ಣವಮಸಿ ವಿಷ್ಣವೇತ್ವಾ ||೩|| ಓಂ ಅಗ್ನಿರ್ದ್ದೇವತಾ ವ್ವಾತೋದೇವತಾ ಸೂರ್ಯೋ ದೇವತಾ ಚಂದ್ರಮಾ ದೇವತಾವ್ವಸವೋ ದೇವತಾ ರುದ್ರಾ ದೇವತಾ ದಿತ್ಯಾ ದೇವತಾ ಮರುತೋ ದೇವತಾ ವಿಶ್ವೇದೇವಾ ದೇವತಾ ಬೃಹಸ್ಪತಿರ್ದ್ದೇವತೇನ್ದ್ರೋ ದೇವತಾ ವ್ವರುಣೋ ದೇವತಾ ||೪|| ಓಂ ಸದ್ಯೋಜಾತಂ ಪ್ರಪದ್ಯಾಮಿ ಸದ್ಯೋಜಾತಾಯ ವೈ ನಮೋ ನಮಃ ಭವೇ ಭವೇನಾತಿ ಭವೇ ಭವಸ್ವಮಾಂ ಭವೋದ್ಭವಾಯ ನಮಃ || ೫ || ವಾಮ ದೇವಾಯ ನಮೋ ಜ್ಯೇಷ್ಠಾಯ ನಮೋ ಶ್ರೇಷ್ಠಾಯ ನಮೋ ರುದ್ರಾಯ ನಮಃ ಕಾಲಾಯ ನಮಃ ಕಲವಿಕರಣಾಯ ನಮಃ ಬಲ ವಿಕರಣಾಯ ನಮೋ ಬಲಾಯ ನಮೋ ಬಲಪ್ರಮಥನಾಯ ನಮಃ ಸರ್ವ ಭೂತದ ಮನಾಯ ನಮೋ ಮನೋನ್ಮನಾಯ ನಮಃ || ೬ || ಅಘೋರೇಭ್ಯೋ ಥಘೋರೇಭ್ಯೋ ಘೋರ ಘೋರತರೇಭ್ಯಃ || ಸರ್ವೇಭ್ಯಃ ಸರ್ವಶರ್ವೇಭ್ಯೋ ನಮಸ್ತೇ ಅಸುರುದ್ರ ರೂಪಭ್ಯಃ || ೭ || ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ || ತನ್ನೋರುದ್ರಃ ಪಚೋದಯಾತ್ || ೮ || ಈಶಾನಃ ಸರ್ವ ವಿದ್ಯಾನಾ ಮಿಶ್ವರಃ ಸರ್ವ ಭೂತಾನಾಮ್ || ಬ್ರಹ್ಮಾಧಿಪತಿ ಬ್ರಹ್ಮಣೋಧಿಪತಿ ಬ್ರಹ್ಮಾ ಶಿವೋಮೇ ಅಸ್ತು ಸದಾಶಿವೋಮ್ || ೯ || ಓಂ ಶಿವೋನಾಮಾಸಿಸ್ವಧಿತಿಸ್ತೇಪಿತಾ ನಮಸ್ತೆ ಅಸ್ತು ಮಾಮಾಹಿಗ್‌ಂ ಸೀಃ || ನಿವರ್ತ್ತಯಾಮ್ಯಾಯುಷೇನ್ನಾದ್ಯಾಯ ಪ್ರಜನನಾಯ ರಾಯಸ್ಪೋಷಾಯ ಸುಪ್ರಜಾಸ್ತ್ವಾಯ ಸುವೀರ್ಯ್ಯಾಯ || ೧೦ || ಓಂ ವಿಶ್ವಾನಿದೇವ ಸವಿತ ದ್ದುರಿತಾನಿ ಪರಾಸುವ || ಯದ್ಭದ್ರನ್ತನ್ನ ಆ ಸುವ || ೧೧ || ಓಂ ದ್ಯೌಃ ಶಾನ್ತಿರನ್ತರಿಕ್ಷಗ್‌ಂ ಶಾನ್ತಿಃ ಪೃಥಿವೀ ಶಾನ್ತಿರಾಪಃ ಶಾನ್ತಿರೋಷಧಯಃ ಶಾನ್ತಿಃ || ವ್ವನಸ್ಪತಯಃ ಶಾನ್ತಿರ್ವ್ವಿಶ್ವೇದೇವಾಃ ಶಾನ್ತಿ ಬ್ಬ್ರಹ್ಮಶಾನ್ತಿಃ ಸರ್ವಗ್‌ಂ ಶಾನ್ತಿಃ ಶಾನ್ತಿರೇವಶಾನ್ತಿಃ ಸಾಮಾಶಾನ್ತಿರೇಧಿ || ೧೨ || ಓಂ ಸರ್ವೇಷಾಂ ವಾಏಷ ವ್ವೇದಾನಾಗ್‌ಂ ರಸೋಯತಾಮ ಸರ್ವೇಷಾಮೇವೈನ ಮತದ್ವೇ ದಾನಾಗ್‌ಂ ರಸೇನಾಭಿಷಿಞ್ಚತಿ || ೧೩ ||

ಓಂ ಶಾನ್ತಿಃ ಶಾನ್ತಿಃ ಸುಶಾನ್ತಿರ್ಭವತು ಸರ್ವಾರಿಷ್ಟ ಶಾನ್ತಿರ್ಭವತು || ಅನೇನ ರುದ್ರಾಭಿಷೇಕ ಕರ್ಮಣಾ ಕೃತೇನ ಶ್ರೀ ಭವಾನಿ ಶಙ್ಕರ ಮಹಾರುದ್ರಃ ಪ್ರೀಯತಾಂ ನ ಮಮ || ಓಂ ಸದಾಶಿವಾರ್ಪಣಮಸ್ತು || ಇತಿ ಸ್ವಸ್ತಿ ಪ್ರಾರ್ಥನಾ ಮಂತ್ರಾಧ್ಯಾಯ ಸಮಾಪ್ತಿಯಾದುದು ||

# ವೇದೋಕ್ತ ಪುಷ್ಪಾಂಜಲಿ ಮಂತ್ರ.

ಯಜ್ಞೇನ ಯಜ್ಞ ಮಯ ಜಂತ ದೇವಾ ಸ್ತಾನಿ ಧರ್ಮಾಣಿ ಪ್ರಥಮಾ ನ್ಯಾಸನ | ತೇಹ ನಾಕಂ ಮಹಿಮಾನಃ | ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ || ೧ || ರಾಜಾಧಿರಾಜಾಯ ಪ್ರಸಹ್ಯ ಸಾಹಿನೇ| ನಮೋ ವಯಂ ವೈಶ್ರವಣಾಮ ಕರ್ಮಹೆ | ಸಮೇಕಾಮಾನ್ | ಕಾಮಕಾ ಮಾಯ ಮಹ್ಯಂ ಕಾಮೇಶ್ವರೋ ವೈಶ್ರವಣೋದಧಾತು || ಕುಬೇರಾಯ ವೈಶ್ರವಣಾಯ ಮಹಾದೇವಾಯ ನಮಃ || ಹರಃ ಓಂ || ಸ್ವಸ್ತಿ | ಸಾಮ್ರಾಜ್ಯಂ ಭೋಜ್ಯಂ | ಸ್ವಾರಾಜ್ಯಂ | ವೈರಾಜ್ಯಂ ಪಾರಮೆಷ್ಟ್ಯಂ | ರಾಜ್ಯಂ ಮಹಾರಾಜ್ಯಮಾಧಿಪತ್ಯ ಮಯಂ ಸಮಂತ ಪರ್ಯ್ಯಾ ಈ ಶಾತ್ಸಾರ್ವಭೌಮಃ | ಸಾರ್ವ್ವಾಯುಷ | ಅಂತಾದಾ ಪರಾರ್ಧಾತ್ | ಪೃಥಿವ್ಯೈ ಸಮುದ್ರ ಪರ್ಯಂತಾ | ಯೇಕರಾಡಿತಿ ತದಪ್ಯೇಷಃ ಶ್ಲೋಕೋಭಿಗಿತೋ ಮರುತಃ ಪರಿಪೇಷ್ಟಾರೋ | ಮರುತ್ತಸ್ಯಾವ ಸಂಗ್ರಹೇ|| ಆವಿಕ್ಷಿತಸ್ಯ ಕಾಮ ಪ್ರೇರ್ವಿಶ್ವೆ ದೇವಾಃ ಸಭಾಸದ ಇತಿ ಮಂತ ಪುಷ್ಪಾಂಜಲಿಂ ಸಮರ್ಪಯಾಮಿ ||

|| ಜಯ ನಮಃ ಪಾರ್ವತೀ ಪತೇ ಹರ ಹರ ಮಹಾದೇವ ||

# ಭೋಜನ ಸಂಕಲ್ಪ.

ಏಕೋ ರುದ್ರೋ ಮಹದ್ಭೂತಃಪ್ರತ್ಯಗ್ಭೂತನೇಕಶಃ ಭೂತೇಷು ಭಗವಾನ್ ಶಂಭುರ್ಭೂತಾತ್ಮಾ ಸರ್ವ ಭಾವನಃ | ತ್ರಿಷುಧಾಮ ಸುಯದ್ಭೋಗ್ಯಂ ಭೋಕ್ತಾ ಭೋಗಸ್ಯ ಯೋ ಭವೇತ್ || ಲಿಂಗಾರ್ಪಿತೋಪ ಭೋಗೇನ ನಿರ್ಲೆ ಪೋ ಸೋನ ಸಂಶಯಃ || ಅನೇನ (                    )ಯಜಮಾನಕೃತ ಗಣ ಸಮಾರಾಧನೇನ ಭೂ ರುದ್ರ ಶಾಬ್ದಿತ ನಿರಂಜನ ಜಂಗಮಾಸ್ತೃಪ್ಯಂತಾಂ | ತನ್ಮುಖೇನ ಸಕಲ ಚರಚರಾತ್ಮಕ ಪ್ರಪಂಚ ಸ್ವಶರೀರಗಸ್ಸಾಂಬಸದಾ ಶಿವಾಃ ಪ್ರಿಯತಾಂ || ಜಯ ನಮಃ ಪಾರ್ವತೀ ಪತೇ ಹರ ಹರ ಮಹಾದೇವ ||

ಹೀಗೆಂದು ಸಂಕಲ್ಪವನ್ನು ಮಾಡಿ ಶಿಷ್ಯನಿಗೆ ಆಶೀರ್ವಾದ ಮಾಡಿ ಊಟ ಮಾಡಬೇಕು. ಸರ್ವರೂ ಲಿಂಗಕ್ಕೆ ನೈವೇದ್ಯವನ್ನು ಹಿಡಿದುಕೊಂಡು ಕೆಳಗೆ ಬರೆದ ವಚನಗಳನ್ನು ನುಡಿಯುತ್ತ ಊಟ ಮಾಡಬೇಕು.

೧) ಮೌನದಿಂದುಂಬುವದು ಆಚಾರವಲ್ಲಯ್ಯ, ಲಿಂಗಾರ್ಪಿತವಾದ ಬಳಿಕ ತುತ್ತಿಗೊಮ್ಮೆ ಶಿವಶರಣರೆನ್ನುತ್ತಿರಬೇಕು. ಕರಣವೃತ್ತಿಗಳು ಅಡಗು ವವು. ನಮ್ಮ ಕೂಡಲ ಸಂಗನ ನೆನೆಯುತ್ತುಂಡರೆ.

೨) ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ ಮಾಡುವ ನೀಡುವ ನಿಜಗುಣವುಳ್ಳವರೇ ಕೂಡಿಕೊಂಬ ನಮ್ಮ ಕೂಡಲ ಸಂಗಮದೇವಾ.

೩) ಕಲ್ಲನಾಗರ ಕಂಡರೆ ಹಾಲನೆರೆ ಎಂಬರು ದಿಟನಾಗರ ಕಂಡರೆ ಕೊಲ್ಲೆಂಬರಯ್ಯ ಉಂಬ ಜಂಗಮ ಬಂದರೆ ನಡೆ ಎಂಬರು. ಉಣ್ಣದ ಲಿಂಗಕ್ಕೆ ಬೋನವ ಹಿಡಿ ಎಂಬರಯ್ಯ ಕೂಡಲಸಂಗಮದೇವಾ.

೪) ದಯವಿಲ್ಲದ ಧರ್ಮವದಾವುದಯ್ಯ ? ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ ದಯವೇ ಧರ್ಮದ ಮೂಲವಯ್ಯ, ಕೂಡಲಸಂಗಯ್ಯನಂತಲ್ಲದೊಲ್ಲನಯ್ಯ.

೫) ಕಾಗೆ ಒಂದ ಅಗಳ ಕಂಡರೆ ಕರೆಯದೆ ತನ್ನ ಬಳಗವನು ? ಕೋಳಿ ಒಂದು ಕುಟಕ ಕಂಡರೆ ಕರೆಯದೇ ತನ್ನ ಕುಲವನೆಲ್ಲವ? ಶಿವಭಕ್ತನಾಗಿ ಭಕ್ತಿ ಪಕ್ಷವಿಲ್ಲದಿದ್ದರೆ ಆ ಕಾಗೆ ಕೋಳಿಗಿಂತ ಕರಕಷ್ಟ ಕೂಡಲಸಂಗಮದೇವಾ.

೬) ದೇವಲೋಕ ಮೃತ್ಯುಲೋಕವೆಂಬುದು ಬೇರಿಲ್ಲ ಕಾಣಿರೋ ಸತ್ಯವ ನುಡಿವದೇ ದೇವಲೋಕ. ಮಿಥ್ಯವ ನುಡಿವುವೇ ಮರ್ತಲೋಕ. ಆಚಾರವೇ ಸ್ವರ್ಗ, ಅನಾಚಾರವೇ ನರಕ. ಇದಕ್ಕೆ ನೀವೇ ಪ್ರಮಾಣ ಕೂಡಲ ಸಂಗಮದೇವಾ.



# ಷಷ್ಠ—ರತ್ನ

## ಸರ್ವ ದೇವ ಪೂಜಾ ಪ್ರಕರಣ

### ಸಂಕಲ್ಪ-ವಿಧಾನ.

ಪ್ರತಿ ನಿತ್ಯದಂತೆ ಸೂರ್ಯೋದಯಕ್ಕಿಂತ ಮೊದಲು ಎದ್ದು ಇಷ್ಟ ದೇವ ಸ್ತುತಿಯನ್ನು ಮಾಡಿ, ನಿತ್ಯ ಕರ್ಮಾದಿಗಳನ್ನೂ ಹಾಗೂ ಸ್ನಾನ ಪೂಜಾದಿಳನ್ನೂ ಮುಗಿಸಿಕೊಂಡು ಶುಚಿರ್ಭೂತನಾಗಿ ಪೂಜೆಗೆ ಬೇಕಾಗುವ ಸರ್ವ ಸಾಮಗ್ರಿಗಳನ್ನು ಸಂಗ್ರಹಿಸಿಕೊಂಡು, ಯೋಗ್ಯ ಆಸನದ ಮೇಲೆ ಕುಳಿತು ಆಚಮನ ಪ್ರಾಣಾಯಾಮಗಳನ್ನು ಮಾಡಿ, ತನ್ನ ಮನೋ ಬಯಕೆಯು ಈಡೇರಲೆಂದು ಆರಾಧಿಸುವ ದೇವ ಪೂಜಾ ಸಂಕಲ್ಪವನ್ನು (ಹಿಂದೆ ಹೇಳಿದಂತೆ) ಮಾಡಿ, ಪುರುಷರಿದ್ದರೆ—

"ಅಸ್ಯಂ ಶುಭ ತಿಥೌ ಮಮ ಆತ್ಮನಃ ವೇದೋಕ್ತವಾಪುರಾಣೋಕ್ತ ಫಲಪ್ರಾಪ್ತ್ಯರ್ಥಂ, ಸಮಸ್ತ ಮಂಗಲ ಪ್ರಾಪ್ತ್ಯರ್ಥಂ, ಸಮಸ್ತಾಭ್ಯುದಯಾ

ರ್ಥಂ ಅಮುಕ ದೇವತಾ (ಆರಾಧಿಸುವ ದೇವರ ಹೆಸರನ್ನು ಅಂದು) ಪ್ರೀತ್ಯರ್ಥಂ ಯಾಧಾ ಮಿಲಿತೋಪಚಾರದ್ರವ್ಯೈಃ ಧ್ಯಾನ ವಾಹನಾದಿ ಷೋಡಶೋಪಚಾರ ದ್ರವ್ಯೈಃ ಪೂಜಾಂ ಕರಿಷ್ಯೇ'' ಆರಬ್ಧಸ್ಯ ಕರ್ಮಣಃ ನಿರ್ವಿಘ್ನೇನ ಪರಿಸಮಾಪ್ತ್ಯರ್ಥಂ ಆದೌ ಶ್ರೀ ಮಹಾ ಗಣಪತಿ ಪೂಜಾಂ ಕರಿಷ್ಯೇ" ಎಂದು ಸಂಕಲ್ಪಿಸಿ ಜಲವನ್ನು ಅರ್ಪಿಸಬೇಕು. ಒಂದು ಒಂದು ವೇಳೆ ಪೂಜೆ ಮಾಡುವವರು ಸ್ತ್ರೀಯರಿದ್ದರೆ:—

''ಮಮ ಇಹ ಜನ್ಮನಿ ಅನ್ಯ ಜನ್ಮನಿ ಜನ್ಮಾಂತರೇಷು ಚ ಅಖಂಡ ಸೌಭಾಗ್ಯಾದಿ ಮನೋವಾಂಛಿತ ಕಾಮನಾ ಸಿದ್ಧ್ಯರ್ಥಂ ಯಥಾ ಮಿಲಿತೋಪಚಾರದ್ರವ್ಯೈಃ ಧ್ಯಾನಾ ವಾಹನಾದಿ ಷೋಡಶೋಪಚಾರ ದ್ರವ್ಯೈಃ ಪೂಜಾಂ ಕರಿಷ್ಯೇ'' ಆರಬ್ಧಸ್ಯ ಕರ್ಮಣಃ ನಿರ್ವಿಘ್ನೇನ ಪರಿಸಮಾಪ್ತ್ಯರ್ಥಂ ಆದೌ ಶ್ರೀ ಮಹಾ ಗಣಪತಿ ಪೂಜಾಂ ಕರಿಷ್ಯೇ'' ಎಂದು ಜಲವನ್ನು ಅರ್ಪಿಸಬೇಕು.

# ಶ್ರೀಗಣಪತಿ ಪೂಜಾ ಕ್ರಮ.

ಪೂಜಕನು ತನ್ನ ಬಲಭಾಗಕ್ಕೆ ಒಂದು ಸೇರಿನಷ್ಟು ಅಕ್ಕಿಯನ್ನು ಹಾಕಿ ಅದನ್ನು ಚೌಕಾಗಿ ಮಾಡಬೇಕು. ತದನಂತರ ಅದರ ಮೇಲೆ ಅಷ್ಟದಲ ಕಮಲವನ್ನು ಬರೆದು ಬಂಗಾರ ಅಥವಾ ಬೆಳ್ಳಿಯಿಂದ ತಯಾರ ಮಾಡಿಸಿದ ಗಣಪತಿಯ ಮೂರ್ತಿಯನ್ನು ಸ್ಥಾಪಿಸಬೇಕು. ಅನಿರ್ವಾಹ ಪಕ್ಷದಲ್ಲಿ ಎರಡು ಬೆಟ್ಟಡಿಕೆಗಳನ್ನು ವೀಳ್ಯದೆಲೆಯ ಮೇಲೆ ಇಡಲು ಗಣಪತಿಯ ಸ್ಥಾಪನೆಯಾಗುವದು. ತದನಂತರ ಆ ಬೆಟ್ಟಡಿಕೆಯೇ ಗಣಪತಿಯೆಂದು ಭಾವಿಸಿ ಪೂಜೆಯನ್ನು ಸಾಂಗಗೊಳಿಸಬೇಕು. ಮೊದಲು ಗಣಪತಿಯನ್ನು ಆವಾಹನ ಮಾಡಬೇಕು.

## ಆವಾಹನ ಮಂತ್ರ.

''ವಿನಾಯಕಂ ಮಹಾ ಪುಣ್ಯಂ ಸರ್ವ ವಿಘ್ನ ವಿನಾಶನಂ ।
ಲಂಬೋದರಂ ತ್ರಿನೇತ್ರಂಚ ಶಮಾಹ್ವಯಾಮ್ಯ ಹಮ್ ॥

ಓಂ ಗಣಾನಾಂತ್ವಾ ಗಣಪತಿಗ್ಂ ಹವಾಮಹೇ ಪ್ರಿಯಾಣಾಂತ್ವಾ ಪ್ರಿಯಪತಿಗ್ಂ ಹವಾಮಹೇ ನಿಧೀನಾಂ ತ್ವಾ ನಿಧಿಪತಿಗ್ಂ ಹವಾಮಹೇವ ಸೋಮಮ । ಆಹಮಜಾನಿ ಗರ್ಭಧಮಾತ್ವಮಜಾಸಿ ಗರ್ಭದಮ್ ॥ ೧॥ ಓಂ ಭೂಃ ಗಣಪತಿ ಮಾವಾಹಯಾಮಿ, ಓಂ ಭುವಃ ಗಣಪತಿ ಮಾವಾಹಯಾಮಿ ಓಂ ಸ್ವಃ ಗಣಪತಿಮಾವಾಹಯಾಮಿ'' ಎಂದು ಆಹ್ವಾನ ಮಾಡಿ—

''ಸ್ವಾತ್ಮಸಂಸಂಸ್ಥಮಜಂ ಶುದ್ಧಂ ತ್ವಾ ಮಧ್ಯ ಗಣನಾಯಕ ।
ಅರಣಾವಿವ ಹವ್ಯಾಶ ಮೂರ್ತಿ ಮಾವಾಹಯಾಮ್ಯಹಂ ॥

ಓಂ ಭೂರ್ಭುವಃ ಸ್ವರೋಂ । ಸಶಕ್ತಿನಾಂಗಸಾಯುಧ ಸಹ ವಾನ ಸಪರಿವಾರ ಮಹಾ ಗಣಾಧೀಶ್ವರಾ ತ್ರಾ ಗಚ್ಛಾ ಗಚ್ಛ । ಆವಾಹಯಾಮಿ ಆವಾಹಿತೋಭವ । ಸ್ಥಾಪಯಾಮಿ ಸ್ಥಾಪಿತೋಭವ । ಸನ್ನಿಹಿತೋಭವ । ಸಮ್ಮುಖೋಭವ ಅವಕುಂಠಿತೋಭವ । ವರದೋಭವ" ಹೀಗೆಂದು ಷಣ್ಮುದ್ರೆಯನ್ನು ತೋರಿಸಬೇಕು. ಆ ಬಳಿಕ—

"ಏಕ ದಂತಾಯ ವಿದ್ಮಹೇ ವಕ್ರತುಂಡಾಯಧೀಮಹಿ ।
ತನ್ನೋ ವಿಘ್ನೇಶ್ವರಃ ಪ್ರಚೋದಯಾತ್ ॥

ಹೀಗೆಂದು ತದನಂರಗಾಂ ಹೃದಯಾ ನಮಃ ಗೀಂ ಶಿರಸೇಸ್ವಹಾ । ಗೂಂ ಶಿಖಾಯೈವಷಟ್ ಗೈಂ ಕವಚಾಯುಹುಂ । ಗೌಂ ನೇತ್ರತ್ರಯಾಯ ಚೌಷಟ್ । ಗಃ ಅಸ್ತ್ರಾಯಫಟ್" ಹೀಗೆ ಷಡಂಗನ್ಯಾಸವನ್ನು ಮಾಡಿ "ಭೂರ್ಭುಸ್ವಃ ರೋಂ" ಎಂದು ದಿಗ್ಬಂಧನವನ್ನು ಮಾಡಿ ದಶದಿಕ್ಕುಗಳಿಗೆ ಶುದ್ಧೋದಕವನ್ನು ಪ್ರೋಕ್ಷಣೆ ಮಾಡಬೇಕು. ಆನಂತರ ಧ್ಯಾನ ಮಾಡಬೇಕು.

ಧ್ಯಾನ ಮಂತ್ರ

"ಸುಮುಖಶ್ಚೈಕದಂತಶ್ಚ ಕಪಿಲೋಗಜಕರ್ಣಃ ।
ಲಂಬೋದರಶ್ಚ ವಿಕಟೋ ವಿಘ್ನನಾಶೋ ವಿನಾಯಕಃ ॥ ೧ ॥
ಧೂಮ್ರಕೇತುರ್ಗಣಾಧ್ಯಕ್ಷೋ ಭಾಲಚಂದ್ರೋಗಜಾನನಃ ।
ದ್ವಾದಶೈತಾನಿ ನಾಮಾನಿಯಃ ಪಠೇಚ್ಛೃಣುಯಾದಪಿ ॥ ೨ ॥
ವಿದ್ಯಾರಂಭೇ ವಿವಾಹೇಚ ಪ್ರವೇಶೋನಿರ್ಗಮೇ ತಥಾ ।
ಸಂಗ್ರಾಮೇ ಸಂಕಟೇಚೈವ ವಿಘ್ನಸ್ತಸ್ಯ ನ ಜಾಯತೇ ॥ ೩ ॥
ಅವಿಘ್ನಂಕುರು ಮೇ ದೇವ ಸರ್ವ ಕಾರ್ಯೇಷು ಸರ್ವದಾ ।
ಯಾತ್ರಾ ಮಂಗಲ ಸಿದ್ಧ್ಯರ್ಥಮೇಕದಂತ ನಮೋಽಸ್ತುತೇ ॥ ೪ ॥
ಶುಕ್ಲಾಂಬರ ಧರಂ ದೇವಂ ಶಶಿವರ್ಣಂಚ ಚತುರ್ಭುಜಮ್ ।
ಪ್ರಸನ್ನ ವದನಂ ಧ್ಯಾಯೇತ್ಸರ್ವ ವಿಘ್ನೋಪಶಾಂತಯೇ ॥ ೫ ॥

ಹೀಗೆಂದು ಗಣಪತಿಯ ಧ್ಯಾನವನ್ನು ಮಾಡಿದ ನಂತರ "ಗಂಗಣಪತಯೇ ನಮಃ" ಎಂದು ಜಪವನ್ನು ಮಾಡಬೇಕು. ಆ ಬಳಿಕ (ಹಿಂದೆ ಹೇಳಿದಂತೆ) ಷೋಡಷೋಪಚಾರಗಳಿಂದ ಗಣಪತಿಯನ್ನು ಪೂಜಿಸಬೇಕು. ಆ ಮೇಲೆ

ವಕ್ರತುಂಡ ಮಹಾಕಾಯ ಸೂರ್ಯಕೋಟಿ ಸಮಪ್ರಭ ।
ನಿರ್ವಿಘ್ನಂ ಕುರುಮೇ ದೇವ ಸರ್ವ ಕಾರ್ಯೇಷು ಸರ್ವದಾ ॥
ಯಸ ಸ್ಮೃತ್ಯಾಚ ನಾಮೋಕ್ತ್ಯಾ ತಪೋಧೀಕ್ಷಾ ಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋವಂದೇ ಸದಾಶಿವಂ ॥

ಇತಿ ಗಜಪತಿ ಪೂಜನೇನ ಶ್ರೀ ಸಾಂಬಸದಾ ಶಿವಃ ಪ್ರಿತೋ ಭವತು" ಎಂದು ಗಣಪತಿಗೆ ನಮಸ್ಕರಿಸಬೇಕು.

॥ ಇತಿ ಗಣಪತಿ ಪೂಜಾ ಸಮಾಪ್ತಂ ॥

## ಸರ್ವದೇವ ಆವಾಹನ ಮಂತ್ರ

ಆ ಗಚ್ಛದೇವ ದೇವ ದೇವೇಶ ತೇಜೋಃ ರಾಶೆ ಜಗತ್ಪತೇಃ ।
ಕ್ರಿಯಾಣಾಂ ಮಯಾಪೂಜಾಂ ಗೃಹಾಣ ಸುರ ಸತ್ತಮ ॥
(ಅಮುಕ ದೇವಾಯ್ಯೆ ನಮಃ) ಆವಾಹನಂ ಸಮರ್ಪಯಾಮಿ ।
(ಇಷ್ಟ ದೇವರ ಹೆಸರನ್ನು ಅಂದು) ಹೀಗೆಂದು ಆಹ್ವಾನ ಮಾಡಬೇಕು.

## ಆಸನ ಮಂತ್ರ

ನಾನಾರತ್ನ ಸಮಾಯುಕ್ತಂ ಕಾರ್ತಸ್ಪರ ವಿಭೂಷಿತಂ ।
ಆಸನಂ ದೇವ ದೇವೇಶ ಪ್ರೀತ್ಯರ್ಥಂ ಪ್ರತಿಗೃಹ್ಯತಾಂ ॥
(ಅಮುಕ ದೇವತಾಯ್ಯೆ ನಮಃ)ಆಸನಾರ್ಥೇ ಬಿಲ್ವಪತ್ರಂ ಸಮರ್ಪಯಾಮಿ.

ಇನ್ನು ಅಭಿಷೇಕ ಪೂಜಾ ಮಂತ್ರಗಳನ್ನು ಹಿಂದಿನ ಪ್ರಕರಣದಲ್ಲಿದ್ದಂತೆ ಅಂದು ಪೂಜಾ ಮಾಡಬೇಕು. ಇನ್ನು ಸ್ತ್ರೀ ದೇವತೆಗಳನ್ನು ಪೂಜಿಸಬೇಕಾದರೆ ಕೆಲವು ವಿಶೇಷ ಮಂತ್ರಗಳನ್ನು ಅನ್ನಬೇಕಾಗುವದು ಅವುಗಳನ್ನು ಇಲ್ಲಿ ಕೆಳಗೆ ಉಲ್ಲೇಖಿಸಲಾಗಿದೆ.

## ಕುಂಕುಮ ಧಾರಣ ಮಂತ್ರ

ಹರಿದ್ರಾಚೂರ್ಣ ಸಂಯುಕ್ತಂ ಕುಂಕುಮಂ ಕಾಮದಾಯಕಂ ।
ವಸ್ತ್ರತಲಂಕಾರಂ ಸರ್ವಂ ದೇವಿತ್ವಂ ಪ್ರತಿಗ್ರಹ್ಯತಾಂ ॥
(ಓಂ ಅಮುಕದೇವಾಯ್ಯೆ ನಮಃ) ಕುಂಕುಮಂ ಧಾರಯಾಮಿ.

## ಹರಿದ್ರಾ (ಅರಿಷಪುಡಿ) ಧಾರಣ ಮಂತ್ರ

ಹರಿದ್ರಾ ಸ್ವರ್ಣವರ್ಣಾ ಭಾಸರ್ವ ಸೌಭಾಗ್ಯದಾಯನೀ ।
ಸರ್ವಾಲಂಕಾರ ಮುಖ್ಯಾಹಿ ದೇವಿತ್ವಂ ಪ್ರತಿಗೃಹ್ಯತಾಂ ॥
(ಓಂ ಅಮುಕ ದೇವತಾಯ್ಯೆ ನಮಃ) ಹರಿದ್ರಾ ಧಾರಯಾಮಿ ।

## ಕಜ್ಜಲ (ಕಾಡಿಗೆ) ಧಾರಣ ಮಂತ್ರ

ಕಜ್ಜಲಂ ಕಾಮಿಕಂ ರಮ್ಯಂ ಕಾಮಿನೀಃ ಕಾಮ ಸಂಭವಂ ।
ನೇತ್ರಯೋಃ ಭೂಷಣಾರ್ಥಾಯ ಕಜ್ಜಲಂ ಪ್ರತಿಗ್ರಹ್ಯತಾಂ ॥
(ಓಂ ಅ ದೇ ಯ್ಯೆ ನಮಃ) ಕಜ್ಜಲಂ ಧಾರಯಾಮಿ ।

## ಸಿಂಧೂರ ಧಾರಣ ಮಂತ್ರ.

ಉದೀರಾರುಣ ಸಂ ಕಾಶಂ ಜಪಾಕುಸುಮ ಸನ್ನಿಭಂ ।
ಸೀಮಂತ ಭೂಷಣಾರ್ಥಾಯ ಸಿಂಧೂರಂ ಪ್ರತಿಗೃಹ್ಯತಾಂ ॥
(ಓಂ ಅ ದೇ ಯ್ಯೆ ನಮಃ) ಸಿಂಧೂರಂ ಧಾರಯಾಮಿ.

### ಕಂಠಸೂತ್ರ ಧಾರಣ ಮಂತ್ರ.

ಮಾಂಗಲ್ಯ ತಂತುಮಣಿಭಿರ್ಯುಕ್ತಾ ಫಲ ವಿರಾಜಿತಂ ।
ಕಂಠಸ್ಯ ಭೂಷಣಾರ್ಥಾಯ ಪ್ರೀತ್ಯರ್ಥಂ ಪ್ರತಿಗೃಹ್ಯತಾಂ॥
(ಓಂ, ಆ, ದೇ, ಯ್ಯೈ ನಮಃ) ಕಂಠಸೂತ್ರಂ ಧಾರಯಾಮಿ.

### ಕಂಕಣ ಧಾರಣ ಮಂತ್ರ.

ಕಾಚಸ್ಯ ನಿರ್ಮಿತಂ ದಿವ್ಯಂ ಕಂಕಣಂಚ ಸುರೇಶ್ವರೀ ।
ಹಸ್ತಾಲಂ ಕರಣಾರ್ಥಾಯ ಕಂಕಣಂ ಪ್ರತಿಗೃಹ್ಯತಾಂ ॥
(ಓಂ ಆ ದೇ ಯ್ಯೈ ನಮಃ) ಕಂಕಣಧಾರಯಾಮಿ.

### ಕರ್ಣಕುಂಡಲ (ತಾಳಪತ್ರ) ಧಾರಣ ಮಂತ್ರ.

ನಾನಾಭರಣ ಶೋಭಾಢ್ಯ ನಾನಾ ರತ್ನೋಪ ಶೋಭಿತಂ ।
ಅರ್ಪಿತಂಚ ಮಯಾದೇವಿ ಕುಂಡಲಂ ಪ್ರತಿಗೃಹ್ಯತಾಂ ॥
(ಓಂ ಆ ದೇ ಯ್ಯೈ ನಮಃ) ಕರ್ಣಕುಂಡಲಂ ಧಾರಯಾಮಿ.

ಮುಂದೆ ಷೋಡಶೋಪಚಾರ ಪೂಜೆಯನ್ನು ಹಿಂದೆ ಹೇಳಿದಂತೆ ಮಾಡಬೇಕು.



## ಸ್ವಸ್ತಿ ಪುಣ್ಯಾಹ ವಾಚನ.

### ಷಡ್ದ್ರವ್ಯಗಳಿಂದ ಸಾರಣೆ ಮಾಡಿ ರಂಗವಲ್ಲಿಯಿಂದ ಅಲಂಕಾರ ಮಾಡಿದ ಪರಿಶುದ್ಧ ಸ್ಥಾನದಲ್ಲಿ:—

"ಮಹೀದ್ಯೌಃ ಪೃಥಿವೀಚ ನ ಇ ಮಂ ಮಿಮಕ್ಷತಾಂ । ಪಿಪೃ
ತಾನ್ನೋ ಭರೀಮಭಿಃ"

ಎಂಬ ಮಂತ್ರದಿಂದ ತನ್ನ ಎರಡೂ ಹಸ್ತಗಳಿಂದ ದಕ್ಷಿಣೋತ್ತರ ಭಾಗದ ಭೂಮಿಯನ್ನು ಮುಟ್ಟಿ ಜಪಿಸಿ, ಆ ದಕ್ಷಿಣೋತ್ತರ ಪ್ರದೇಶದಲ್ಲಿ—

"ಓಷಧಯಸ್ಸಂವದಂತೇ ಸೋಮೇನ ಸಹರಾಜ್ಞಾ ಯಸ್ಮೈ
ಕೃಣೋತಿ ಬ್ರಾಹ್ಮಣಸ್ತಗ್ಂ ರಾಜನ್ಪಾರಯಾಮಸಿ"

ಎಂಬ ಮಂತ್ರವನ್ನು ಉಚ್ಚರಿಸಿ ಬಾಳೇ ಎಲೆಗಳನ್ನು ಹಾಸಿ,

"ಯೇನತೋ ಕಾಯತನಯಾಮ ಧ್ಯಾನಂ ಬೀಜಂ ವಹಧ್ವೈಅಕ್ಷಿತಂ ।
ಅಸ್ಮಭ್ಯಂ ತದ್ವತ್ತನಯಧ್ವ ಈ ಮಹೇ । ರಾಧೋ ವಿಶ್ವಾಯ ಸೌಭಗಂ'

ಎಂಬ ಮಂತ್ರದಿಂದ ಆ ಬಾಳೇ ಎಲೆಗಳ ಮೇಲೆ ಬಳ್ಳ ಪರಿಮಿತವಾದ ಅಕ್ಕಿಯ ಎರಡು ಗುಡ್ಡೆಗಳನ್ನು ಇಟ್ಟು ಅವುಗಳ ಮೇಲೆ—

‘‘ಆಕಲಶೇಷು ಧಾವತಿ ಶ್ಯೇನೋ ವರ್ಮವಿಗಾಹತೇ
ಅಭಿ ದ್ರೋಣಾ ಕನಿಕ್ರದತ್’’
ಎಂಬ ಮಂತ್ರದಿಂದ ಆ ಅಕ್ಕಿಯ ಗುಡ್ಡೆಗಳ ಮೇಲೆ ಕಬ್ಬಿಣದ ಅಥವಾ ಮಣ್ಣಿನ ಎರಡು ಕಲಶಗಳನ್ನಿಟ್ಟು ಅವುಗಳಲ್ಲಿ,—
‘‘ಇಮಂ ಮೇ ಗಂಗೇ ಯಮುನೆ ಸರಸ್ವತಿ ಸುತುದ್ರಾಸ್ತೋಮಗ್ಂ
ಸಚತಾ ಪರುಷ್ಣಿಯಾ। ಅಸಿಕ್ನಿಯಾ ಮರುದ್ವೃಧೆ ವಿತಸ್ತಯಾರ್ಜೀಕಿ
ಯೆಶೃಣು ಹ್ಯಾಸು ಷ್ಟೊ ಮಯಾ’’
ಎಂಬ ಮಂತ್ರದಿಂದ ತೀರ್ಥೋದಕವನ್ನು ತುಂಬಿ,
‘‘ಗಂಧದ್ವಾರಾ ದುರಾಧರ್ಷಾಂ ನಿತ್ಯ ಪುಷ್ಟಾಂ ಕರಿಷಿಣೀಂ।
ಈಶ್ವರೀಗ್ಂ ಸರ್ವ ಭೂತಾನಾಂ ತಾಮಿ ಹೋಪಹ್ವಯೇ ಶ್ರಿಯಂ॥’’
ಎಂಬ ಮಂತ್ರದಿಂದ ಗಂಧವನ್ನು ಹಾಕಿ, ಅವುಗಳ ಮೇಲೆಯೂ ಗಂಧವನ್ನು ಹಚ್ಚಿ, ಪೂಮಾಲೆಗಳಿಂದ ಅಲಂಕರಿಸಬೇಕು. ಆ ಬಳಿಕ—
‘‘ಸಹಿ ರತ್ನಾನಿ ದಾಶುಕ್ಷೆಸುವಾತಿ ಸವಿತಾಭಗಃ
ತಂ ಭಾಗಂ ಚಿತ್ರ ಮೀಮಹೆ’’
ಎಂಬ ಮಂತ್ರದಿಂದ ಆ ಕಲಶಗಳಲ್ಲಿ ಪಂಚರತ್ನಗಳನ್ನು ಹಾಕಿ,
“ಪ್ರವೋಯಜ್ಞೇಷು ದೇವಯಂತೋ ಅರ್ಚಂದ್ಯಾವಾನಗ್ಂ
ಹೋಭಿಃ ಪೃಥಿವಿ ಇಷ್ಟದ್ಯೈ ಏಷಾಂ ಬ್ರಹ್ಮಣ್ಯ ಸಮಾನಿ ವಿಪ್ರಾವಿಷಿ
ಗ್ವಿಯಂತಿ ವನಿನೋನ ಶಾಖಾಃ’’
ಎಂಬ ಮಂತ್ರದಿಂದ ಮಾವಿನ ಚಿಗುರುಗಳಿಂದ ಅಲಂಕರಿಸಿ, ಆ ಬಳಿಕ-
ಕಾಂಡಾತ್ಕಾಂ ಡಾತ್ಪ್ರರೋಹಂತಿ ಪರುಷಃ ಪರುಷಃ ಪರಿ।
ಏವಾನೋ ದೂರ್ವೇ ಪ್ರತನ, ಸಹಸ್ರೇಣ ಶತೇನಚ’’
ಎಂಬ ಮಂತ್ರದಿಂದ ದರ್ಭೆಗಳನ್ನು ಇಟ್ಟು,—
‘‘ಹಿರಣ್ಯರೂಪಸ್ಸ ಹಿರಣ್ಯ ಸಂದೃಗ ಪಾನ್ನ ಪಾತ್ಸೇದುಹಿರ
ಣ್ಯ ವರ್ಣಃ। ಹಿರಣ್ಯಯಾತ್ಪರಿಯೋನೇರ್ನಿಷದ್ಯಾ
ಹಿರಣ್ಯಂ ದಾದತ್ಯಂ ನಮಸ್ಮೈ’’
ಎಂಬ ಮಂತ್ರದಿಂದ ಒಂದು ನಿಷ್ಕ ಅಂದರೆ ೯೦ ತೊಲಿ, ಅಥವಾ ಅರ್ಧ ನಿಷ್ಕ ಇಲ್ಲವೆ ತಮ್ಮ ಯೋಗ್ಯತೆಗೆ ಸಾಧ್ಯವಾದಷ್ಟು ಬಂಗಾರವನ್ನು ಆಕಳಶದಲ್ಲಿ ಹಾಕಿ—
‘‘ಪೂರ್ಣಾದರ್ವಿ ಪರಾಪತ ಸುಪೂರ್ಣಾಪುನುರಾಪಿತ।
ಏಸ್ನೇವ ವಿಕ್ರೀಣಾವಹ ಇಷಮೂರ್ಜಗ್ಂ ಶತಕ್ರತೋ॥
ಯಾಃ ಫಲಿನೀರ್ಯಾ ಅಫಲಾ ಅಪುಷ್ಪಯಾಶ್ಚ ಪುಷ್ಪಿಣೀಃ।
ಬೃಹಸ್ಪತಿ ಪ್ರಸೂತಾಸ್ತಾನೋ ಮುಚತ್ವಗ್ಂ ಹಸಃ॥

ಎಂಬ ಮಂತ್ರದಿಂದ ಕಲಶಗಳ ಮೇಲೆ ಟೆಂಗಿನಕಾಯಿಗಳನ್ನು ಇಟ್ಟು—

"ಯುವಾಸು ವಾಸಾಃ ಪರಿವೀತ ಆಗಾತ್ಸವು ಶ್ರೇಯಾ
ನ್ಭವತಿಜಾಯಮಾನಃ। ತಂ ಧೀರಾಸ್ಸಕವಯು
ಉನ್ನಯಂತಿ ಸ್ವಾಧೀ ಯೋ ಮನಸಾ ದೇವಯಂತಃ॥

ಎಂಬ ಮಂತ್ರದಿಂದ ಕಲಶಗಳ ಮೇಲೆ ಎರಡು ವಸ್ತ್ರಗಳನ್ನು, ಧರಿಸ ಬೇಕು. ಆ ಬಳಿಕ--

"ತಂ ತುತನ್ವನ್ರಜಸೋ ಭಾನುಮನ್ವಿಹಿ।
ಜ್ಯೋ ತಿಷ್ಮತಃ ಪಥೋರಕ್ಷಧಿಯಾ ಕೃತಾನ್।
ಅನುಲ್ಬಣಂ ಪಯಸಜೋಗುವಮಪ್ರೋ ಮನು-
ರ್ಭವ ಜನಯಾ ದೈವ್ಯಂಜನಂ"

ಎಂಬ ಮಂತ್ರದಿನದ ಬಿಳಿಯ ನೂಲನ್ನು ಸುತ್ತಿ,—

ತತ್ವಯಾಮಿ ಶುನಶ್ಯೇಫೋವರುಸ್ತ್ರಿಟುಪ್।
ಉತ್ತರ ಕಲಶೇ ವರುಣಾ ವಾಹನೇ ವಿನಿಯೋಗಃ:—

"ತತ್ವಯಾಮಿ ಬ್ರಹ್ಮಣಾ ವಂದಮಾನಸ್ತದಾ ಶಾಸ್ತೆ
ಯಜಮಾನೋ ಹವಿರ್ಭಿಃ। ಅಹೇಡ ಮಾನೋ ವರುಣೇಹ
ಬೋಧ್ಯುರುಶಗ್ಂ ಸಮಾನ ಆಯುಃ ಪ್ರಮೋಷಿಃ ಓಂ ಭೂಃ
ವರುಣ ಮಾಹಯಾಮಿ। ಓಂ ಭುವಃ ವರುಣ ಮಾಹಮಾಮಿ।
ಓಂ ಭೂರ್ಭುವಸ್ಸುವಃ ವರುಣ ಮಾಹೂಹಯಾಮಿ"

ಎಂಬ ಮಂತ್ರದಿಂದ ಉತ್ತರ ಕಲಶದಲ್ಲಿ ವರುಣನನ್ನು ಆವಾಹನ ಮಾಡಿ

"ಕಲಶಸ್ಯ ಮುಖೇ ರುದ್ರಃ ಕಂಠೇ ವಿಷ್ಣು ಸಮಾಶ್ರಿತಃ।
ಮೂಲೇ ತಪ್ರಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಸ್ಮೃತಾಃ॥
ಕುಕ್ಷೌತು ಸಾಗರಾಸ್ಸರ್ವೇ ಸಪ್ತ ದ್ವೀಪಾ ವಸುಂಧರಾ।
ಋಗ್ವೇದೋಥ ಯಜುರ್ವೇದಸ್ಸಾಮವೇದೋಹ್ಯಥರ್ವಣಃ॥
ಅಂಗೈಶ್ಚ ಸಹಿತಾಸ್ಸರ್ವೇ ಕಲಶಾಂಬು ಸಮಾಶ್ರಿತಾಃ।
ಗಂಗೇಚ ಯಮುನೇಚೈವ ಗೋದಾವರೀ ಸರಸ್ವತೀ॥
ನರ್ಮದೇ ಸಿಂಧು ಕಾವೇರಿ ಜಲೇಸ್ಮಿನ್ ಸನ್ನಿಧಿಂಕುರು॥

ಎಂಬ ಮಂತ್ರದಿಂದ ಕಲಶಗಳನ್ನು ಮುಟ್ಟಿ ಜಪಿಸಬೇಕು. ತದನಂತರ ಹಿಂದೆ ಇಷ್ಟ ಲಿಂಗಾರ್ಚನೆ ಪ್ರಕರಣದಲ್ಲಿ ಹೇಳಿದಂತೆ ಷೋಡಶೋಪಚಾರಗಳಿಂದ ಪೂಜಿಸಬೇಕು. ಆ ಬಳಿಕ—

"ಅನಯಾ ಪೂಜಯಾ ವರುಣಾದಿ ದೇವತಾಸ್ಸುಪ್ರೀತಾಸ್ಸು ಪ್ರಸನ್ನಾವ ರಹಾ ಭವಂತು"

ಈ ಮಂತ್ರ ಹೇಳಿ ಅಕ್ಷತೆ ಹಾಗೂ ಬಂಗಾರವೊದಲಾದವುಗಳಿಂದ ಕೂಡಿದ ಶುದ್ಧೋದಕವನ್ನು ಎರೆಯಬೇಕು. ಆ ಬಳಿಕ ಪ್ರಾಣಾಯಾಮವನ್ನು ಮಾಡಿ ಕೈ ಮುಗಿದುಕೊಂಡು—

"ಉಮಾ ಮಹೇಶ್ವರಾಭ್ಯಾಂನಮಃ। ಪ್ರಮಥಗಣೇಭ್ಯೋನಮಃ।
ಭಕ್ತ ಮಾಹೇಶ್ವರೇಭ್ಯೋ ನಮಃ। ದುರ್ಗಾಗಣಪತಿ ಕ್ಷೇತ್ರ
ಪಾಲಕೇಭ್ಯೋ ನಮಃ। ಮಾತೃಭ್ಯೋನಮಃ। ಪಿತೃಭ್ಯೋನಮಃ।
ಆಚಾರ್ಯೇಭ್ಯೋ ನಮಃ। ಇಷ್ಟದೇವತಾಯೈ ನಮಃ।
ಸರ್ವೇಭ್ಯೋ ಮಾಹೇಶ್ವರೇಭ್ಯೋ ನಮಃ"

ಎಂಬ ಮಂತ್ರದಿಂದ ನಮಸ್ಕಾರ ಮಾಡಬೇಕು. ಆ ಬಳಿಕ ಕಲಶಗಳ ಮುಂದಿನ ಭಾಗದಲ್ಲಿ (ಪ್ರಶಸ್ತರಾದ, ಉತ್ತರ ಕೊಡಲು ಯೋಗ್ಯರಿಂದ ನಿಷೇಧ ಮಾಡಲ್ಪಟ್ಟ ದಾನವನ್ನು ಸ್ವೀಕಾರ ಮಾಡದೇ ಇದ್ದ ಉತ್ತರೀಯನ್ನು ಹೊದ್ದು ಕೊಂಡಂಥ ಪಾವನ ಹಸ್ತವುಳ್ಳವರಾದ) ಇಬ್ಬರು ಮಾಹೇಶ್ವರರನ್ನು ಕೂಡ್ರಿಸ ಬೇಕು. ತದನಂತರ ಅವರನ್ನು ಗಂಧಾಕ್ಷತೆ-ಪುಷ್ಪಾದಿಗಳಿಂದ ಪೂಜಿಸಬೇಕು. ಆ ಬಳಿಕ ಯಜಮಾನನು—

"ಆ ಶೀಷಃ ಪ್ರಾರ್ಥಯಾಮಿ"ಎಂದು ಅನ್ನಲು ಅದಕ್ಕೆ ಮಾಹೇಶ್ವರರು—
"ಸತ್ಯಾ ಏಷಾಆ ಶಿಷಸ್ಸಂತು ದೀರ್ಘಾನಾಗಾನ ದ್ಯೋಗಿರಯ ಸ್ತ್ರೀಣಿ ವಿಷ್ಣು ಪದಾನಿಚ। ತೇನಾಯುಃ ಪ್ರಮಾಣೇನ ಪುಣ್ಯಾಹಂ ದೀರ್ಘಾಯಾ ಯುರಸ್ತು"

ಹೀಗೆಂದು ಮಹಾಶ್ವೇರರು ಹೇಳಬೇಕು ಈ ಪ್ರಕಾರವಾಗಿ ಮಾಹೇಶ್ವರ ರಿಂದ ಆಶೀರ್ವಾದರೂಪ ಪ್ರತಿ ಉತ್ತರವನ್ನು ಪಡೆದುಕೊಂಡ ನಂತರ ಪುನಃ ಪ್ರಾಣಾಯಾಮವನ್ನು ಮಾಡಿ ದೇಶ ಕಾಲಾದಿಗಳನ್ನು ಹೇಳಬೇಕು.

(ಇಲ್ಲಿ ವಿಶೇಷವೇನಂದರೆ-ಯಾವದೇ ಕರ್ಮಗಳಲ್ಲಿ ಸ್ವಸ್ತಿ ಪುಣ್ಯಾಹ ವಾಚ ನಗಳನ್ನು ಇಲ್ಲಿ ಹೇಳಿದಂತೆಯೇ ಮಾಡಬೇಕು. ಆದರೆ ಸಂಕಲ್ಪದಲ್ಲಿ ಮಾತ್ರ ಸ್ವಲ್ಪ ಬದಲು ಮಾಡಿಕೊಳ್ಳಬೇಕು. ಹೇಗೆಂದರೆ- ಗರ್ಭಾದಾನ ಕರ್ಮಕರ್ತು ಮಾದೌ ಇಲ್ಲವೇ ವಿವಾಹ ಕರ್ಮ ಕರ್ತು ಮಾದೌ ಎಂದು ಹೇಳಬೇಕು.) ತದ ನಂತರ—

"...........ಕರ್ತುಮಾದೌ ಶುದ್ಧಿ ವೃದ್ಧ್ಯಭ್ಯುದಯ ಸಿದ್ಧಿದ್ವಾರಾ
ಶ್ರೀ ಪರಮೇಶ್ವರ ಪ್ರೀತ್ಯರ್ಥಂ ಶಾಂತ್ಯರ್ಥಂ ಮಹೇಶ್ವರೈಸ್ಸಹ
ಸ್ವಸ್ತಿ ಪುಣ್ಯಾಹ ವಾಚನಂ ಕರಿಷ್ಯೇ"

ಎಂದು ಸಂಕಲ್ಪ ಮಾಡಿ, ಉತ್ತರ ಕಲಶವನ್ನು ಮುಟ್ಟಿ ಯಜಮಾನನು-

''ಆಪಃ''

ಎಂದು ಅನ್ನುತ್ತ ಉದಕವನ್ನು ಕೊಡಲು ಮಾಹೇಶ್ವರರು—

''ಶಿವಾ ಆಪಸ್ಸಂತು''

ಹೀಗೆಂದು ಉಚ್ಚರಿಸಿ ತೆಗೆದುಕೊಳ್ಳಬೇಕು. ಪುನಃ ಯಜಮಾನನು—

''ಗಂಧಾಃ''

ಎಂದು ಗಂಧವನ್ನು ಕೊಡಲು ಮಾಹೇಶ್ವರರು—

''ಸುಗಂಧಾಃ ಪಾಂತು''

ಎಂದು ಉಚ್ಚರಿಸಿ ತೆಗೆದುಕೊಳ್ಳಬೇಕು. ಬಳಿಕ ಯಜಮಾನನು—

''ಅಕ್ಷತಾಃ''

ಎಂದು ಉಚ್ಚರಿಸಿ ಅಕ್ಷತೆಯನ್ನು ಕೊಡಲು ಮಾಹೇಶ್ವರರು—

''ಅಕ್ಷತಂಚಾರಿಷ್ಟಂತಾಸ್ತು''

ಎಂದು ಅಕ್ಷತೆಯನ್ನು ತೆಗೆದುಕೊಳ್ಳಬೇಕು. ಬಳಿಕ ಯಜಮಾನನು—

''ಸುಮರಸಃ''

ಎಂದು ಹೂವನ್ನು ಕೊಡಲು ಮಹೇಶ್ವರರು—

''ಐಶ್ವರ್ಯಮಸ್ತು''

ಎಂದು ಹೇಳಬೇಕು. ನದನಂತರ ಯಜಮಾನನು—

''ದಕ್ಷಿಣಾಃ ಪಾಂತು''

ಎಂದು ಉಚ್ಚರಿಸಿ ದಕ್ಷಿಣೆ ಕೊಡಲು ಮಹೇಶ್ವರರು—

''ಬಹುಧೇಯಂ ಚಾಸ್ತುಃ''

ಎಂದು ಹೇಳಬೇಕು. ತದ ನಂತರ ಯಜಮಾನನು ಆ ಕಲಶವನ್ನು ತೆಗೆಕೊಂಡು ಮೇಲಕ್ಕೆ ಎದ್ದು ನಿಂತುಕೊಂಡು—

''ಮನಸ್ಸಮಾಧೀಯತಾಂ''

ಎಂದು ಹೇಳಲು ಮಾಹೇಶ್ವರರು—

''ಸಮಾಹಿತ ಮನಸಸ್ಮಃ''

ಎಂದು ಹೇಳಬೇಕು. ಬಳಿಕ ಯಜಮಾನನು-

''ಪ್ರಶೀದಂತು ಭವತಃ''

ಎಂದು ಅನ್ನಲು ಮಾಹೇಶ್ವರರು—

''ಪ್ರಸನ್ನಾಸ್ಮಃ''

ಎಂದು ಹೇಳಿ ತದನಂತರ ಸರ್ವ ಮಹೇಶ್ವರರು ಏಕಸ್ವರದಿಂದ,

''ಶಾಂತಿರಸ್ತು, ಪುಷ್ಟಿರಸ್ತು, ತುಷ್ಟಿರಸ್ತು, ವೃದ್ಧಿರಸ್ತು, ಅವಿಘ್ನಮಸ್ತು, ಆಯುಷ್ಯ ಮಸ್ತು, ಆರೋಗ್ಯ ಮಸ್ತು, ಸ್ವಸ್ತಿ ಶಿವಂಕಮಸ್ತು, ಕರ್ಮ ಸಮೃದ್ಧಿ

ರಸ್ತು, ಧರ್ಮ ಸಮೃದ್ಧಿರಸ್ತು, ಪುತ್ರ ಸಮೃದ್ಧಿರಸ್ತು, ವೇದ ಸಮೃದ್ಧಿರಸ್ತು, ಶಾಸ್ತ್ರ ಸಮೃದ್ಧಿರಸ್ತು, ಧನಧಾನ್ಯ ಸಮೃದ್ಧಿರಸ್ತು, ಇಷ್ಟ ಸಂಪದಸ್ತು".

ಎಂದು ಹದಿನೈದು ವಾಕ್ಯಗಳನ್ನು ಹೇಳಲು ಆ ಬಳಿಕ ಯಜಮಾನನು—

"ಸ್ವಯಂ ಕರ್ಮದೇವತಾತ್ಮಕೋ ಭಗವಾನ್ ಶಿವಃ ಪ್ರೀಯತಾಂ"

ಎಂದು ಅನ್ನಲು ಮಹೇಶ್ವರರು —

"ಪ್ರೀಯತಾಂ ಭಗವಾನ್ ಕರ್ಮದೇವತಾತ್ಮಕಃ"

ಎಂದು ಅನ್ನಬೇಕು. ಆ ಬಳಿಕ ಯಜಮಾನನು-

"ಪುಣ್ಯಾಹಂ ವಾಚಯಿಷ್ಯೇ"

ಎಂದು ಅನ್ನಲು ಮಾಹೇಶ್ವರರು —

"ವಾಚ್ಯತಾಂ"

ಎಂದು ಅನ್ನಬೇಕು. ಪುನಃ ಸರ್ವಮಾಹೇಶ್ವರರು ಕೂಡಿ ಏಕೈಕಸ್ವರದಿಂದ,

"ಉದ್ಗಾತೇವ ಶಕುನೆ ಸಾಮಗಾಯಸಿ ಬ್ರಹ್ಮಪುತ್ರ
ಇವನೆ ವನೇಷು ಶಗ್ಂ ಸಷಿಋಷ್ವೇವ ವಾಜೀ
ಶಿಶುಮತೀರಪೀತ್ಯಾ। ಸರ್ವತೋನಶ್ಯಕುನೆ ಭದ್ರಮಾವದ।
ವಿಶ್ವತೋನಶ್ಯಕುನೆ ಪುಣ್ಯಮಾವದ"

ಎಂದು ಅನ್ನಬೇಕು. ಆ ಬಳಿಕ ಯಜಮಾನನು-

"ಓಂ ಪುಣ್ಯಾಹಂ ಭವಂತೋ ಬ್ರುವಂತು"

ಎಂದು ಉಚ್ಚಸ್ವರದಿಂದ ಅನ್ನಲು ಮಾಹೇಶ್ವರರು—

"ಓಂ

ಎಂದು ಅನ್ನಬೇಕು. ಆ ಬಳಿಕ-

ಇದರಂತೆಯೇ ಮತ್ತೆರಡುಸಾರೆ ಯಜಮಾನನು, ಹಾಗೂ ಮಾಹೇಶ್ವರರೂ ಮಧ್ಯಸ್ವರ-ಉಚ್ಚ ಸ್ವರದಿಂದ ಮೂರು-ಮೂರು ಸಾರೆ ಪರಸ್ಪರ ಹೇಳಿದ ನಂತರ ಯಜಮಾನನು—

(ಇಲ್ಲಿ ವಿಶೇಷವೆನೆಂದರೆ- ಯಾವ ಕರ್ಮವನ್ನು ಆಚರಿಸಬೇಕಾಗುವದೋ ಆ ಕರ್ಮವನ್ನು ಮೊದಲು ಯಜಮಾನನು—ಮಾಹೇಶ್ವರರು ಅನ್ನಬೇಕು. ಹೇಗೆಂದರೆ:- ಗರ್ಭದಾನ ಕರ್ಮಣೇ ಅಥವಾ ದೀಕ್ಷಾ ಕರ್ಮಣೇ ಇಲ್ಲವೇ ವಿವಾಹ ಕರ್ಮಣೇ ಎಂದು ಅನ್ನಬೇಕು. ಇಲ್ಲಿ ಉದಾಹರಣೆಗಾಗಿ ವಿವಾಹ ಕರ್ಮವನ್ನು ತೆಗೆದುಕೊಂಡು ಕೆಳಗೆ ಪ್ರಯೋಗ ಮಾಡಲ್ಪಟ್ಟದೆ.)

"ವಿವಾಹ ಕರ್ಮಣೇ ಓಂ ಸ್ವಸ್ತಿ ಭವಂತೋ ಬ್ರುವಂತು"

ಎಂದು ಅನ್ನಲು ಮಾಹೇಶ್ವರರು—

"ವಿವಾಹ ಕರ್ಮಣೇ ಓಂ ಸ್ವಸ್ತಿ"

ಎಂದು ಅನ್ನುವದು. ಇದನ್ನಾದರೂ ಮೊದಲಿನಂತೆಯೇ ಪುನಃ ಪುನಃ

ಮೂರು ಮೂರು ಸಾರೆ ಅನ್ನಬೇಕು. ಆ ಬಳಿಕ ಯಜಮಾನನು--

"ವಿವಾಹ ಕರ್ಮಣೇ ಶುದ್ಧಿಂ ಭವಂತೋ ಬ್ರುವಂತು"

ಎಂದು ಅನ್ನಲು ಮಾಹೇಶ್ವರರು—

"ಶುದ್ಧ್ಯತಾಂ"

ಎಂದು ಅನ್ನಬೇಕು. ಈ ವಾಕ್ಯಗಳನ್ನೂ ಸಹ ಒಬ್ಬರಿಗೊಬ್ಬರು ಪರಸ್ಪರ ಮೂರು-ಮೂರು ಸಾರೆ ಅನ್ನಬೇಕು,

ಆ ನಂತರ ಯಜಮಾನನು ತನ್ನ ಪತ್ನೀ ಸಮೇತನಾಗಿ ಪೂರ್ವ ದಿಕ್ಕಿಗೆ ಮುಖ ಮಾಡಿ ಕುಳಿತು, ಉತ್ತರ ದಿಕ್ಕಿನ ಕಲಶವನ್ನು ತನ್ನ ಬಲಹಸ್ತದಲ್ಲೂ ದಕ್ಷಿಣ ದಿಕ್ಕಿನ ಕಲಶವನ್ನು ತನ್ನ ಎಡ ಹಸ್ತದಲ್ಲೂ ಹಿಡಿದುಕೊಂಡು, ಅವೆರಡನ್ನೂ ಪರಸ್ಪರ ಕೂಡಿಸಿ ಅವೆರಡೂ ಕಲಶಗಳ ಧಾರೆಯನ್ನು ಅತ್ತಿತ್ತ ಸಿಡಿಯದಂತೆ ಅವಿಚ್ಛಿನ್ನವಾಗಿ ಮತ್ತೊಂದು ಥಾಲಿಯಲ್ಲಿ—

"ಓಷಧಾನಿ ಚರತ್ನಾನಿ ಕಾಲಸ್ಯಾವ ಯವಾಶ್ಚಯೇ ।
ಸರಿತಸ್ಸಾಗರಾಶ್ಶೈಲಾಸ್ತೀರ್ಥಾನಿ ಜಹ್ರ ದಾನದಾಃ ।
ಏತೇತ್ವಾಮ ಭಿಷಿಂಚಂತು ಸರ್ವಕಾಮಾರ್ಥ ಸಿದ್ಧಯೇ ।
ಶಾಂತಿಃ ಪುಷ್ಟಿಸ್ತುಷ್ಟಿಶ್ಚಾತ್ತು । ಶಿವಗ್ಂ ಶಿವ ಮಸ್ತು ।
ಭಗವಾನ್ ಶಿವಃ ಪ್ರೀಯತಾಂ ॥

ಎಂಬ ಮಂತ್ರದಿಂದ ಧಾರೆಯೆರೆಯಬೇಕು. (ಅಭಿಷೇಕವಂ ಮಾಡುವದು) ಆ ಬಳಿಕ ಮಾಹೇಶ್ವರರು ಆ ಜಲವನ್ನು ಮಾವಿನ ಚಿಗುರಿನಿಂದ ದಂಪತಿಗಳ ತಲೆಯ ಮೇಲೆ—

"ತತ್ಸವಿತುರ್ವರೇಣ್ಯಂ ವಿಶ್ವಾಮಿತ್ರಾಃ ಸವಿತಾಗಾಯತ್ರೀ ।
ಆಪೋಹಿಷ್ಠೇತಿ ನವರ್ಚಸ್ಯಾಂಬರೀಷಃ । ಸಿಂಧುದ್ವೀಪಾ
ಆಪೋ ಗಾಯತ್ರೀ । ಪಂಚಮೀ ವರ್ಧಮಾನಾ ಸಪ್ತಮೀ
ಪ್ರತಿಷ್ಠೇಂತೇದ್ವೇ ಅನಂಷ್ಟುಭೌ । ಆಪೋಹಿಷ್ಠಾಮಯೋ
ಭುವಸ್ತಾನ ಊರ್ಜೇದಧಾತನ ಮಹೇರಣಾಯ ಚಕ್ಷಸೇ ।
ಯೊವಶ್ಶಿವತ ಮೋರಸಸ್ತಸ್ಯ ಭಾಜಯತೇಹನಃ ।
ಉಶತೀರಿವ ಮಾತರಃ ತಸ್ಮಾ ಅರಂಗಮಾಮವೋ ।
ಯಸ್ಯಕ್ಷಯಾಯ ಜನ್ವಥ । ಆಪೋಜನ ಯಥಾಜನಃ । "

ಎಂಬ ಮಂತ್ರದಿಂದ ಪ್ರೋಕ್ಷಣೆ ಮಾಡಬೇಕು. ಆ ಬಳಿಕ ಮುತ್ತೈದೆಯರು ಆರತಿಯನ್ನೂ ಮಾಹೇಶ್ವರರು ಆಶೀರ್ವಾದವನ್ನೂ ಮಾಡಬೇಕು.

॥ ಇಲ್ಲಿಗೆ ಸ್ವಸ್ತಿ ಪುಣ್ಯಾಹವಾಚನ ಸಮಾಪ್ತಿಯು ॥



# ನಾಂದೀ ಸಮಾರಾಧನ

ಯಜಮಾನನು ಒಂದು ತಟ್ಟೆಯಲ್ಲಿ ಅಕ್ಕಿಯನ್ನು ತುಂಬಿ, ಅದರಲ್ಲಿ ನಂದೀಶ್ವರಾದಿ ಇಪ್ಪತ್ನಾಲ್ಕು ಜನ ಪ್ರಮಥ ಶ್ರೇಷ್ಠರ ಹೆಸರನ್ನು ಬರೆದು ತಾಂಬೂಲ-ಬಾಳೇಹಣ್ಣು, ದ್ರಾಕ್ಷಾದಿ ಫಲಗಳನ್ನೂ; ಮತ್ತು ತೆಂಗಿನಕಾಯಿ-ಹಾಗೂ ಇಪ್ಪತ್ನಾಲ್ಕು ದಕ್ಷಿಣೆಗಳನ್ನೂ ಇಟ್ಟು ದೇಶಕಾಲಾದಿಗಳನ್ನು ಹೇಳಿ—

"ಏವಂ ಗುಣ ವಿಶೇಷಣ ವಿಶಿಷ್ಟಾಯಾಂ ಅಸ್ಯಾಂ ಶುಭತಿಥೌ ಅದ್ಯ ಕರಿಷ್ಯಮಾಣ (ಅಮುಕ ಕಾರ್ಯ) ವಿಧಾನಾಂಗ ಭೂತ ನಾಂದೀ ಶೋಭನ ದೇವತಾ ಉದ್ದಿಶ್ಯ ನಾಂದೀ ಶೋಭನ ದೇವತಾ ಪ್ರೀತ್ಯರ್ಥಂ ನಾಂದೀ ಸಮಾರಾಧನಾಖ್ಯಂ ಕರ್ಮ ಕರಿಷ್ಯೇ"ಎಂದು ಸಂಕಲ್ಪ ಮಾಡಬೇಕು.

(ಇಲ್ಲಿ ವಿಶೇಷವೇನಂದರೆ—"ಅಮುಕ ಕಾರ್ಯ ವಿಧಾನಂಗಭೂತ" ಅಂದಲ್ಲಿ ಇಷ್ಟ ಕಾರ್ಯದ ಹೆಸರು ಅಂದು. ಆ ಕಾರ್ಯ ವಿಧಾನಂಗದ ಭೂತವೆಂದು ಅನ್ನಬೇಕು ಹೇಗೆಂದರೆ- ಗರ್ಭಾದಾನಾಂಗ ಭೂತ ಇಲ್ಲವೇ ಕಾರ್ಯ ವಿಧಾನಂಗ ಭೂತ ಹೀಗೆ ಅಂದು ಸಂಕಲ್ಪ ನೂಡಬೇಕು.) ಆ ಬಳಿಕ-

ಶ್ರೀ ನಂದಿ-ಭೃಂಗಿ-ರಿಟಿ-ವೀರಕ-ವೀರಭದ್ರ-ಪುಷ್ಪದಂತ- ಅಂಡಾಭರಣ-ದಂಡಪಾಣಿ-ಚಂಡೇಶ್ವರ-ದಾರುಕ-ರೇಣುಕ-ವಿಕರ್ಣ-ವಿಜಯಕರ್ಣ-ಘಂಟಾಕರ್ಣ-ಗೋಕರ್ಣರೇವಣ ಸಿದ್ಧ-ಮರುಳ ಸಿದ್ಧ-ಏಕೋರಾಮ- ಪಂಡಿತಾರಾಧ್ಯ ಸುಕೇತು-ರುರು-ಉಪಮನ್ಯು-ಭೃಗು-ಧದೀಚಿ- ಗೌತಮಾದಿ ಮಹಾ ಪ್ರಮಥ ಗಣಾನ್ ಪುರಾತನ ಭಕ್ತ ಮಹಾಗಣಾನತ್ರ ಆ ವಾಹಯಾಮಿ ‖ ನಂದ್ಯಾದಿ ಮಹಾಗಣಾಸ್ಸ ಯುಧಾಸ್ಸ ಶಕ್ತಯಸ್ಸ ಪರಿವಾರಾ ಸಮಾಗತ್ಯಾತ್ರ ಪೂಜಾಂ ಭವಂ ತೋಗೃಹ್ಣಂತು ‖

ಹೀಗೆಂದು ಹೇಳಿದ ತರುವಾಯ ಎರಡು ವಸ್ತ್ರಗಳನ್ನು ಹೊದಿಸಿ, ಮೊದಲು ಹೇಳಿದ ಉಪಚಾರಗಳಿಂದ ಪೂಜಿಸಿ, ತಟ್ಟೆಯಲ್ಲಿರುವ ಆ ದಕ್ಷಿಣೆ ಹಣವನ್ನು—

"ಹಿರಣ್ಯ ಗರ್ಭ ಗರ್ಭಸ್ಥಂ ಹೇಮ ಬೀಜಂ ವಿಭಾವಸೋಃ ।
ಅನಂತ ಪುಣ್ಯ ಫಲದ ಮತಶ್ಶಾಂತಿ ಪ್ರಯಚ್ಛಮೇ ‖
ಅನೇನ ಹಿರಣ್ಯೇನ ನಾಂದಿ ಶೋಭನ ದೇವತಾಃ ಪ್ರಿಯಂ ತಾಂ ‖

ಎಂದು ಮಾಹೇಶ್ವರರಿಗೆ ದಾನ ಮಾಡಿ, ನಮಸ್ಕಾರ ಮಾಡಬೇಕು ತದನಂತರ ೨೪ ಜನ ಮಹೇಶ್ವರರಿಗೆ ಊಟ ಮಾಡಿಸಿ ದಕ್ಷಿಣೆ ತಾಂಬೂಲಾದಿಗಳನ್ನು ಕೊಟ್ಟು ಸಂತೋಷಗೊಳಿಸಬೇಕು.

‖ ಇತಿ ನಾಂದೀ ಸಮಾರಾಧನ ಸಮಾಪ್ತಿಯು ‖

  

# ಅಂಕುರಾರೋಪಣ

ಯಜಮಾನನು ಅಥವಾ ಯಜಮಾನನ ಪತಿಯಿಂದ ಪುರೋಹಿತನು ದೇಶ ಕಾಲಾದಿಗಳನ್ನು ಕೇಳಿ—

"ಏವಂ ಗುಣಗಣ ವಿಶೇಷಣ ವಿಶಿಷ್ಟಾಯಾಂಅಸ್ಯಾಂ ಶುಭತಿಥೌ ಅಮುಕ ಕರ್ಮ ಸಾಫಲ್ಯ ನಿರಂತರ ಶುಭತ್ವ ಸಿದ್ಧಿ ದ್ವಾರಾ ಉತ್ತರೋತ್ತರ ಅಭಿವೃದ್ಧ್ಯರ್ಥಂ ಶ್ರೀ ಪರಮೇಶ್ವರ ಪ್ರೀತ್ಯರ್ಥಂ ಅಂಕುರಾರೋಪಣಂ ಕರಿಷ್ಯೇ" ಎಂದು ಸಂಕಲ್ಪ ಮಾಡಬೇಕು.

(ಇಲ್ಲಿ ವಿಶೇಷವೇನಂದರೆ ಅಮುಕ ಕರ್ಮ ಅಂದಲ್ಲಿ ನಾವು ಮಾಡಬೇಕಾದ ಕಾರ್ಯದ ಹೆಸರು ಅನ್ನಬೇಕು. ಹೇಗೆಂದರೆ ಗರ್ಭಾದಾನ ಕರ್ಮ ಅಥವಾ ದೀಕ್ಷಾ ಕರ್ಮ ಇಲ್ಲವೇ ವಿವಾಹ ಕರ್ಮ ಸಾಫಲ್ಯ ಎಂದು ಅನ್ನಬೇಕು. ಹಾಗೇ ಅಮುಕ ಕರ್ಮ ಎಂದು ಅನ್ನಬಾರದು. ಈ ಕಾರ್ಯವನ್ನು ಆದಷ್ಟು ಶಿವಪೂಜಾ ಕೋಲಿಯಲ್ಲಿ ಮಾಡುವದೊಳ್ಳೇದು.)

ಹೀಗೆ ಸಂಕಲ್ಪ ಮಾಡಿದ ನಂತರ ಪರಿಶುದ್ಧವಾದ ಭೂಮಿಯ ಮೇಲೆ ಅಕ್ಕಿಯನ್ನು ಹರಡಬೇಕು. ಇದರ ಮೇಲೆ ಒಂದು ಹೊಸ ಬಿದರು ಬುಟ್ಟಿಯನ್ನು ಇಟ್ಟು ಅದಕ್ಕೆ ನೂಲನ್ನು ಸುತ್ತಬೇಕು. ಆ ಬಳಿಕ ಹುತ್ತದ ಮಣ್ಣು, ಹಳ್ಳದ ಕೆಸರು, ಒಣಗಿದ ಶಗಣಿಯ ಪುಡಿಯನ್ನು ಆ ಬುಟ್ಟಿಯಲ್ಲಿ ಹಾಕಬೇಕು. ಪುನಃ ಇದರ ಮೇಲೆ ತುಂಬಿ, ಕರಿಕೆ, ಮಾವು, ಅರಳಿ, ಬಿಲ್ವ ಮುಂತಾದ ಚಿಗರುಗಳನ್ನು ಹಾಸಿ, ಅದರ ಮೇಲೆ ಅನೇಕ ಜಾತಿಯ ಪುಷ್ಪಗಳನ್ನು ಹರಡಿ, ಆ ಬುಟ್ಟಿಯ ಮಧ್ಯಾದಿಯಾಗಿ ಐದು ಸ್ಥಳಗಳಲ್ಲಿ—

"ಈಶಾನಾಯ ನಮಃ"ಎಂಬ ಮತ್ರದಿಂದ ಮಧ್ಯಭಾಗದಲ್ಲಿ
"ತತ್ಪುರುಷಾಯ ನಮಃ"ಎಂಬ ಮಂತ್ರದಿಂದ ಉತ್ತರ ದಿಕ್ಕಿನಲ್ಲಿ.
"ಅಘೋರಾಯ ನಮಃ" ಎಂಬ ಮಂತ್ರದಿಂದ ಪಶ್ಚಿಮ ದಿಕ್ಕಿನಲ್ಲಿ.
"ವಾಮದೇವಾಯ ನಮಃ"ಎಂಬ ಮಂತ್ರದಿಂದ ದಕ್ಷಿಣ ದಿಕ್ಕಿನಲ್ಲಿ.
"ಸದ್ಯೋಜಾತಾಯ ನಮಃ"ಎಂಬ ಮಂತ್ರದಿಂದ ಪೂರ್ವ ದಿಕ್ಕಿನಲ್ಲಿ.

ವಿಭೂತಿ ಗಂಧಾಕ್ಷತೆ ಪುಷ್ಪಾದಿಗಳಿಂದ ಪೂಜಿಸಿ ಆ ಬುಟ್ಟಿಯ ಪಶ್ಚಿಮ ದಿಕ್ಕಿಗೆ ಕುಳಿತು –

"ದಿಶಾಂಪತಿ ನಮಸ್ಯಾಮಿ। ಸರ್ವಕಾಮ ಫಲಪ್ರಧಾನ್। ಕುರ್ವಂತು ಸತತಂ ಕರ್ಮಕುರ್ವಂತು ಸತತಂ ಶುಭಂ"

ಎಂಬ ಮಂತ್ರವನ್ನು ಹೇಳಿ ನಮಸ್ಕಾರ ಮಾಡಿ ಗೋದಿ, ಕಡಲೆ, ಭತ್ತ, ಎಳ್ಳು, ಹೆಸರು ಈ ಐದೂ ಧಾನ್ಯಗಳನ್ನು ನೀರಿನಿಂದ ತೊಳೆದು ಆ ಬುಟ್ಟಿಯಲ್ಲಿ

ಮೊಟ್ಟ ಮೊದಲು ಪೂಜಿಸಿದ ಮಧ್ಯಾದಿಯಾದ ಐದೂ ಸ್ಥಾನಗಳಲ್ಲಿ ಹರಡಿ—

"ಆಪೋಹಿಷ್ಠಾ ಮಯೋಭುವ ಸ್ಥಾನ ಊರ್ಜೇದ ಧಾತನ ಮಹೇರ ಣಾಯ ಚಕ್ಷಸೇ । ಯೋವಶ್ಶಿವ ತಮೋರಸಸ್ತಸ್ಯ ಭಾಜಯತೇ ಹನಃ । ಉಶತೀ ರಿವ ಮಾತರಃ ತಸ್ಮಾ ಅರಂಗಮಾಮವೋ ಯಸ್ಯಕ್ಷಯಾಯ ಜಿನ್ವಥ। ಆಪೋ ಜನ ಯಥಾಚನಃ ।"

ಎಂಬ ಮಂತ್ರದಿಂದ ಶುದ್ಧೋದಕವನ್ನು ಎರೆಯಬೇಕು. ತರುವಾಯ ಪೂರ್ವದಲ್ಲಿ ಹೇಳಿದ ಉಪಚಾರಗಳಿಂದ ಪೂಜೆ ಮಾಡುವದು.

॥ ಇತಿ ಅಂಕುರಾರ್ಪಣ ಸಮಾಪ್ತಂ ।

  

# ಮಂಟಪ ದೇವತಾಪ್ರತಿಷ್ಠೆ ಹಾಗೂ ಪೂಜಾ ಕ್ರಮ.

**ಯಜಮಾನನು ಅಥವಾ ಆಚಾರ್ಯನು ದೇಶಕಾಲಾದಿಗಳನ್ನು ಹೇಳಿ:—**

"ಏವಂ ಗುಣವಿಶೇಷಣ ವಿಶಿಷ್ಟಾಯಾಂ ಅಸ್ಯಾಂ ಶುಭ ತಿಥೌ
ಅದ್ಯ ಕರಿಷ್ಯ ಮಾಣ (ಅಮುಕ) ಕರ್ಮಾಂಗ ಭೂತ ಮಂಟಪದೇವತಾ
ಪ್ರತಿಷ್ಠಾಪನಂ ಕರಿಷ್ಯೇ" ಎಂದು ಸಂಕಲ್ಪ ಮಾಡಬೇಕು.

(ಹೀಗೆ ಸಂಕಲ್ಪ ಮಾಡುವಾಗ "ಅಮುಕ" ಎಂಬಲ್ಲಿ ನಾವು ಮಾಡಬೇಕಾದ ಕಾರ್ಯದ ಹೆಸರು ಅನ್ನಬೇಕು. ಹೇಗಂದರೆ ದೀಕ್ಷಾ ಕರ್ಮಾಂಗಭೂತ ಅಥವಾ ವಿವಾಹ ಕರ್ಮಾಂಗಭೂತ ಎಂದು ಅಂದು ಸಂಕಲ್ಪ ಮಾಡಬೇಕು. ಹಾಗೇ ಅಮುಕ ಕರ್ಮಾಂಗಭೂತ ಎಂದು ಅನ್ನಬಾರದು )

ಇನ್ನು ಕಾರ್ಯದ ಮೊದಲನೇ ದಿವಸ ಈ ಮಂಟಪ ದೇವತಾ ಪ್ರತಿಷ್ಠೆಯನ್ನು ಮಾಡಬೇಕಾದರೆ ಮೇಲಿನ ಸಂಕಲ್ಪದಲ್ಲಿ "ಅದ್ಯಕರಿಷ್ಯಮಾಣ" ಎಂದು ಪ್ರಯೋಗ ಮಾಡಿದ ಸ್ಥಾನದಲ್ಲಿ "ಶ್ವಃ ಕರಿಷ್ಯಮಾಣ" ಎಂದು ಅನ್ನಬೇಕು. ಒಂದು ವೇಳೆ ಅದೇ ದಿವಸ (ಕಾರ್ಯವಿದ್ದ ದಿವಸ) ಮಾಡಬೇಕಾದರೆ "ಅದ್ಯ ಕರಿಷ್ಯ ಮಾಣ" ಎಂದು ಅನ್ನಬೇಕು. ಇದನ್ನು ಮಾತ್ರ ಲಕ್ಷಪೂರ್ವಕವಾಗಿ ಉಚ್ಚಾರ ಮಾಡಬೇಕು.)

ಸಂಕಲ್ಪ ಮಾಡಿದ ತರುವಾಯ ವಿವಾಹ ಅಥವಾ ದೀಕ್ಷೆಗೆ ಮಾಡತಕ್ಕ ಪರಿಶುದ್ಧವಾದ ಪ್ರದೇಶದಲ್ಲಿ ಪೂರ್ವ ಅಥವಾ ಉತ್ತರ ಮುಖವಾಗುವಂತೆ ನಾಲ್ಕೂ ದಿಕ್ಕುಗಳಲ್ಲಿ ಬಾಳೇಕಂಬ ಹಾಗೂ ಕಬ್ಬುಗಳನ್ನು ನಿಲ್ಲಿಸಿ ಮಾವಿನ ತೋರಣ–ತಳಿರುಗಳಿಂದಲೂಮತ್ತು ಒಳ್ಳೇ ಅಂದಚಂದದ ಜರಿ ಬಟ್ಟೆಗಳಿಂದಲೂ

ಅಲಂಕಾರ ಮಾಡಿ ಮಂಟಪವನ್ನು ರಚಿಸಬೇಕು. ಈ ಮಂಟಪದಲ್ಲಿ ಮೊದಲು ದಶ ದಿಕ್ಪಾಲಕರನ್ನೂ ಆಹ್ವಾನ ಮಾಡಿ ಅಷ್ಟೋಪಚಾರದಿಂದ ಪೂಜಿಸಬೇಕು.

"ಯಾಃ ಫಲನೀರ್ಯಾ ಅಫಲಾ ಅಪುಷ್ಪಯಶ್ಚ ಪುಷ್ಪಿಣೀಃ ।

ಬೃಹಸ್ಪತಿ ಪ್ರಸೂತಾಸ್ತಾನೋ ಮುಂಚತ್ವಗ್‌ಂಹಸಃ"

ಎಂದು ಮಂಟಪದ ಮೇಲೆ ಅಕ್ಷತೆ ಹಾಕಿ, ದಶ ದಿಕ್ಪಾಲಕರನ್ನು ಆಹ್ವಾನ ಮಾಡುವದು ಹೇಗಂದರೆ:—

ಇಂದ್ರ (ಪೂರ್ವ) ದಿಕ್ಕಿನಲ್ಲಿ:—

"ತ್ರಾತಾರಮಿಂದ ಮವಿತಾರಮಿಂದ್ರಗ್‌ಂಹವೇ ಹವೇ ।

ಸುಹವಗ್‌ಂ ಶೂರಮಿಂದ್ರಂ । ಹವೇನು ಶಕ್ರಂ ಪುರುಹೂತಮಿಂದ್ರಗ್‌ಂ

ಸ್ವಸ್ತಿನೋ ಮಘವಾ ಧಾತ್ವಿಂದ್ರಃ"॥ ಇತಿ ಮಂತ್ರೇಣ ಇಂದ್ರ ಮಾವಾಹಯಾಮಿ ಸ್ಥಾಪಯಾಮಿ ಪೂಜಯಾಮಿ ಎಂದು ಪೂಜಿಸಬೇಕು.

ಅಗ್ನಿ ದಿಕ್ಕಿನಲ್ಲಿ (ಪೂರ್ವ-ದಕ್ಷಿಣ ನಡುವಿನ ದಿಕ್ಕಿನಲ್ಲಿ)—

"ತ್ವನ್ನೊ ಅಗ್ನೇವರುಣಸ್ಯ ವಿದ್ವಾನ್‌ದೇವಸ್ಯ ಹೇಡೋವಯಾಸಿಸೀಷ್ಠಾಃ। ಯಜಿಷ್ಠೋ ವಹ್ನಿತ ಮಶ್ಶೋಶುಚಾನೋ ವಿಶ್ವಾದ್ವೇಷಾಗ್‌ಂಸಿ ಪ್ರಮುಗ್ಧ್ಯಸ್ಮತ್" ॥ ಇತಿ ಮಂತ್ರೇಣಾಗ್ನಿ ಮಾವಾಹಯಾಮಿ ಸ್ಥಾಪಯಾಮಿ ಪೂಜಯಾಮಿ ಎಂದು ಪೂಜಿಸಬೇಕು.

ಯಮ (ದಕ್ಷಿಣ) ದಿಕ್ಕಿನಲ್ಲಿ:—

"ಸುಗನ್ನಃ ಪಂಥಾ ಮಭಯಂ ಕೃಣೋತು । ಯಸ್ಮಿನ್ ಕ್ಷತ್ರೆ ಯಮ ಯೇತಿ ರಾಜಾ । ಯಸ್ಮಿನ್ನೇನ ಮಭ್ಯಷಿಂಚಂತ ದೇವಾಃ । ತದಸ್ಯ ಚಿತ್ರಗ್‌ಂ ಹವಿಷಾಯ ಜಾವು" ॥ ಇತಿ ಮಂತ್ರೇಣ ಯಮ ಮಾವಾಹಯಾಮಿ ಸ್ಥಾಪಯಾಮಿ ಪೂಜಯಾಮಿ ಎಂದು ಪೂಜಿಸಬೇಕು.

ನೈಋತ್ಯ ದಿಕ್ಕಿನಲ್ಲಿ (ದಕ್ಷಿಣ-ಪಶ್ಚಿಮ ನಡುವಿನ ದಿಕ್ಕಿನಲ್ಲಿ):—

"ಅಸುನ್ವಂತಮ ಯಜಮಾನ ಮಿಚ್ಛಸ್ತೇನ ಸ್ತೇತ್ಯಾಂ ತಸ್ಕರಸ್ಯನ್ವೇಷಿ । ಅನ್ಯ ಮಸ್ಮದಿಚ್ಛಸಾತ ಇತ್ಯಾ ನವೋ ದೇವೀ ನಿಋತೇತುಭ್ಯಮಸ್ತು ॥" ಇತಿ ಮಂತ್ರೇಣ ನಿಋತಿ ಮಾವಾಹಯಾಮಿ ಸ್ಥಾಪಯಾಮಿ ಪೂಜಯಾಮಿ ಎಂದು ಪೂಜಿಸಬೇಕು.

ವರುಣ (ಪಶ್ಚಿಮ) ದಿಕ್ಕಿನಲ್ಲಿ:—

"ತತ್ವಯಾಮಿ ಬ್ರಹ್ಮಣಾ ವಂದಮಾನಸ್ತ ದಾಶಾಸ್ತೇ ಯಜಮಾನೋ ಹವಿರ್ಭಿಃ । ಅಹೇಡ ಮಾನೋ ವರುಣೇಹ ಬೋಧ್ಯುರುಶಗ್‌ಂ ಸಮಾನ ಆಯುಃ ಪ್ರಮೋಷಿಃ ॥" ಇತಿ ಮಂತ್ರೇಣ ವರುಣ ಮಾವಾಹಯಾಮಿ ಸ್ಥಾಪಯಾಮಿ ಪೂಜಯಾಮಿ ಎಂದು ಪೂಜಿಸಬೇಕು.

ವಾಯುವ್ಯ ದಿಕ್ಕಿನಲ್ಲಿ (ಪಶ್ಚಿಮ-ಉತ್ತರ ನಡುವಿನ ದಿಕ್ಕಿನಲ್ಲಿ):—

"ಆನೋನಿಯುದ್ಭಿಃ ಶತಿನೀ ಭಿರಧ್ವರಂ | ಸಹಸ್ರಿಣೀ ಭೀರುಪಯಾಹಿ ಯಜ್ಞಂ | ವಾಯೋ ಆಸ್ಮಿನ್ ಹವಿಷಮಾದ ಯಸ್ವಯಾಯಂ ಪಾತು ಸ್ವಸ್ತಿಭಿಃ ಸದಾನಃ ||" ಇತಿ ಮಂತ್ರೇಣ ವಾಯು ಮಾವಾಹಯಾಮಿ ಸ್ಥಾಪಯಾಮಿ ಪೂಜಯಾಮಿ ಎಂದು ಪೂಜಿಸಬೇಕು.

ಕುಬೇರ (ಉತ್ತರ) ದಿಕ್ಕಿನಲ್ಲಿ:—

"ವಯಗ್ಂ ಸೋಮವ್ರತೇ ತವ ಮನಸ್ತನೂಷು ಬಭ್ರತಃ | ಪಜಾವಂತಃ ಸಚೇಮಹಿ ಇಂದ್ರಾಣೀ ದೇವೀ ಸುಭಗಾಸು ಪತ್ನೀ ||" ಇತಿ ಮಂತ್ರೇಣ ಕುಬೇರ ಮಾವಾಹಯಾಮಿ ಸ್ಥಾಪಯಾಮಿ, ಪೂಜಯಾಮಿ ಎಂದು ಪೂಜಿಸಬೇಕು.

ಈಶಾನ್ಯ ದಿಕ್ಕಿನಲ್ಲಿ (ಉತ್ತರ-ಪೂರ್ವ ನಡುವಿನ ದಿಕ್ಕಿನಲ್ಲಿ):—

"ತಮೀಶಾನಂ ಜಗತಸ್ತಸ್ಥುಷಸ್ಪತಿಂ | ಧಿಯಂಜಿನ್ವ ಮವಸೇಹೂ ಮಹೇವಯಂ | ಪೂಷಾನೋ ಯಥಾ ವೇದ ಸಾಮಸದ್ವೃಧೇ | ರಕ್ಷಿತಾ ಪಾಯುರ ದಬ್ಧ ಸ್ವಸ್ತಯೇ ||" ಇತಿ ಮಂತ್ರೇಣ ಈಶಾನ ಮಾವಾಹಯಾಮಿ ಸ್ಥಾಪಯಾಮಿ ಪೂಜಯಾಮಿ ಎಂದು ಪೂಜಿಸಬೇಕು.

ಅಧೋ ಭಾಗವೆಂಬ ಪಶ್ಚಿಮ ವಾಯುವ್ಯ ದಿಕ್ಕುಗಳ ಮಧ್ಯದ ಭಾಗದಲ್ಲಿ—

"ಸ್ಯೋನಾ ಪೃಥಿವೀ ಭವಾನೃಕ್ಷಕಾ ನಿವೇಶಿನೀ |

ಯಚ್ಛಾನಃ ಶರ್ಮ ಸಪ್ರಥಾಃ ||" ಇತಿ ಮಂತ್ರೇಣ ವಿಷ್ಣುಮಾವಾಹ ಯಾಮಿ, ಸ್ಥಾಪಯಾಮಿ, ಪೂಜಯಾಮಿ ಎಂದು ಪೂಜಿಸಬೇಕು.

ಊರ್ಧ್ವವೆಂಬ ಪೂರ್ವ-ಈಶಾನ್ಯ ದಿಕ್ಕುಗಳ ಮಧ್ಯ ಭಾಗದಲ್ಲಿ—

"ಅಸ್ಮೇ ರುದ್ರಾಮಹನಾ ಪರ್ವತಾ ಸೋವೃತಹತ್ಯೇ ಭರಹೂತೌಸ ಜೋಷಾಃ | ಯಸ್ಯಂ ಸತೇಸ್ತುವತೇ ಧಾಯಿವಜ್ರಮಿಂದ್ರ ಜ್ಯೇಷ್ಠಾ ಅಸ್ಮಿನ್ ಅವಂತು ದೇವಾಃ ||" ಇತಿ ಮಂತ್ರೇಣ ಬ್ರಹ್ಮ ಮಾವಾಹಯಾಮಿ ಸ್ಥಾಪಯಾಮಿ ಪೂಜಯಾಮಿ ಎಂದು ಪೂಜಿಸಬೇಕು.

ಹೀಗೆ ಕ್ರಮವಾಗಿ ದಶದಿಕ್ಪಾಲಕರನ್ನು ಆವಾಹಿಸುತ್ತ ಗಂಧಾಕ್ಷತೆಗಳನ್ನು ಹಾಕಬೇಕು. ತದನಂತರ ಅಷ್ಟೋಪಚಾರದಿಂದ ಪೂಜಿಸುವದು. ಆ ಮೇಲೆ—

"ಕ್ಷೇತ್ರ್ಯೈತ್ವಾನಿರ ಋತ್ಯೈತ್ವಾದ್ಯ ಹೋಮುಂಚಾಮಿ
ವರುಣಸ್ಯ ಪಾಶಾತ್ | ಅನಾಗಸಂ ಬ್ರಾಹ್ಮಣೇತ್ವಾ ಕರೋಮಿ
ಶಿವೇತೇದ್ಯಾವಾ ಪೃಥವೀ ಉಭೇ ಇಮೇ||"

ಈ ಮಂತ್ರದಿಂದ ಇಪ್ಪತ್ತೈದು ಮೊಳ ಉದ್ದವಾಗಿ ದರ್ಭೆಯಿಂದ ಮಾಡಿದ ಹಗ್ಗವನ್ನು ಮಂಟಪದ ಸುತ್ತಲೂ ಕಟ್ಟುವದು. ತದನಂತರ ನಮಸ್ಕಾರ ಮಾಡಿ ಟೆಂಗಿನಕಾಯಿ ಒಡೆಯುವದು.

|| ಇತಿ ಮಂಟಪ ದೇವತಾ ಪ್ರತಿಷ್ಠಾ ಹಾಗೂ ಪೂಜಾ ಸಮಾಪ್ತಿ ||

# ಪಂಚ ಕಲಶ ಸ್ಥಾಪನಾ ಕ್ರಮವು

ದೀಕ್ಷಾ ಅಥವಾ ವಿವಾಹಕ್ಕೆ ರಚಿಸಿದ ಮಂಟಪದ ಮಧ್ಯಭಾಗದಲ್ಲಿ ಷಡ್ಗವ್ಯಗಳಿಂದ ಸಾರಿಸಿ ರಂಗವಲ್ಲಿಯನ್ನು ಹಾಕಬೇಕು. ತರುವಾಯ ಯೋಗ್ಯ ಧಾನ್ಯಗಳನ್ನು ಹರಡಿ ಅದರ ಮೇಲೆ ಗೋತ್ರಕ್ಕನುಸಾರವಾಗಿ ಅಯಾಯ ದಿಕ್ಕುಗಳಲ್ಲಿ ಪ್ರಣವುಗಳನ್ನು ಬರೆದು, ಐದು ಕಲಶಗಳನ್ನು ಸ್ಥಾಪಿಸಬೇಕು. ಮತ್ತು ಗುರು ಕಲಶವನ್ನು ಮಧ್ಯದಲ್ಲಿ ಸ್ಥಾಪಿಸಿ ಇನ್ನುಳಿದ ನಾಲ್ಕೂ ಕಲಶಗಳನ್ನು ಕೆಳಗೆ ತಿಳಿಸಿದಂತೆ ಸಕ್ರಮವಾಗಿ ಸ್ಥಾಪಿಸಬೇಕು.

ಯಾವದೇ ಗೋತ್ರದವರಿದ್ದರೂ ಪೂರ್ವಕ್ಕೆ ನ ಕಾರ, ದಕ್ಷಿಣಕ್ಕೆ ಮ ಕಾರ, ಪಶ್ಚಿಮಕ್ಕೆ ಶಿ ಕಾರ, ಉತ್ತರಕ್ಕೆ ವ ಕಾರ, ಮಧ್ಯಕ್ಕೆ ಯ ಕಾರ ಹೀಗೆ ಒಂದೇ ರೀತಿಯಾಗಿ ಸ್ಥಾಪಿಸಬಾರದು. ಒಂದು ವೇಳೆ ಮರವಿನಿಂದಲೋ, ಅಥವಾ ಅವಸರದಿಂದಲೋ, ಹೀಗೆ ಮಾಡಿದರೆ ಅದು ಅಕ್ರಮ ' ಪದ್ಧತಿಯೆನಿಸಿ ದೋಷ ತಲ್ಪುವದು.

ಮೊದಲು ಗುರು ಕಲಶವನ್ನು ಪ್ರಣವಾಕ್ಷರ ಸಹಿತವಾಗಿ ಮಧ್ಯದಲ್ಲಿ ಸ್ಥಾಪಿಸಬೇಕು. ಆ ಬಳಿಕ ಇನ್ನು ನಾಲ್ಕು ಕಲಶಗಳನ್ನು ಪ್ರಣವಾಕ್ಷರ ಸಹಿತವಾಗಿ ಬಲಗಡೆಯಿಂದ ನಾಲ್ಕೂ ದಿಕ್ಕುಗಳಲ್ಲಿ ಕ್ರಮವಾಗಿ ಕೆಳಗೆ ವಿವರಿಸಿದಂತೆ ಸ್ಥಾಪಿಸಬೇಕು ಮತ್ತು ಸ್ವ ಗೋತ್ರದ ಗುರುಗಳೇ ಈ ಸ್ಥಾಪನ ಕಾಲದಲ್ಲಿರಬೇಕಾಗುವದು

## ಪಂಚ ಪೀಠಗಳ ಪಂಚ ಪ್ರಣವುಗಳು

ಕರೇಣುಕಸ್ಯ ನಕಾರೋಽಯಂ ದಾರುಕಸ್ಯ ಮಕಾರಕಃ |
ಘಂಟಾಕರ್ಣಶ್ಶಿಕಾರೋಽಯಂ ಗೋಽಕರ್ಣಸ್ಯ ವಕಾರಕಃ | ||೧||
ಯಕಾರೋ ವಿಶ್ವಕರ್ಣಸ್ಯ ಪ್ರಣವಾಃ ಪರಿಕೀರ್ತಿತಾಃ |
ಯಸ್ಯಾಚಾರ್ಯಸ್ಯ ಪ್ರಣವಂ ತಸ್ಯಾಂ ದಿಶಿಚವರ್ತತೇ ||೨||

ಎಂಬಂತೆ ರೇಣುಕರಿಗೆ ನ ಕಾರವು, ದಾರುಕರಿಗೆ ಮ ಕಾರವು, ಘಂಟಕರ್ಣರಿಗೆ ಶಿ ಕಾರವು, ಧೇನುಕರ್ಣರಿಗೆ ವ ಕಾರವು, ವಿಶ್ವರಾಧ್ಯರಿಗೆ ಯ ಕಾರವು. ಹೀಗೆ ಆಯಾಯ ಪೀಠದವರಿಗೆ ಪಂಚಕ್ಷರಗಳಾಗುತ್ತವೆ. ಈ ಪಂಚಾಕ್ಷರಗಳೇ ''ನಮಃ ಶಿವಾಯ'' ಪಂಚಾಕ್ಷರೀ ಮಹಾಮಂತ್ರವೆನಿಸುವದು.

## ಆಯಾಯ ಸೂತ್ರಕ್ಕನುಸಾರವಾಗೆ ಕಲಶ ಸ್ಥಾಪನಾ ಮಾಡುವ ಕ್ರಮ

ಬಾಳೇಹಳ್ಳಿ ಸಿಂಹಾಸನದ ರೇಣುಕರ ಸ್ವಗೋತ್ರವಾದರೆ—
ರೇಣುಕಸ್ಯ ಸ್ವಗೋತ್ರಾಣಾಮು ಪದೇ ಶೋಽಯಥಾ ಭವೇತ್|
ತದಾ ತತ್ಪ್ರಣವಂ ಮಧ್ಯೇ ನ ಕಾರಂ ಸ್ಥಾಪಯೇದ್ಬುಧೈಃ ||೧||

ಮಕಾರ ದಕ್ಷಿಣೇಕೃತ್ವಾ ಶಿಕಾರಂ ಪಶ್ಚಿಮೇನ್ಯಸೇತ್ ।
ವಕಾರ ಮುತ್ತರೇ ವಿದ್ಯೇದ್ಯಕಾರಂ ಪೂರ್ವತೋನ್ಯಸೇತ್ ॥೨॥




ವಿವಾಹಿತನ ಅಥವಾ ದೀಕ್ಷಾ ವಟುವಿನ ಯಾವ ಸ್ವಗೋತ್ರವಾಗುವದೋ ಮತ್ತು ಮೇಲಿನಂತೆ ಯಾವ ಸಿಂಹಾಸನಕ್ಕೆ ಸೇರುವದೋ ಅದೇ ಅಕ್ಷರವು ಗುರುಕಲಶಾಕ್ಷರವಾಗುವದು. ಹೀಗೆ ಮೇಲಿನ ಪ್ರಮಾಣದಂತೆ ರೇಣುಕರ ಸೂತ್ರವಾದರೆ ನ ಕಾರ ಮಧ್ಯವಾಗಿ ಉಳಿದ ನಾಲ್ಕು ಸ್ಥಾನಗಳಲ್ಲಿ ನಾಲ್ಕು ಪ್ರಣಮಾಕ್ಷರಗಳನ್ನು ಬರೆದು ಕಲಶ ಸ್ಥಾಪಿಸಬೇಕು.

ಸೂಚನೆ:— ವೀರಶೈವರ ಗೋತ್ರಾದಿಗಳನ್ನು ಹಿಂದಿನ ಪ್ರಕರಣದಲ್ಲಿ ಬರೆಯಲಾಗಿದೆ. ನೋಡಿಕೊಳ್ಳಬೇಕು.

ಉಜ್ಜಯಿನಿ ಸಿಂಹಾಸನದ–ದಾರುಕಾಚಾರ್ಯರ ಸ್ವಗೋತ್ರವಾದರೆ—
ದಾರುಕಸ್ಯ ಸ್ವಗೋತ್ರಾಣಾ ಮುಪದೇಶೋ ಯಥಾ ಭವೇತ್ ।
ತದಾ ತತ್ಪ್ರಣವಂ ಮಧ್ಯೇ ಮ ಕಾರಂ ಸ್ಥಾಪಯೇದ್ಬುಧೈಃ ॥
ಶಿಕಾರಂ ದಕ್ಷಿಣೇ ದೇಶೇ ವಕಾರಂ ಪಶ್ಚಿಮೇನ್ಯಸೇತ್ ।
ಯಕಾರಮುತ್ತರೇ ವಿದ್ಯಾನ್ನಕಾರಂ ಪಾರ್ವತೋನ್ಯಸೇತ್ ॥




ಉಜ್ಜಯನಿ ಸಿಂಹಾಸನದ ನಂದಿ ಗೋತ್ರ ವೃಷ್ಟಿ (ಮಳೆ) ಬಗೆಯು ಸ್ವಗೋತ್ರವಾದರೆ ಮ ಕಾರವನ್ನು ಮಧ್ಯದಲ್ಲಿ ಸ್ಥಾಪಿಸಿ ಇನ್ನುಳಿವ ನಾಲ್ಕು ಅಕ್ಷರಗಳನ್ನು ನಾಲ್ಕು ದಿಕ್ಕುಗಳಲ್ಲಿ ಎಡಕ್ಕೆ ತೋರಿಸಿನಂತೆ ಕ್ರಮವಾಗಿ ಬರೆದು ಕಲಶ ಸ್ಥಾಪನೆ ಮಾಡಬೇಕು.

ಹಿಮತ್ಕೇದಾರ ಸಿಂಹಾಸನದ:— ಏಕೋರಾಮಾರಾಧ್ಯರ ಸ್ವಗೋತ್ರವಾದರೆ:—

ಘಂಟಾಕರ್ಣಸ್ಯ ಗೋತ್ರಾಣಾ ಮುಪದೇಶೋ ಯಥಾ ಭವೇತ್ ।
ತದಾ ತತ್ಪ್ರಣವಂ ಮಧ್ಯೇ ಶಿ ಕಾರಂ ಸ್ಥಾಪಯೋದ್ಬುಧೈಃ ॥

ವಕಾರಂ ದಕ್ಷಿಣೇ ಕೃತ್ವಾ ಯಕಾರಂ ಪಶ್ಚಿಮೇನ್ಯಸೇತ್ ।
ನಕಾರ ಮುತ್ತರೇ ಕೃತ್ವಾ ಮಕಾರಂ ಪೂರ್ವತೋನ್ಯಸೇತ್ ॥




ಹಿಮವತ್ಕೇದಾರ ಘಂಟಾಕರ್ಣ ಶಾಖಾ ಅಂದರೆ ಏಕೋರಾಮಾರಾಧ್ಯರ ಸ್ವಗೋತ್ರವಾದರೆ ಶಿಕಾರವನ್ನು ಮಧ್ಯದಲ್ಲಿ ಸ್ಥಾಪಿಸಿ, ಇನ್ನುಳಿದ ನಾಲ್ಕು ಅಕ್ಷರಗಳನ್ನು ಎಡಕ್ಕೆ ತೋರಿಸಿದಂತೆ ಕ್ರಮವಾಗಿ ಬರೆದು ನಾಲ್ಕು ಕಲಶ ಸ್ಥಾಪನೆ ಮಾಡಬೇಕು.

ಶ್ರೀಶೈಲ ಸಿಂಹಾಸನದ:— ಪಂಡಿತಾರಾಧ್ಯರ ಸ್ವಗೋತ್ರವಾದರೆ:-
ಧೇನುಕರ್ಣಸ್ಯ ಗೋತ್ರಾಣೋಮುಪದೇಶೋ ಯಥಾ ಭವೇತ್ ।
ತದಾ ತತ್ಪ್ರಣವಂ ಮಧ್ಯೇ **ವ** ಕಾರಂ ಸ್ಥಾಪಯೇದ್ಬುಧೈಃ ॥
ಯ ಕಾರಂ ದಕ್ಷಿಣೇ ಕೃತ್ವಾನ್ನಕಾರಂ ಪಶ್ಚಿಮೇನ್ಯಸೇತ್ ।
ಮ ಕಾರ ಮುತ್ತರೇ ಕೃತ್ವಾ ಶಿಕಾರ ಪೂರ್ವತೋನ್ಯಸೇತ್ ॥




ಶ್ರೀಶೈಲ ಸಿಂಹಾಸನ ಧೇನುಕರ್ಣ ಶಾಖಾಅಂದರೆ ಪಂಡಿತಾರಾಧ್ಯರ ಸ್ವಗೋತ್ರವಾದರೆ ವ ಕಾರವನ್ನು ಮಧ್ಯದಲ್ಲಿ ಸ್ಥಾಪಿಸಿ ಇನ್ನುಳಿದ ನಾಲ್ಕು ಅಕ್ಷರಗಳನ್ನು ಎಡಕ್ಕೆ ತೋರಿಸಿದಂತೆ ಕ್ರಮವಾಗಿ ಬರೆದು ನಾಲ್ಕೂ ಕಲಶಗಳನ್ನು ಸ್ಥಾಪಿಸಬೇಕು.

ಕಾಶೀ ಸಿಂಹಾಸನದ– ವಿಶ್ವಾರಾಧ್ಯರ ಸ್ವಗೋತ್ರವಾದರೆ—–
ವಿಶ್ವಕರ್ಣಸ್ಯ ಗೋತ್ರಾಣಾಮುಪದೇಶೋ ಯಥಾ ಭವೇತ್ ।
ತದಾ ತತ್ಪ್ರಣವಂ ಮಧ್ಯೇ **ಯ** ಕಾರಂ ಸ್ಥಾಪಯೇದ್ಬುಧೈಃ ।
ನಕಾರಂ ದಕ್ಷಿಣೇ ಕೃತ್ವಾ ಮ ಕಾರಂ ಪಶ್ಚಿಮೇನ್ಯಸೇತ್ ।
ಉತ್ತರ ಶಿಕಾರ ಮುತ್ತರೇ ಕೃತ್ವಾ ವಕಾರಂ ಪೂರ್ವತೋನ್ಯಸೇತ್ ॥




ಕಾಶೀ ಶಿಂಹಾಸನದ– ವಿಶ್ವಕರ್ಣ ಶಾಖಾ ಅಂದರೆ ವಿಶ್ವಾರಾಧ್ಯರ ಸ್ವಗೋತ್ರವಾದರೆ ಯ ಕಾರವನ್ನು ಮಧ್ಯದಲ್ಲಿ ಸ್ಥಾಪಿಸಿ ಇನ್ನುಳಿದ ನಾಲ್ಕು ಅಕ್ಷರಗಳನ್ನು ಎಡಕ್ಕೆ ತೋರಿಶಿದಂತೆ ಕ್ರಮವಾಗಿ ಬರೆದು ನಾಲ್ಕು ಕಲಶಗಳನ್ನು ಸ್ಥಾಪಿಸಬೇಕು.

## ಪಂಚಕಲಶ ಪೂಜಾ ಪ್ರಾರಂಭವು

ಈ ಹಿಂದೆ ಹೇಳಿದ ಪ್ರಕಾರ ಪಂಚಕಲಶಸ್ಥಾಪನಾ ಕ್ರಮವನ್ನು ಅರಿತು ಕೆಳಗೆ ಬರೆವ ಪ್ರಕಾರ ಸಂಕಲ್ಪ ಮಾಡಿ ಗುರುಗಳ ಸಮ್ಮುಖವಲ್ಲಿ ಕೂತು ಯಜಮಾನನು ಅಥವಾ ಆಚಾರ್ಯನು ಪಂಚಕಲಶಗಳನ್ನು ಸ್ಥಾಪಿಸಿ ಪೂಜಿಸಬೇಕು.

ಮೊದಲು ಯಾವತ್ತೂ ಸಂಕಲ್ಪ ಮಾಡಿ ಕೊನೆಗೆ:—

''ಅಸ್ಯಾಂ ಶುಭತಿಥೌಅಮುಕ ಗೋತ್ರೋತ್ಪನ್ನಸ್ಯ ..........ಅಸ್ಯಾ ಶುಭ ತಿಥೌ ಅದ್ಯ ಕರಿಷ್ಯ ಮಾಣ ವಿವಾಹಾಂಗಭೂತ ಅಥವಾ ದೀಕ್ಷಾಂಗಭೂತ ಶ್ರೀ ಪಂಚಕಲಶ ಸ್ಥಾಪನಂ ಕರಿಷ್ಯೇ'' ಎಂದು ಸಂಕಲ್ಪ ಮಾಡಿ ಕೈಯಲ್ಲಿ ಹಿಡಿದ ಜಲಾಕ್ಷತೆ ಪುಷ್ಪಗಳನ್ನು ಕೆಳಗೆ ಬಿಟ್ಟುಬಿಡಬೇಕು

ಪಂಚಕಲಶ ಸ್ಥಾಪನೆಯ ಉಕ್ತಸ್ಥಾನದಲ್ಲಿ ಅಕ್ಕಿ, ಗೋದಿ, ಜೋಳ ಇವುಗಳಲ್ಲಿ ಶಕ್ಯಾನುಸಾರವಾಗಿ ಧಾನ್ಯವನ್ನು ಹಾಕಿ ಚೌಕ ವೇದಿಕೆಯನ್ನಾಗಿ ಮಾಡಬೇಕು. ಅದರ ಮೇಲೆ ಹಿಂದೆ ಹೇಳಿದಂತೆ ಸ್ವಗೋತ್ರಾನುಸಾರವಾಗಿ ಪ್ರಣವಾಕ್ಷರಗಳನ್ನು ಬರೆದು ಮಧ್ಯ ದಕ್ಷಿಣಾದಿಯಾಗಿ ಐದೂ ಕಲಶಗಳನ್ನು ಸ್ಥಾಪಿಸಿ ಕೈಯಿಂದ ನೂತ ನೂಲಿನ ಧಾರದಿಂದ ಐದು ಎಳೆಗಳ ಸೂತ್ರವನ್ನು ಕಲಶಗಳಿಗೆ ಕ್ರಮವಾಗಿ ಸುತ್ತಬೇಕು. ತರುವಾಯ ವಧೂವರರ ಕಡೆಗೆ ಒಂದು ಉದ್ದವಾದ ಸೂತ್ರವನ್ನು, ಗುರುಗದ್ದುಗೆಯ ಕಡೆಗೆ ಒಂದು ಸೂತ್ರವನ್ನೂ ಹಚ್ಚಿ ಈ ಎರಡೂ ಸೂತ್ರಗಳ ತುದಿ ಭಾಗಕ್ಕೆ ವಿಳ್ಯದೆಲೆಯನ್ನು ಮಡಚಿ ಕಟ್ಟಿ ತಯಾರ ಮಾಡಿ ಇಡುವದು. ತದನಂತರ ಕರನ್ಯಾಸ ಅಂಗನ್ಯಾಸವನ್ನು ಪಂಚಬ್ರಹ್ಮ ಮಂತ್ರದಿಂದ ಸಕ್ರಮವಾಗಿ ಮಾಡಿ ಆಹ್ವಾನ ಧ್ಯಾನಗಳನ್ನು ಮಾಡಬೇಕು. ಆ ಬಳಿಕ ಐದೂ ಕಲಶಗಳಲ್ಲಿ—

''ಇಮಂ ಮೇ ಗಂಗೇ ಯಮುನೇ ಸರಸ್ವತಿ ಶತುದ್ರಿಸ್ತೋಮಗ್ಂ
ಸಚತಾಪ ರುಷ್ಣಿಯಾ । ಅಸಿಕ್ನಿಯಾ ಮರುಧ್ವಧೆ ವಿತಸ್ತ ಯಾರ್ಜೀಕೆಯೇ
ಶೃಣುಹ್ಯಾ ಸುಷೋಮಯಾ''

ಎಂಬ ಮಂತ್ರದಿಂದ ಸ್ಥಾಪಿಸಿ ಪೂಜಿಸಿದ ಕುಂಭದೊಳಗಿನ ತೀರ್ಥ ಜಲವನ್ನು ಅಭಿಮಂತ್ರಿಸಿ ಐದೂ ಕಲಶಗಳಲ್ಲಿ ಪಂಚ ಬ್ರಹ್ಮ ಮಂತ್ರದಿಂದ ತುಂಬಬೇಕು. ತದನಂತರ ಹಿಂದೆ ಸ್ವಸ್ತಿ ಪುಣ್ಯಾಹವಾಚನದಲ್ಲಿ ಹೇಳಿದಂತೆ ಕಲಶಗಳಲ್ಲಿ ಗಂಧ, ಅಕ್ಷತೆ, ಚಿಗರು, ರತ್ನ, ಟೆಂಗಿನಕಾಯಿ, ವಸ್ತ್ರ, ನೂಲು, ಬಂಗಾರ ದರ್ಭೆ ಮೊಲಾದವುಗಳನ್ನು ಆಯಾಯ ಮಂತ್ರಗಳಿಂದ ಅವುಗಳನ್ನಿಟ್ಟು ಷೋಡಶೋಪಚಾರಗಳಿಂದ ಪೂಜಿಸಿ ನಮಸ್ಕಾರವಂ ಮಾಡಿ ಪಂಚಾಚಾರ್ಯರನ್ನು ಪಂಚಕಲಶಗಳಲ್ಲಿ ಆಹ್ವಾನಾದಿಗಳನ್ನು ಮಾಬೇಕು.

ಹೇಗೆಂದರೆ:—

ಈಶಾನ ಮುಖೋದ್ಭೂತ ವಿಶ್ವಾರಾಧ್ಯರನ್ನು ಕುರಿತು—

"ಓಂ ನಮೋ ಭಗವತೇ ವಿಶ್ವಾರಾಧ್ಯಾಯ, ಶುದ್ಧ ಸ್ಫಟಿಕವರ್ಣಾಯ, ಈಶಾನಮುಖೋದ್ಭೂತಾಯ, ಮಧ್ಯ ಕಲಶಾಧೀಶ್ವರಾಯ, ಲಿಂಗಯಜ್ಞೋಪವೀತನೇ ಶಿವಲಾಂಛನ ಧಾರಕಾಯ, ಚಿನ್ಮುದ್ರಾಂಕಿತಾಯ, ಅಪರಿಮಿತ ಭಕ್ತ ಗಣಾಧೀಶ್ವರಾಯ, ಬಿಲ್ವ ದಂಡಾಯ, ಪಂಚಸೂತ್ರದಾಯನೇ ಕಾರುಣ್ಯ ಮೂರ್ತಯೇ ನಮಃ। ಓಂ ವಿಶ್ವಾರಾಧ್ಯಾಯ ಮಾಹವಾಹಯಾಮಿ ಸ್ಥಾಪಯಾಮಿ ಪೂಜಯಾಮಿ.

ಹೀಗೆಂದು ಅಕ್ಷತೆಗಳನ್ನು ಹಾಕುವದು. ಆ ಬಳಿಕ:—

ಸದ್ಯೋಜಾತ ಮುಖೋದ್ಭೂತ ರೇವಣಾರಾಧ್ಯಯರನ್ನು ಕುರಿತು—

"ಓಂನಮೋ ಭಗವತೇ ರೇವಣ ಸಿದ್ಧಾಯ, ಹರಿದ್ವರ್ಣಾಯ, ಋಗ್ವೇದಾಧ್ಯಾಯ, ಸದ್ಯೋಜಾತ ಮುಖೋದ್ಭೂತಾಯ ಪೂರ್ವ ಕಲಶಾಧೀಶ್ವರಾಯ, ಲಿಂಗ ಯಜ್ಞೋಪವೀತಿನೇ, ಶಿವಲಾಂಛನ ದಾರುಕಾಯ ದ್ವಾದಶ ಸಹಸ್ರ ಚರ ಲಿಂಗಾಧ್ಯಕ್ಷಾಯ ಗುರು ಧರ್ಮ ಭಿಕ್ಷಾಂಧೀ ಹೀತಿ ಮುದ್ರಾಂಕಿತಾಯ ಶಿವ ಪಂಚಾಕ್ಷರೀ ಜಾಪಕಾಯ, ಅಶ್ವತ್ಥ ದಂಡಾಯ ಪಡ್ವಿಡಿಸೂತ್ರ ವಿಧಾಯಿನೇ ಕಾರುಣ್ಯಮೂರ್ತಯೇ ನಮಃ ॥"

ಓಂ ರೇವಣಾರಾಧ್ಯಂ ಆವಾಹಯಾಮಿ ಸ್ಥಾಪಯಾಮಿ ಪೂಜಾಯಾಮಿ ಹೀಗೆಂದು ಅಕ್ಷತೆಗಳನ್ನು ಹಾಕುವದು. ತದನಂತರ:—

ವಾಮದೇವ ಮುಖೋದ್ಭೂತ ಮರುಳಾರಾಧ್ಯರನ್ನು ಕುರಿತು:—

ಓಂ ನಮೋ ಭಗವತೇ ಮರುಳಾರಾಧ್ಯಾಯ ಶ್ವೇತ ವರ್ಣಾಯ ಯಜುರ್ವೇದಾಧ್ಯಾಯ ವಾಮದೇವ ಮುಖೋದ್ಭೂತಾಯ, ದಕ್ಷಿಣ ಕಲಶಾಧೀಶ್ವರಾಯ, ಲಿಂಗ ಯಜ್ಞೋಪವೀತನೇ, ಶಿವಲಾಂಛನ ಧಾರಕಾಯ ಅಸಂಖ್ಯಾತ ಚರಲಿಂಗಾಧ್ಯಕ್ಷಾಯ ಭವತಿ ಭಿಕ್ಷಾಂದೇಹಿ ಮುದ್ರಾಂಕಿತಾಯ ಗಾಯತ್ರೀ ಜಪಕಾಯ ಪಲಾಶ ದಂಡಾಯ, ವೃಷ್ಟಿ ಸೂತ್ರ ವಿಧಾಯಿನೇ ಕಾರುಣ್ಯ

ಮೂರ್ತಯೇ ನಮಃ ಓಂ ಮರುಳಾರಾಧ್ಯಂ ಆವಾಹಯಾಮಿ ಸ್ಥಾಪಯಾಮಿ ಪೂಜಯಾಮಿ ಎಂದು ಅಕ್ಷತೆಗಳನ್ನು ಹಾಕುವದು. ತರುವಾಯ:—

ಅಘೋರ ಮುಖೋದ್ಭೂತ ಏಕೋರಾಮಾರಾಧ್ಯರನ್ನು ಕುರಿತು:—

ಓಂ ನಮೋ ಭಗವತೇ, ಏಕೋರಾಮಾರಾಧ್ಯ ದೇವಾಯ ಸಾಮವೇದಾಧ್ಯಾಯ, ರಕ್ತ ವರ್ಣಾಯ ಅಘೋರ ಮುಖೋದ್ಭೂತಾಯ ಪಶ್ಚಿಮ ಕಲಶಾಧೀಶ್ವರಾಯ, ಲಿಂಗ ಯಜ್ಞೋಪವೀತಿನೇ ಶಿವಲಾಂಛನ ಧಾರಕಾಯ, ತ್ರಿಸಹಸ್ರ ಚರಲಿಂಗಾಧ್ಯಕ್ಷಾಯ ಲಿಂಗಾರ್ಪಿತ ಭಿಕ್ಷಾಂದೇಹಿ ತ್ರಿಮುದ್ರಾಂಕಿತಾಯ ಪ್ರಣವಮಂತ್ರ ಜಪಕಾಯ ವೇಣು ದಂಡಾಯ ಲಂಲನಸೂತ್ರ ವಿಧಾಯಿನೇ ಕಾರುಣ್ಯ ಮೂರ್ತಯೇ ನಮಃ ॥ ಓಂ ಏಕೋರಾಮಾರಾಧ್ಯಂ ಆವಾಹಯಾಮಿ ಸ್ಥಾಪಯಾಮಿ ಪೂಜಯಾಮಿ ಎಂದು ಅಕ್ಷತೆಗಳನ್ನು ಹಾಕುವದು. ಆ ಬಳಿಕ—

ತತ್ಪುರುಷ ಮುಖೋದ್ಭೂತ ಪಂಡಿತಾರಾಧ್ಯರನ್ನು ಕುರಿತು:—

"ಓಂ ನಮೋ ಭಗವತೇ, ಪಂಡಿತಾರಾಧ್ಯಾಯ ಅಥರ್ವ ಶಾಖಾಧ್ಯಾಯಿ ಹರಿದ್ವರ್ಣಾಯ, ತತ್ಪುರುಷ ಮುಖೋದ್ಭೂತಾಯ ಉತ್ತರ ಕಲಶಾಧೀಶ್ವರಾಯ ಲಿಂಗ ಯಜ್ಞೋಪವೀತಿನೇ, ಶಿವಲಾಂಛನ ಧಾರಕಾಯ, ಷಟ್‌ಸಹಸ್ರ ಚರಲಿಂಗಾಧ್ಯಕ್ಷಾಯ ದಯಾಧರ್ಮ ಭಿಕ್ಷಾಂದೇಹಿ ತ್ರಿಮುದ್ರಾಂಕಿತಾಯ ಓಂ ನಮೋಹಂಸಾಯೇತಿ ಜಾಪಕಾಯ ನ್ಯಗ್ರೋಧ ದಂಡಾಯ ಮುಕ್ತಾಗುಚ್ಛ ಸೂತ್ರ ವಿಧಾಯಿನೇ, ಕಾರುಣ್ಯ ಮೂರ್ತಯೇ ನಮಃ ॥"

ಓಂ ಪಂಡಿತಾಧ್ಯಂ ಆವಾಹಯಾಮಿ ಸ್ಥಾಪಯಾಮಿ ಪೂಜಯಾಮಿ ಎಂದು ಅಕ್ಷತೆಗಳನ್ನು ಹಾಕುವದು.

ಆ ಬಳಿಕ ಮತ್ತೊಮ್ಮೆ ಷೋಡಶೋಪಚಾರದಿಂದ ಪೂಜಿಸಬೇಕು. ತದನಂತರ ಮೂಲ ಪಂಚಾಕ್ಷರೀ (ಓಂ ನಮಃ ಶಿವಾಯ) ಮಂತ್ರದಿಂದ ೧೦೮ ಸಾರೆ ಜಪ ಮಾಡಿ ಪ್ರಾಣಪ್ರತಿಷ್ಠೆಯನ್ನು ಮಾಡಬೇಕು. ಬಳಿಕ ಒಂದು ಹೊಸ ವಸ್ತ್ರವನ್ನು ಹೊದಿಸಬೇಕು.

॥ ಇತಿ ಪಂಚಕಲಶ ಸ್ಥಾಪನಾ-ಪೂಜಾ ಕ್ರಮ ಸಮಾಪ್ತಿ ॥



# ಶುಕ್ಲ ಯಜುರ್ವೇದೀಯ ಶ್ರೀ ಗಣೇಶ ಪ್ರಾರ್ಥನೆ

ಶ್ರೀ ಗಣೇಶಾಯ ನಮಃ ॥ ಹರ ಓಂ ॥ ಗಣಾನಾನ್ ತ್ವಾಗಣಪತಿಗ್ಂ ಹವಾಮಹೇ ಪ್ರಿಯಾಣಾನ್ ತ್ವಾಪ್ರಿಯಪತಿಗ್ಂ ಹವಾಮಹೇ ನಿಧೀನಾನ್ತ್ವಾನಿಧಿ ಪತಿಗ್ಂ ಹವಾಮಹೆವ್ವಸೋಮಮ ॥ ಆಹಮಜಾನಿಗರ್ಭ್ಧಮಾ

ತ್ರೈವ ಮಜಾಸಿಗರ್ಭ್ರಥರ್ವ್ ॥ ೧ ॥ ಗಾಯತ್ರೀತ್ರಿಷ್ಟುವ್ ಜಗತ್ಯನುಷ್ಟುಪ್ಪ ಙ್‌ಕ್ತ್ಯಾಸಹ॥ ಬೃಹತ್ಯುಷ್ಣಿ ಹಾಕುಕುವ್ ಸೂಚೀಭಿಃ ಶಮ್ಯ್ರನ್‌ತುತ್ವಾ ॥೨॥ ದ್ವಿಪದಾಯಾಶ್ಚ ತುಷ್ಪ್ರದಾಸ್ತ್ರಿಪದಾಯಾಶ್ಚಷಟ್ ಪದಾಃ ॥ ವಿಚ್ಛನ್ದಾ ಯಾಶ್ಚ ಸಚ್ಛನ್ದಾಃ ಸೂಚೀಭಿಃ ಶಮ್ಯ್ರನ್‌ತುತ್ವಾ ॥ ೩ ॥ ಸಹನ್ತೋಮಾಃ ಸಹಚ್ಛನ್ದಸ ಆವೃತಂ ಸಹಪ್ರಮಾ ಋಷಯಃ ಸಪ್ತದೈವ್ಯಾಃ ॥ ಪೂರ್ವೇಷಾಮ್ಪನ್ಥಾ ಮನುದೃತ್ಯಧೀರಾಽ ಅನ್ವಾಲೇಭಿರೇರತ್ಥ್ಯೀ ನರಶ್ಮೀನ್ ॥ ೪ ॥ ಓಂ ಯಜ್ಜಾಗ್ರತೋದೂರ ಮುದೈತಿದೈವನ್ತದುಸುಪ್ತಸ್ಯತಥೈವೈತಿ ॥ ದೂರಙ್ಗಮಞ್ಜ್ಯೋತಿಷಾಞ್ಜ್ಯೋತಿರೇಕನ್ತನ್ಮೇ ಮನಃ ಶಿವಸಙ್ಕಲ್ಪಮಸ್ತು ॥ ೫ ॥ ಯೇನಕರ್ಮಾಣ್ಯಪಸೋ ಮನೀಷಿಣೋ ಯಜ್ಞೇಕೃಣ್ವನ್ತಿವ್ವಿದಥೇಷುಧೀರಾಃ ॥ ಯದಪೂರ್ವಂಯ್ಯಕ್ಷಮನ್ತಃ ಪ್ರಜಾನಾನ್ ತನ್ಮೇ ಮನಃ ಶಿವಸಙ್ಕಲ್ಪಮಸ್ತು ॥ ೬ ॥ ಯತ್ಪ್ರಜ್ಞಾನಮುತ ಚೇತೋಧೃತಿಶ್ಚ ಯಜ್ಜ್ಯೋತಿರನ್ತರಮೃತಮ್ಪ್ರಜಾಸು ॥ ಯಸ್ಮಾನ್ನಋತೆ ಕಿಞ್ಚನಕರ್ಮಕ್ರಿಯತೇತನ್ಮೇಮನಃ ಶಿವಸಙ್ಕಲ್ಪಮಸ್ತು ॥ ೭ ॥ ಯೇನೇದಮ್ಭೂತಮ್ಭುವನಮ್ಭವಿಷ್ಯತ್ಪರಿಗೃಹೀತಮಮೃತೇನಸರ್ವ್ವಮ್ ॥ ಯೇನ ಯಜ್ಞಸ್ತಾಯತೆಸಪ್ತಹೋತಾತನ್ಮೇಮನಃ ಶಿವಸಙ್ಕಲ್ಪಮಸ್ತು ॥ ೮ ॥ ಯಸ್ಮಿನ್ನೃಚಃಸಾಮ ಯಜೂಗ್‌ಂಷಿಯಸ್ಮಿನ್ಪ್ರತಿಷ್ಠಿತಾರಥನಾಭಾವಿವಾರಾಃ॥ ಯಸ್ಮಿಂಶ್ಚಿತ್ತಗ್‌ಂ ಸರ್ವಮೋತಮ್ಪ್ರಜಾನಾನ್ತನ್ಮೇ ಮನಃ ಶಿವಸಙ್ಕಲ್ಪಮಸ್ತು ॥ ೯ ॥ ಸುಷಾರಥಿರಶ್ವಾನಿವಯನ್ಮನುಷ್ಯಾನ್ನೇನೀಯತೇ ಭೀಶುಭಿರ್ವ್ವಾಜಿನಇವ| ತ್‌ಹೃತ್ಪ್ರತಿಷ್ಠನ್ ಯದಜಿರಞ್ಜಿ ವಿಷ್ಠನ್ತನ್ಮೇಮನಃ ಶಿವ ಸಙ್ಕಲ್ಪ ಮಸ್ತು ॥ ೧೦ ॥ ಇತಿ ಶ್ರೀ ಗಣೇಶ ಪ್ರಾರ್ಥನೆ ಸಮಾಪ್ತಃ ॥

# ಪಂಚಕಲಶಗಳಿಗೆ ಪರಡಿಳನ್ನಿಡುವ ವಿಧಾನ

ವೀರಶೈವ ಧರ್ಮ ಪದ್ಧತಿ ಪ್ರಕಾರವಾಗಿ ದೀಕ್ಷಾ ವಿವಾಹ ಹಾಗೂ ಚರ ಪಟ್ಟಾ ಅಧಿಕಾರ ಮೊದಲಾದ ಧಾರ್ಮಿಕ ವಿಧಾನಗಳಲ್ಲಿ ಪಂಚಕಲಶ ಸ್ಥಾಪನೆ ಮಾಡಿ ಪಂಚಾಚಾರ್ಯರ ಸಾಕ್ಷಿಭೂತವಾಗಿ ಆಯಾಯ ವಿಧಾನಗಳನ್ನು ಪೂರೈಸಬೇಕಾಗುವದು. ಈ ಪಂಚಕಲಶಗಳಿಗೆ ಪಂಚ ಪರಡಿಗಳನ್ನೂ ಉಪ ಪರಡಿಗಳನ್ನೂ ಒಟ್ಟಾರೆ ೧೦ ಪರಡಿಗಳನ್ನು ಇಟ್ಟು ಫಲ, ನೇವೇದ್ಯ, ದಕ್ಷಿಣೆ,

ತಾಂಬೂಲ ಮೊದಲಾದವುಗಳನ್ನು ಇಟ್ಟು ವಿಧಾನೋಕ್ತವಾಗಿ ಪೂಜೆ ಮಾಡ ಬೇಕು.

ಪಂಚಾಚಾರ್ಯರಂತೆ ಐವರು ವೃತ್ತ್ಯಾಚಾರ್ಯರೂ ಇರುತ್ತಾರೆ. ಈ ಹತ್ತು ಆಚಾರ್ಯರಿಗೆ ಒಟ್ಟು ೧೦ ಪರಡಿಗಳನ್ನು ಇಡಬೇಕಾಗುವದು. ಈ ಪರಡಿಗಳಲ್ಲಿ ಫಲ, ದಕ್ಷಿಣೆ ಮೊದಲಾದವುಗಳನ್ನು ಕಾರ್ಯಕರ್ತನು ತನ್ನ ಶಕ್ತ್ಯನುಸಾರವಾಗಿ ಇಡಬೇಕು. ಇಲ್ಲಿ ವೃತ್ತ್ಯಾಚಾರ್ಯರೆಂದರೆ— ೧) ಹಿರೇಮಠದವ, ೨) ಮಠಪತ್ತಿ, ೩) ಗಣಾಚಾರಿ, ೪) ಕುಮಾರಿ, ೫) ಸ್ಥಾವರಿಕ ಎಂಬರೈವರು ಇರುತ್ತಾರೆ. ಇವರು ಮುಖ್ಯವಾಗಿ ವೀರಶೈವ ಸಮಾಜದ ಕಾರ್ಯಗಳನ್ನು ಬೇರೆ ಬೇರೆಯಾಗಿ ಹೊಣೆಗಾರಿಕೆಯಿಂದ ಮಾಡುವರು. ಆ ಕಾರಣ ಅವರಿಗೆ ಪರಡಿಯಲ್ಲಿ ಭಾಗವನ್ನು ಕೊಡಬೇಕಾಗುವದು.

## ಪರಡಿಗಳನ್ನು ಹಂಚಿಕೊಳ್ಳುವಿಕೆ.

ಪಂಚಕಲಶಗಳಿಗೆ ಪಂಚ ಮುಖ್ಯ ಪರಡಿಗಳನ್ನು ಪಂಚ ಉಪ ಪರಡಿಗಳನ್ನು ಇಟ್ಟಿದ್ದರಲ್ಲಿ ಪಂಚ ಪರಡಿಗಳನ್ನು ಸರ್ವ ಚರಪಟ್ಟಾಧಿಕಾರಿಗಳೂ, ಎಲ್ಲ ಮಠಾಧೀಶ್ವರರೂ ತಮ್ಮ ತಮ್ಮ ಸಿಂಹಾಸನದ ಒಂದೊಂದು ಪರಡಿಗಳನ್ನು ತೆಗೆದುಕೊಳ್ಳಬೇಕು. ಒಂದು ಸಿಂಹಾಸನಕ್ಕೆ ಸಂಬಂಧಿಸಿದ ಎಲ್ಲ ಸೂತ್ರದ ಮಠಾಧೀಶ್ವರರೂ, ಚರಪಟ್ಟಾಧಿಕಾರಿಗಳೂ ಕೂಡಿಕೊಂಡು ಸಮನಾಗಿ ಅದೇ ಒಂದು ಪರಡಿಯಲ್ಲಿ ಹಂಚಿಕೊಳ್ಳಬೇಕು ಮತ್ತು ಆ ಸಿಂಹಾಸನಕ್ಕೆ ಸಂಬಂಧಿಸಿದ ಉಪ ಸೂತ್ರದ ಮಠಾಧಿಕಾರಿಗಳೂ ಸಹ ಆ ಒಂದೇ ಪರಡಿಯಲ್ಲಿ ಹಂಚಿಕೊಳ್ಳಬೇಕು. ಆದರೆ ಚರಗಟ್ಟಾಧಿಕಾರಿಗಳಿಗೆ ಮಾತ್ರ ದುಪ್ಪಟ್ಟು ಕಾಣಿಕೆಯ ಹಕ್ಕು ಇರುವದು.

ಉದಾಹರಣಾರ್ಥವಾಗಿ ಪಡ್ವಿಡಿ ಸೂತ್ರ ಬಾಳೆಹೊನ್ನೂರ ಸಿಂಹಾಸನಕ್ಕೆ ಸಂಬಂಧಿಸಿದ ಮುಖ್ಯ ಸೂತ್ರದವರೂ, ಉಪಸೂತ್ರದವರೂ ಕೂಡಿಕೊಂಡು, ಇದರಲ್ಲಿ ಮಠಾಧಿಪತಿಗಳಾಗಲಿ ಅಥವಾ ಚರಪಟ್ಟಾಧಿಕಾರಿಗಳಾಗಲೀ ಎಲ್ಲರೂ ಕೂಡಿಕೊಂಡು ಒಂದೇ ಪರಡಿಯಲ್ಲಿ ಸಮನಾಗಿ ಹಂಚಿಕೊಳ್ಳುವರು. ಈ ಪ್ರಕಾರ ಐದೂ ಸಿಂಹಾಸನಕ್ಕೆ ಸಂಬಂಧಿಸಿದ ಸರ್ವ ಮಠದವರೂ, ಎಲ್ಲ ಚರಪಟ್ಟಾಧಿಕಾರಿಗಳೂ ಕೂಡಿಕೊಂಡು ಎಷ್ಟೇ ಜನರಿದ್ದರೂ ಸಂಬಂಧಿಸಿದ ಒಂದೇ ಪರಡಿಯಲ್ಲಿ ಸಮನಾಗಿ ಹಂಚಿಕೊಳ್ಳಬೇಕು. ಹಂಚಿಕೊಂಡರೆ ಕಡಿಮೆ ಸಿಗುವದೆಂಬ ದುರಾಶೆಯಿಂದ ಪೂರಾ ಪರಡಿಯನ್ನು ಕೇವಲ ಒಬ್ಬರೇ ಅನ್ಯಾಯವಾಗಿ ಅಪೇಕ್ಷಿಸಬಾರದು. ಹೀಗೆ ಅನ್ಯಾಯವಾಗಿ ಅನ್ಯಾಯವಾಗಿ ಅಪೇಕ್ಷೆ ಮಾಡಿದರೆ ಅದು ಮಹಾ ದೋಷ ಪ್ರಾಪ್ತಿಯಾಗುವದು.



# ವೀರಶೈವರ ಶೀಲಗಳ ವಿಚಾರಗಳು

## ೭೪ ಮುಖ್ಯ ಶೀಲಗಳು

೧) ಇಷ್ಟ ಲಿಂಗವನ್ನು ತ್ರಿಕಾಲದಲ್ಲಿ ಪೂಜಿಸುವದು. ೨) ಸದಾ ಗುರು ಲಿಂಗ ಜಂಗಮರಲ್ಲಿ ಭಕ್ತಿಯನ್ನಿಟ್ಟು ಸ್ಥಾವರ ಮೂರ್ತಿ ಪೂಜೆಯನ್ನು ತೊರೆದು ಲಿಂಗಪೂಜಾ ನಿಷ್ಠಾವಂತನಾಗುವದು. ೩) ವಂಚನೆಯಿಂದ ಪಂಕ್ತಿ ಭೇದವನ್ನು ಮಾಡದಿರುವದು, ೪) ತೀರ್ಥಯಾತ್ರೆ, ಕ್ಷೇತ್ರ ಪರ್ಯಟನ ಮಾಡದಿದ್ದು ಸ್ಥಾವರಲಿಂಗ ಪೂಜೆಯನ್ನು ಬಿಡುವದು. ೫) ಉಪವಾಸಾದಿ ವ್ರತಗಳನ್ನು ಮಾಡಬಾರದು [ ಶಿವರಾತ್ರಿ ಉಪವಾಸ ಸಹ ತ್ಯಾಜ್ಯವು ]. ೬) ಅಲಿಂಗಿಯು ಮಾಡಿದ ಪಾಕ [ ಭವಿ ಪಾಕ ] ವನ್ನು ತ್ಯಾಜ್ಯಮಾಡುವದು. ೭) ಪಾತ್ರೆಗೆ ತುಂಬಾ ಪವಾಡ[ವಸ್ತ್ರ]ವನ್ನು ಕಟ್ಟುವದು. ೮) ಪಂಚ ಮಹಾ ಸೂತಕಗಳನ್ನು ತ್ಯಾಜ್ಯ ಮಾಡುವದು. [ಜನನ,ಮರಣ, ಪ್ರೇತ,ಪ್ರಸೂತ ಹಾಗೂ ಋತು ಇವು ಪಂಚ ಸೂತಕಗಳು]. ೯) ಸದಾ ನೀರನ್ನು ಶಿವ ಮಂತ್ರದಿಂದ ಶುದ್ಧೀಕರಿಸುವದು. ೧೦) ಮನೆಯಲ್ಲಿಯ ಪಾತ್ರೆಗಳಿಗೆಲ್ಲ ಲಿಂಗ ಮುದ್ರೆಯನ್ನು ಹಾಕುವದು. ೧೧) ಮನೆಯಲ್ಲಿಯ ಸರ್ವ ಪಶುಗಳಿಗೆ ಲಿಂಗಾಂಗಿಗಳಿಂದ ಮೇವು ತರಿಸಿ ಹಾಕುವದು ೧೨) ಡಾಂಭಿಕತನದಿಂದ ಶಿವಪೂಜೆಯನ್ನು ಮಾಡದಿರುವದು. ೧೩) ನಿಂದ್ಯ ಶಬ್ದಗಳನ್ನು ಕೇಳದಿರುವದು. ೧೪) ಜಂಗಮಕ್ಕೆ ಧನ–ಮನಗಳಿಂದ ಸೇವೆ ಮಾಡುವದು. ೧೫) ಶರೀರಕ್ಕೆ ಆಚಾರವನ್ನೂ, ಮನಸ್ಸಿಗೆ ಸುಜ್ಞಾನವನ್ನೂ ಆಶ್ರಯ ಮಾಡಿಕೊಳ್ಳುವದು. ೧೬) ಸೂರ್ಯ–ಚಂದ್ರರನ್ನು ಗ್ರಹಣದಲ್ಲಿ ನೋಡದಿರುವದು. ೧೭) ಅತ್ಯವಶ್ಯವಿದ್ದಾಗ ಪಾರಿಮಾರ್ಜಿತ ಉಪವಾಸ ಮಾಡುವದು. ೧೮) ಸಕಲವೂ ನಶ್ವರವೆಂದು ನಿರಾಶೆಯುಳ್ಳವರಾಗಿರುವದು. ೧೯) ಹತ್ತು ವಾಯುಗಳ ಮಾರ್ಗವನ್ನು ತುಳಿಯದೇ ನಿಷೇಧ ಮಾಡುವದು. ೨೦) ಶರಣರಲ್ಲಿ ಶಿವ ನಿವಾಸವಿರುವದೆಂದು ತಿಳಿಯುವದು. ೨೧) ಏಕಾದಶ ಪ್ರಸಾದ, ಹಾಗೂ ದಶವಿಧ ಪಾದೋದಕಗಳ ಮರ್ಮ ತತ್ವವನ್ನು ತಿಳಿಯುವದು. ೨೨) ಎಲ್ಲ ಇಂದ್ರಿಗಳನ್ನು ಲಿಂಗಮುಖವಾಗಿ ಮಾಡಿ ಸಕಲ ವಿಧ ಸೌಖ್ಯಗಳನ್ನು ಹೊಂದುವದು. ೨೩) ಷಟ್‌ಸ್ಥಲ ಮಾರ್ಗದಿಂದ ನಡೆಯುವದು. ೨೪) ತಾನಾಗಿಯೇ ಇಚ್ಛಿಸದಲೇ ಬಂದದ್ದು ಲಿಂಗಭೋಗವೆಂದೂ, ಇಚ್ಛಿಸಿಬಂದದ್ದಕ್ಕೆ ಭೋಗವೆಂದೂ ತಿಳಿಯುವದು. ೨೫) ಆವಾಹನ—ವಿಸರ್ಜನೆಗಳನ್ನು ನಿಷೇಧ ಮಾಡಿ ಅಂಗ ಲಿಂಗವೆಂದು ಭಾವಿಸಿ ಲಿಂಗಾನುಭಾವಿಯಾಗಿರುವದು. ೨೬) ತನು–ಮನಗಳಿದ್ದರೂ ಅವುಗಳ ಗುಣವನ್ನಳಿದು ಅಂಗವೇ ಲಿಂಗವಾಗಿ ಸಹ ಭೋಜನ ಮಾಡುವದು. ೨೭) ಶಿವ ಕಾರ್ಯದ ಹೊರ್ತಾಗಿ ಮನದಲ್ಲಿ ಅನ್ಯ

ಯಾವ ಕಾರ್ಯಗಳನ್ನೂ ನೆನೆಯದಿರುವದು. ೨೮) ರೋಗಿಯಾದಾಗ ಮಣಿ ಮಂತ್ರ-ನಾರು ಬೇರುಗಳನ್ನು ನಿಷೇಧ ಮಾಡುವದು. ೨೯) ಅಲಿಂಗಿಗಳು ಬೆಳೆದ ಬೆಳೆಯನ್ನು ಉಪಯೋಗ ಮಾಡದಿರುವದು. ೩೦) ಅಲಿಂಗಿಗಳ ಕೂಡ ಮಾತಾಡುವದು, ನೋಡುವದೂ ಕೂಡ ನಿಷೇಧ ಮಾಡುವದು. ೩೧) ಮಣಿ-ಹಗ್ಗ ಮೊದಲಾದ ರೈತ ಸಾಮಗ್ರಿಗಳ ಮೇಲೆ ಶಿವಲಿಂಗ ಮುದ್ರೆಯನ್ನು ಒತ್ತುವದು. ೩೨) ಲಿಂಗಕ್ಕೆ ಉಪಯೋಗ ಮಾಡುವ ಹೂದೋಟಕ್ಕೆ ಭವಿಗಳ ದೃಷ್ಟಿಬೀಳದಂತೆ ಸುತ್ತಲೂ ಪರದೆಯನ್ನು ಕಟ್ಟುವದು. ೩೩) ಆಕಳು ಹಾಗೂ ಬಸವರ ಸಂಯೋಗಕಾಲದಲ್ಲಿ ಹಾಕಿದ ಶೆಗಣಿಯು ಷಡ್ಮಾರ್ಜನೆಗೆ ಯೋಗ್ಯವಾದುದರಿಂದ ಅದನ್ನೇ ಉಪಯೋಗಿಸುವದು. ೩೪) ಹೊಲ-ತೋಟಗಳಲ್ಲಿ ಲಿಂಗಮುದ್ರೆ ಕಲ್ಲುಗಳನ್ನು ಮೂಲೆ ಮೂಲೆಗೆ ನಿಲ್ಲಿಸುವದು. ೩೫) ಆಕಳ-ಎತ್ತು-ಕರಗಳಿಗೆ ಲಿಂಗ ಮುದ್ರೆಯನ್ನು ಒತ್ತುವದು. ೩೬) ಶಿವಭಕ್ತ ಕುಂಬಾರನಿಂದ ತಯಾರಾದ ಗಡಿಗೆ ಮಡಿಕೆಗಳನ್ನು ಬಳಿಕೆ ಮಾಡುವದು. ೩೭) ತಾವಿರುವ ಮನೆಯಲ್ಲೂ ಲಿಂಗ ಮುದ್ರಿತ ಕಲ್ಲುಗಳನ್ನು ನಿಲ್ಲಿಸಬೇಕು. ೩೮) ಭವಿಗಳಿಗೆ ಕೈ ಮುಗಿಯದಿರುವದು. ೩೯) ಶಿವಭಕ್ತನೇ ಕುಲಜನೆಂದು ತಿಳಿಯುವದು. ೪೦) ಜಲದಿಂದ ಬರುವ ನೀರಿನಿಂದ ಬಟ್ಟೆಗಳನ್ನು ತೊಳೆದು ಮಡಿ ಮಾಡುವದು. ೪೧) ಕಂಬಳಿ ಹಾಗೂ ತೊಗಲಿನ ಪಾದರಕ್ಷೆಗಳನ್ನು ತ್ಯಾಜ್ಯ ಮಾಡುವದು. ೪೨) ಭವಿಗಳು ನೇಯ್ದು ತಯಾರ ಮಾಡಿದ ಬಟ್ಟೆಯನ್ನು ಉಡುತೊಡುವದಿರುವದು. ೪೩) ಸಮುದ್ರದ ಉಪ್ಪನ್ನು ಉಪಯೋಗ ಮಾಡದಿರುವದು. (ಕಲ್ಲುಪ್ಪನ್ನು ಉಪಯೋಗಿಸಬೇಕು.) ೪೪) ಶಿವಭಕ್ತನಾದ ಕ್ಷೌರಿಕನಿಂದ ಕ್ಷೌರ ಮಾಡಿಸುವದು. ೪೫) ಸುವಾಸಿಕ ದ್ರವ್ಯಗಳನ್ನು ಎಮ್ಮೆಯ ಹಾಲನ್ನು ನಿಷೇಧ ಮಾಡುವದು. (ಕೇವಲ ಆಕಳ ಹಾಲನ್ನು ಉಪಯೋಗಿಸಬೇಕು) ೪೬) ಶಿವಶರಣರರೂಪವನ್ನಾಗಲೀ ಅಥವಾ ಪಾಂಡಿತ್ಯವನ್ನಾಗಲೀಧಿಕ್ಕರಿಸದಿರುವದು. ೪೭) ಶಿವಭಕ್ತರ ಜಾತಿ ಸೂತಕಗಳನ್ನು ನೋಡದಿರುವದು. ೪೮) ಸ್ತ್ರೀಯರು ಗರ್ಭ ಧರಿಸಿದ ೮ನೇ ತಿಂಗಳಲ್ಲಿ ಲಿಂಗಧಾರಣವನ್ನು ಗರ್ಭಕ್ಕೆ [ಕೂಸಿಗೆ] ಮಾಡಿಸುವದು. ೪೯) ಜಂಗಮ ಪಾದೋದಕ ಪ್ರಸಾದವನ್ನು ನಿತ್ಯದಲ್ಲಿ ಸೇವಿಸುವದು ೫೦) ಭವಿಗಳ ಸಂಗಡ ಯಾವದೇ ದೃಷ್ಟಿಯಿಂದ ಮೋಹ, ಸ್ನೇಹ ಮಾಡದಿರುವದು. ೫೧) ತನ್ನಂತೆ ಪತ್ನಿಗೂ ಗುರೂಪದೇಶವನ್ನು ಮಾಡಿಸಬೇಕು [ದೀಕ್ಷೆ ಕೊಡಿಸಬೇಕು]. ೫೨) ದಿನಕರ್ಮ ಮೊದಲಾದವುಗಳನ್ನು ತ್ಯಾಜ್ಯ ಮಾಡುವದು. ೫೩) ತಾನಿರುವ ಸ್ಥಾನದಲ್ಲಿ [ಮನೆಯಲ್ಲಿ]ಕುರಿ-ಕೋಳಿ-ಹಂದಿ ಮೊದಲಾದ ಪ್ರಾಣಿಗಳ ಪ್ರವೇಶವನ್ನು ಮಾಡಿಸದಿರುವದು. ೫೪) ಗುರುಲಿಂಗ ಜಂಗಮರ ಗುಣಗಳನ್ನು ಎಣಿಸದೆ ಅವರು ಶಿವಸ್ವರೂಪರೆಂದು ತಿಳಿದು ಪೂಜಿಸುವದು. ೫೫) ಶೀಲವೇ ಜ್ಞಾನಮಯವಾಗಿ ಜ್ಞಾನವೇ ಶೀಲಮಯವಾಗಿ ಏಕರೂಪವಾದ ಪರಮಾನಂದದಲ್ಲಿರುವದು.

೫೬) ಸುವಾಸಿಕ [ಪರಿಮಳ] ದ್ರವ್ಯಗಳನ್ನು ತ್ಯಾಜ್ಯ ಮಾಡುವದು. ೫೭) ಎಮ್ಮೆಯ ಹಾಲನ್ನು ಊಟಮಾಡಬಾರದು. ೫೮) ಅಲಿಂಗಿಯ ಕಡೆಯಿಂದ ನೇಯಿಸಿದ ಬಟ್ಟೆಯನ್ನು ಉಪಯೋಗಿಸುವದು. ೫೯) ಸಂಕಟ ಬಂದಾಗ ಸುಳ್ಳು ಹೇಳದಿರುವದು.೬೦) ಮಾದಕ ಪೇಯಗಳನ್ನು ತ್ಯಾಜ್ಯಮಾಡುವದು. ೬೧) ಅನ್ಯ ದುಶ್ಯಬ್ದಗಳನ್ನು ಕೇಳದಿರುವದು ೬೨) ನವರತ್ನಾಭರಣ ಭೂಷಿತನಾಗದಿರುವದು. ೬೩) ಅಂತರಂಗ ಶುದ್ಧಿಯಿಂದ ನಡೆಯುವದು. ೬೪) ಶೀಲವೇ ಅಲಂಕಾರವೆಂದು ತಿಳಿಯುವದು.

ಈ ಪ್ರಕಾರವಾಗಿ ಮುಖ್ಯ ೬೪ ಶೀಲಗಳು ವೀರಶೈವರಲ್ಲಿ ಹೇಳಲ್ಪಟ್ಟಿವೆ.

## ಶ್ರೀ ಬಸವಣ್ಣನವರ ನೀತಿಪ್ರದ ವಚನಗಳು.

೧) ಕಳಬೇಡ । ಕೊಲಬೇಡ । ಹುಸಿಯ ನುಡಿಯಲು ಬೇಡ । ಅಸೂಯೆಪಡಬೇಡ । ತನ್ನ ಬಣ್ಣಿಸಬೇಡ । ಇದಿರ ಹಳಿಯಲು ಬೇಡ । ಇದೇ ಅಂತರಂಗ ಶುದ್ಧಿ । ಇದೇ ಬಹಿರಂಗ ಶುದ್ಧಿ । ಇದೇ ನಮ್ಮ ಕೂಡಲಸಂಗಮ ನೊಲಿಸುವ ಪರಿ ।

೨) ದೇವಲೋಕ ಮೃತ್ಯುಲೋಕವೆಂಬುದು ಬೇರಿಲ್ಲ ಕಾಣಿರೋ । ಸತ್ಯ ನುಡಿಯುವದೇ ದೇವಲೋಕ ಮಿಥ್ಯ ನುಡಿಯುವದೇ ಮೃತ್ಯುಲೋಕ । ಆಚಾರವೇ ಸ್ವರ್ಗ ಅನಾಚಾರವೇ ನರಕ । ಕೂಡಲಸಂಗಮದೇವಾ ನೀವೇ ಪ್ರಮಾಣ।

೩) ಸಾರ ಸಜ್ಜನರ ಸಂಗ ಮಾಡುವದು | ದೂರ ದುರ್ಜನರ ಸಂಗ ಬೇಡವಯ್ಯಾ । ಆವ ಹಾವಾದರೇನು ವಿಷವೊಂದೇ | ಅಂಥವರ ಸಂಗ ನಮಗೆ ಬೇಡವಯ್ಯಾ । ಅಂತರಂಗ ಶುದ್ಧಿ ಇಲ್ಲದವರ ಸಂಗ ಶಿಂಗಿ ಕಾಳಕೂಟ ವಿಷವೋ ಕೂಡಲಸಂಗಮದೇವ ।

೪) ಸಂಸಾರವೆಂಬುದೊಂದು ಗಾಳಿಯ ಸೊಡರು ಸಿರಿಯೆಂಬುದೊಂದು ಸಂತೆಯ ಮಂದಿ ಕಂಡೆಯ್ಯಾ ಇದ ನೆಚ್ಚಿ ಕೆಡಬೇಡ ಸಿರಿಯೆಂಬುದ ಮರೆಯದೆ ಪೂಜಿಸು ನಮ್ಮ ಕೂಡಲಸಂಗಮ ದೇವನ.

೫) ಕಲ್ಲ ನಾಗರ ಕಂಡರೆ ಹಾಲನೆರೆ ಎಂಬರು, ದಿಟನಾಗರ ಕಂಡರೆ ಕೊಲ್ಲೆಂಬರಯ್ಯಾ, ಉಂಬುವ ಜಂಗಮ ಬಂದರೆ ನಡೆಯೆಂಬರು. ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ! ನಮ್ಮ ಕೂಡಲಸಂಗನ ಶರಣರ ಕಂಡು, ಉದಾಶೀನ ಮಾಡಿದರೆ ಕಲ್ಲ ತಾಗಿದ ಮಿಟ್ಟೆಯಂತಪ್ಪೆಯ್ಯಾ-

೬) ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯಾ! ನಾಯಿಯ ಹಾಲು ನಾಯಿಂಗಲ್ಲದೆ ಪಂಚಾಮೃತಕ್ಕೆ ಸಲ್ಲದಯ್ಯಾ! ನಮ್ಮ ಕೂಡಲಸಂಗನ ಶರಣರಿಗಲ್ಲದೆ ಮಾಡುವ ಅರ್ಥ ವ್ಯರ್ಥ ಕಂಡಯ್ಯಾ!

# ಶ್ರೀಗುರು ಪುರಾತನರ ಸ್ತೋತ್ರ.

|| ಪರಿವರ್ಧಿನಿ || ಸಾಂಬಸದಾ ಶಿವ। ಸಾಂಬಸದಾ ಶಿವ। ಸಾಂಬಸದಾ ಶಿವ। ಸಾಂಬ ಶಿವ, || ಪಲ್ಲ || ಮುರುಳ ಶಂಕರದೇವಾ। ;ಇವರಿಗೆ ಕಿನ್ನರಿ ಯಾಬ್ರಹ್ಮಯ್ಯನಿಗೆ। ವೀರೇಶ್ವರದ ಖ್ಯಾತಯ್ಯನಿಗೆ। ಗಾಣದ ಕನ್ನಪ್ಪಯ್ಯನಿಗೆ || ೧ || ಪರಿಪರಿಯಾ ಶಿವಲಿಂಗಾ ಪೂಜಿಸಿ। ಪರುಷಾದ್ವಿತಿ ಕಾಲಲ ನೇ ಮಾನಿಸಿ ಹರನೊಳರ್ಚಿತಕೊಂಡಾ। ಶಿವಶರಣರಿಗೆ ಶರಣಾರ್ಥಿ ||ಜಯಾ ಜಯಾ || ೨ || ಕಾಯಾದೊಳು ಗುರುಲಿಂಗ ಜಂಗಮ। ದಾಯಾದವನರಿಯಲ್ಕೆ ಶುಲಭವ। ಪಾಯಾದಿಂದರಿದಿಟ್ಟು ಪಾಯಾಸ್ಥಲಕೆ ಗುರಿಯಾಗಿ || ಜಯಾ ಜಯಾ || ೩ || ದಾಯಾದೋರಿ ಸಮಸ್ತಾ ಭಕ್ತರ। ಕಾಯಾವನು ಪಾವನ್ನಾ ಮಾಡಿದ। ರಾಯಾ ಪೂರ್ವಾಚಾರ್ಯ। ಸಂಗನಬಸವ ಶರಣಾರ್ಥಿ || ಜಯಾ ಜಯಾ || ೪ || ತೆರೆಯಿಲ್ಲದ ನುಡಿ। ತೆರೆಯಿಲ್ಲದ ನಡೆ। ತೆರೆಯಿಲ್ಲದ ಒಡನಾಟದನುಭವ। ತೆರೆಯಿಲ್ಲದ ಸಮರಸವನು ತೋರಿದ। ಗುರುವೇ ಶರಣಾರ್ಥಿ || ಜಯಾ ಜಯಾ || ೫ || ತೆರೆಯಿಲ್ಲದ ಧ್ಯಾನಾರ್ಚನೆ। ಯಾತ್ಮವ। ನಿರುಪಮ ನಿಜಲಿಂಗನದೊಳತಾಂ। ತೆರೆಯಿಲ್ಲದ ಸಮರಸವನು ತೋರಿದ। ಗುರುವೇ ಶರಣಾರ್ಥಿ || ಜಯಾ ಜಯಾ || ೬ || ಬಸವಾ ಎನ್ನಯ ತಾಯಿ ತಂದೆ। ಬಸವಾ ಎನ್ನಯ ಬಂಧುಬಳಗ। ಬಸವನ ಹೊಟ್ಟೆ ಶಿಶುವೂ ನಾನೇ। ಗಿರಿಜಾ ಕೇಳೆಂದ || ಜಯಾ ಜಯಾ || ೭ || ಬಹಳ ಬಲ್ಲವನಲ್ಲೋ ಹರ ಹರ। ಬಹಳ ತಿಳಿದವನಲ್ಲೋ ಶಿವ ಶಿವ। ಬಹಳ ಬಲ್ಲವರಡಿಯಾ ಧೂಳದ। ಪರಿಯಾ ನಾನಲ್ಲ || ಜಯಾ ಜಯಾ || ೮ || ಬಾಲಕನ ತೊದಲ್ನುಡಿಯೋ। ನುಡಿಗಳು ಶೀಲಾವಂತರು ಶಿವನಾಭಕ್ತರು। ಲಾಲಿಸಲೂ ಪಾಲಿಸಲೂ ಹಂಪೀಯರಸಾ। ಎಮಗೊಲಿವಾ || ಜಯಾ ಜಯಾ ||೯|| ಸಾಂಬಸದಾ ಶಿವ ಸಾಂಬಸದಾ ಶಿವ ಸಾಂಬ ಶಿವ। ಶಿವ ಶಿವ ಶಿವ ಸಾಂಬಸದಾ ಶಿವ ಸಾಂಬಶಿವಾ || ೧೦ ||



# ಸಪ್ತಮ—ರತ್ನ

## ದಶಕರ್ಮ ಸಂಸ್ಕಾರ ಪ್ರಮಾಣವು

ಆರ್ಯ ಧರ್ಮ ಗ್ರಂಥಗಳಾದ ವೇದಾಗಮ, ಉಪನಿಷತ್ಪುರಾಣ ಹಾಗೂ ಸ್ಮೃತಿ ಮೊದಲಾದ ಗ್ರಂಥಗಳಲ್ಲಿ ಹಿಂದೂ ಧರ್ಮ ಸಂಬಂಧವಾದ ಗೃಹ—ಕರ್ಮಾದಿ ನಿಯಮಾದಿಗಳನ್ನು ಹೇಳಲ್ಪಟ್ಟಿವೆ. ಅವುಗಳಿಗೇ ಸಂಸ್ಕಾರವೆಂಬ ಹೆಸರು. ಹೇಗೆ ವಜ್ರವು ಪಾಷಾಣದಿಂದ ಹೊರಟು ವಿಶೇಷ ಸಂಸ್ಕಾರದಿಂದ

ಅಮೌಲ್ಯವೆನಿಸುವದೋ ಹಾಗೆ ಮನುಷ್ಯನು ಸಂಸ್ಕಾರದಿಂದ ಪವಿತ್ರನಾಗಿ ಅಮಾನುಷನಾಗುತ್ತಾನೆ ''ಜನ್ಮನಾಽಜಾಯತೇ ಶೂದ್ರಃ ಸಂಸ್ಕಾರಾದ್ವಿಜ ಉಚ್ಯತೇ" ಎಂಬಂತೆ ಮನುಷ್ಯನು ಹುಟ್ಟಿದ ಬಳಿಕ ಶೂದ್ರನೆನಿಸಿಕೊಳ್ಳುತ್ತಾನೆ. ಆದರೆ ಆತನು ಧರ್ಮ ಸಂಸ್ಕಾರ ಹೊಂದಿದ ನಂತರ ಉಚ್ಚ ವರ್ಣದವನೆಂದು ಹೇಳಿಸಿಕೊಳುತ್ತಾನೆ. ಜನನವಾರಭ್ಯ ಮರಣ ಪರ್ಯಂತ ಒಟ್ಟು ಷೋಡಶಕರ್ಮಗಳಿವೆ. ಇವುಗಳಲ್ಲಿ ಒಟ್ಟು ಮುಖ್ಯವಾದ ಹತ್ತು ಕರ್ಮಗಳನ್ನು ಇಲ್ಲಿ ಸಕ್ರಮವಾಗಿ ಉಲ್ಲೇಖಿಸಲಾಗುವದು. ಇವುಗಳನ್ನು ಸಮಸ್ತ ವೀರಶೈವ ಬಾಂಧವರು ಆಚರಿಸಲು ಯೋಗ್ಯವಾಗಿವೆ.

## ೧. ಗರ್ಭಾದಾನ(ಫಲಶೋಭನ) ಕಾರ್ಯ ಸಂಸ್ಕಾರ

ಸ್ತ್ರೀಯಳ ಋತು ಸ್ನಾನ ನಂತರ ಸಮ ದಿನಗಳಲ್ಲಿ ಜ್ಯೋತಿಷ್ಯರಿಂದ ನಿರ್ಧಾರ ಮಾಡಲ್ಪಟ್ಟ ಶುಭ ದಿನಗಳಲ್ಲಿ ದಂಪತಿಗಳು ಬೆಳಿಗ್ಗೆ ಮಂಗಲ ಸ್ನಾನವನ್ನು ಮಾಡಿ, ಐಚ್ಛಿಕ ಮಡಿ ಬಟ್ಟೆಗಳನ್ನು ಧರಿಸಿಕೊಂಡು ಸಮಸ್ತ ಪೂಜಾ ಸಾಮಗ್ರಿಗಳನ್ನು ತೆಗೆದುಕೊಂಡು ಭದ್ರಾಸನದಲ್ಲಿ ಕರಜೋಡಿಸಿಕೊಂಡು ಕುಳಿತು

''ಹರ ಓಂ ॥ ತದೇವಲಗ್ನಂ ಸುದಿನಂತ ದೇವತಾರಾಬಲಂ ಚಂದ್ರಬಲಂ ತದೇವ। ವಿದ್ಯಾಬಲಂ ದೈವಬಲಂತದೇವ। ಗೌರೀ ಪತತೇಂ ಘ್ರಿಯುಗಂ ಸ್ಮರಾಮಿ ॥ ಯಶ್ಶಿವೋ ನಾಮರೂಪಾಭ್ಯಾಂ ಯಾದೇವಿ ಸರ್ವ ಮಂಗಲಾ। ತಯೋಸ್ಸಂ ಸ್ಮರಣಾತ್ಪುಂಸಾಂ ಸರ್ವತೋ ಜಯಮಂಗಲಂ। ಸರ್ವ ಮುಹೂರ್ತಮಸ್ತು ಸೂತ್ರಪಿಷ್ಟಿತ ಮಸ್ತು ॥'' ಹೀಗೆ ಈಶ ಪ್ರಾರ್ಥನೆಯನ್ನು ಮಾಡಿದ ಬಳಿಕ ಹಿಂದೆ ಇಷ್ಟಲಿಂಗ ಪೂಜಾ ಪ್ರಕರಣದಲ್ಲಿ ಹೇಳಿದ ಮಂತ್ರದಿಂದ ಘಂಟಾನಾದವನ್ನು ಮಾಡಬೇಕು. ಆ ಬಳಿಕ—

''ಋಗ್ವೇದಾಯಸ್ವಾಹಾ, ಯಜುರ್ವೇದಾಯಸ್ವಾಹಾ। ಸಾಮವೇದಾಯ ಸ್ವಾಹಾ। ಅಥರ್ವಣ ವೇದಾಯ ನಮಃ। ಇತಿಹಾಸ ಪುರಾಣಾಯ ನಮಃ। ಅನಂತಾಯ ನಮಃ। ಸೂಕ್ಷ್ಮಾಯ ನಮಃ। ಶಿವೋತ್ತಮಾಯ ನಮಃ। ಏಕನೇತ್ರಾಯ ನಮಃ। ತ್ರಿಮೂರ್ತಯೇ ನಮಃ। ಶಿಖಂಡಿನೇ ನಮಃ। ಶ್ರೀಕಂಠಾಯನಮಃ। ಹೃದಯಾಯ ನಮಃ। ಶಿರಸೇ ನಮಃ। ಶಿಖಾಯೈ ನಮಃ। ಕವಚಾಯ ನಮಃ। ನೇತ್ರತ್ರಯ ನಮಃ। ಅಸ್ತ್ರಾಯ ನಮಃ ॥''

ಎಂಬ ವಾಕ್ಯಗಳನ್ನು ಅಂದ ಬಳಿಕ ಆಚಮನವನ್ನು ಮಾಡಬೇಕು. ತದನಂತರ ಶುದ್ಧೋದಕಡಿಂದ ನೇತ್ರಾದಿ ಪಂಚ ಜ್ಞಾನೇಂದ್ರಿಯಗಳನ್ನು ಮುಟ್ಟಿ ಪ್ರಾಣಾಯಾಮವನ್ನು ಹಿಂದೆ ಹೇಳಿದಂತೆ ಮಾಡಿ ಮನಸ್ಸನ್ನು ಸಿದ್ಧ ಮಾಡಿಕೊಳ್ಳಬೇಕು.

ಆ ಬಳಿಕ ಹಿಂದೆ ಹೇಳಿದಂತೆ ಸಂಕಲ್ಪವನ್ನು ಅಂದು ದೇಶ ಕಾಲಾದಿಗಳನ್ನು ಹೇಳಿ:—

"ಏವಂ ಗುಣ ವಿಶೇಷಣ ವಿಶಿಷ್ಟಾಯಾಮಸ್ಯಾಂ ಶುಭ ತಿಥೌ ಉಪಾತ್ತ ದುರಿತ ಕ್ಷಯದ್ವಾರಾ ಶ್ರೀ ಸಾಂಬಸದಾ ಶಿವ ಪ್ರೀತ್ಯರ್ಥಂ (        )ಗೋತ್ರೋದ್ಭವಯೋಃ ಆವಯೋಃ ಸತ್ಸಂತಾನ ಸೌಭಾಗ್ಯಫಲ ಸಿದ್ಧ್ಯರ್ಥಂ ರಾತ್ರೌ ಗರ್ಭಾದಾನಾಖ್ಯಂ ಕರ್ಮಕರಿಷ್ಯಮಾಣಃ ಗರ್ಭಾದಾನಾಂಗ ಭೂತ ನಾಂದೀ ಶೋಭನ ದೇವತಾ ಪ್ರೀತ್ಯರ್ಥಂ ನಾಂದೀ ಸಮಾರಾಧನಾಖ್ಯಂ ಕರ್ಮ ಕರಿಷ್ಯಮಾಣಃ ಗರ್ಭಾದಾನ ಲಗ್ನಕಾಲೇ ಫಲದಾನಾನಿ ಕರ್ತುಂ ಫಲಪೂಜಾಖ್ಯಂ ಕರ್ಮಕರಿಷ್ಯಮಾಣಃ ತದಂಗತ್ವೇನ ತದಾದೌ ಶುದ್ಧ್ಯರ್ಥಂ ವೃದ್ಧ್ಯರ್ಥಂ ಅಭ್ಯುದಯಾರ್ಥಂ ಶಾಂತ್ಯರ್ಥಂಚ ಮಾಹೇಶ್ವರೈಸ್ಸಹ ಸ್ವಸ್ತಿ ಪುಣ್ಯಾಹ ವಾಚನಂಕರಿಷ್ಯೇ॥ ತದಾದೌ ನಿರ್ವಿಘ್ನೇನ ಪರಿಸಮಾಪ್ತಿ ದ್ವಾರಾ ಉತ್ತರೋತ್ತರಾಭಿವೃದ್ಧ್ಯರ್ಥಂ ಶ್ರೀ ಮಹಾ ಗಣಾಧಿಪತಿ ಪೂಜಾಂಕರಿಷ್ಯೇ"

ಹೀಗೆಂದು ಸಂಕಲ್ಪ ಮಾಡಿ ಹಿಂದೆ ಸರ್ವಪೂಜಾ ಪ್ರಕರಣದಲ್ಲಿ ಹೇಳಿದಂತೆ ಮೊದಲು ಗಣಪತಿ ಪೂಜೆಯನ್ನು ಮಾಡಿ ತದ ನಂತರ ಸ್ವಸ್ತಿ ಪುಣ್ಯಾಹ ವಾಚನವನ್ನೂ, ನಾಂದೀ ಸಮಾರಾಧನವನ್ನೂ ಮಾಡಬೇಕು.

ಇನ್ನು ರಾತ್ರಿಯಲ್ಲಿಯ ಕಾರ್ಯಕ್ರಮವೆಂದರೆ; ಪತಿಯು ಪತ್ನಿಯೊಡನೆ ಭದ್ರಾಸನದಲ್ಲಿ ಕುಳಿತುಕೊಂಡ ಬಳಿಕ ಪ್ರಾಣಾಯಾಮವನ್ನು ಮಾಡಬೇಕು. ತದ ನಂತರ ಫಲಪೂಜೆಯನ್ನೂ ಮಾಡಬೇಕು. ಹೇಗೆಂದರೆ:—

ಮೊದಲು ದೇಶ ಕಾಲಾದಿಗಳನ್ನುಚ್ಚರಿಸಿ:—

"ಏವಂ ಗುಣ ವಿಶೇಷಣ ವಿಶಿಷ್ಟಾಯಾಂ ಅಸ್ಯಾಂ ಶುಭತಿಥೌ ಸತ್ಸಂತಾನ ಸೌಭಾಗ್ಯ ಫಲಸಿದ್ಧಿ ದ್ವಾರಾ ಫಲದೇವತಾಂ ತರ್ಗತ ಶ್ರೀ ಸಾಂಬಸದಾಶಿವ ಪ್ರೀತ್ಯರ್ಥಂ ಫಲಪೂಜಾಖ್ಯಾಂಕರಿಷ್ಯೇ"ಎಂದುಸಂಕಲ್ಪವನ್ನು ಮಾಡಬೇಕು. ಆ ಬಳಿಕ:—

"ಯಾಃ ಫಲ ನೀರ್ಯಾ ಅಫಲಾಃ ಪುಷ್ಪಯಾಶ್ಚ ಪುಷ್ಪಿಣೀಃ ।
ಬೃಹಸ್ಪತಿ ಪ್ರಸೂತಾಸ್ತಾನೋ ಮುಂಚತ್ವಗ್ಂ ಹಸಃ ॥"
ಎಂಬ ಮಂತ್ರದಿಂದ ಫಲದೇವತೆಯನ್ನು ಆವಾಹನ ಮಾಡಿ,
"ಫಲದೇವತಾಭ್ಯೋ ನಮಃ"

ಎಂಬ ಮಂತ್ರದಿಂದ ಟೆಂಗಿನಕಾಯಿ ಮೊದಲಾದ ಫಲಗಳನ್ನು ಅಷ್ಟವಿಧಾರ್ಚನೆಯಿಂದ ಪೂಜೆ ಮಾಡಬೇಕು. ತರುವಾಯ:—

"ಅನಯಾ ಪೂಜಯಾ ಭಗವಾನ್ಸರ್ವಾತ್ಮಕ ಶ್ರೀ ಸಾಂಬಸದಾ
ಶಿವ ಸುಪ್ರೀತಸ್ಸು ಪ್ರಸನ್ನೋ ವರದೋ ಭವತು"

ಹೀಗೆಂದು ತರ್ಪಣ ಅಂದರೆ ಅರ್ಘ್ಯವನ್ನು ಕೊಡಬೇಕು. ಆ ಬಳಿಕ ಕೆಳಗೆ ಬರೆದ "ಗರ್ಭಾದಾನ-ಸೂಕ್ತ" ವನ್ನು ಜಪಿಸಬೇಕು.

## ಗರ್ಭಾಧಾನ ಸೂಕ್ತವು.

"ವಿಷ್ಣುರ್ಯೋನೀ ಕಲ್ಪಯತುತ್ವಾಷ್ಟಾ ರೂಪಾಣಿ ಪಿಗ್ಂ ಶತು । ಆಸಿಂಚತು ಪ್ರಜಾಪತಿರ್ಧಾತಾ ಗರ್ಭಂ ದಧಾತುತೇ । ಗರ್ಭಂ ದೇಹಿ ಸಿನೀವಾಲಿ ಗರ್ಭಂ ದೇಹಿ ಸರಸ್ವತಿ । ಗರ್ಭಂತೇ ಅಶ್ವಿನೌ ದೇವಾ ವಾಧತ್ತಾಂ ಪುಷ್ಕಸ್ರಜಾ ಹಿರಣ್ಯಯೀ ಆರಣೀಯನ್ನಿರ್ಮಂಥತೋ ಅಶ್ವಿನಾ। ತಂತೆ ಗರ್ಭಗ್ಂ ಹವಾಮಹೆ ದಶಮೆ ಮಾನಿಸೊತವೆ । ಯಥೇಯಂ ಪೃಥವಿ ಮಹಿತಿಷ್ಮಂತಿ ಗರ್ಭಮಾದಧೆ। ಏವಂ ತಂ ಗರ್ಭಮಾಧೇಹಿ ದಶಮೆ ಮಾಸಿಸೂತವೆ । ಯಥಾ ಪೃಥಿವ್ಯಗ್ನಿ ಗರ್ಭಾದ್ಯೌರ್ಯಥೇಂದ್ರೇಣ ಗರ್ಭಿಣೀ । ವಾಯುರ್ಯಥಾದಿಶಾಂ ಗರ್ಭ ಏವ ಗರ್ಭಂ ದಧಾತುತೇ । ವಿಷ್ಣೋಃ ಶ್ರೇಷ್ಠೇನಃ ರೂಪೇಣಾನ್ಯಾಂ ನಾರ್ಯಾಂಗವೀನ್ಯಾಂ । ಪುಮಾಂ ಗರ್ಭಮಾದೇಹಿ ದಶಮೆ ಮಾಸಿನೂತವೆ । ನೆಜಮೇಷಪರಾಪತ ಸುಪುತ್ರಃ ಪುನರಾಪತ । ಅಸ್ಯೈಮೆ ಪುತ್ರಕಾಮಾಯ್ಯೆ ಗರ್ಭಮಾದೇಹಿ ಯಃ ಪುಮಾನ್ । ವ್ಯಸ್ಯಯೇನಿಂಪತಿರೇತೊ ಗೃಹಾಣ ಪುಮಾನ್ಪುತ್ರೋಧೀಯತಾಂ । ಗರ್ಭೇ ಅತತಃ ತಂ ಮಾತಾ ದಶಮಾಸೊಬಿಭರ್ತು ಸಜಾಯತಾಂ ವೀರ ತಮಸ್ವಾವಾಂ ಅತ ಗರ್ಭೋಯೋ ನಿಮೇತು ಪುಮಾನ್ವಾ ಇವೇಷುಧಿಂ । ಆವಿರೋಜಾ ಯತಾಂ ಪುತ್ರಸ್ತೆ ದಶಮಾಸ್ಯಃ ಕರೋಮಿತೇ ಪ್ರಜಾಪತ್ಯ ಮಾಗರ್ಭೋ ಯೋಸಿಮೆತುತೆ ಅನೂನಃಪೂರ್ಣೋ ಜಾಯ ತಾಮ ಶ್ಲೋಣೋ ಪಿಶಾಚ ಧೀತಃ । ಪುಮಾಂಗ್ಂಸ್ತೆ ಪುತ್ರೋನಾರಿತಂ ಪುಮಾನನು ಜಾಯತಾಂ। ಯಾನಿ ಭದ್ರಾಣಿ ಬೀಜಾನ್ಯೃಷಭಾಜನ ಯಂತಿನೌ । ತಾನಿ ಭದ್ರಾಣಿ ಬೀಜಾನ್ಯೃಷ ಭಾಜನಯಂತಿನಃ । ತೈಸ್ತ್ವಂ ಪುತ್ರಾನ್ವಿಂದಸ್ವಸಾ ಪ್ರಸೂರ್ಧೇನುಕಾಭ ಭವ । ಕಾಮಃ ಸಮೃದ್ಧ್ಯತಾಂ ಮಹ್ಯಮ ಪರಾಜಿತ ಮೇವಮೆ । ಯಂಕಾಮಂ ಕಾಮಯೆ ದೇವತಂ ಮೇವಾಯೊ ಸಮರ್ಥಯೆ"ಎಂದು ಪಠಿಸಿ ಪತ್ನಿಯನ್ನು ಮುಟ್ಟಿ ಅಭಿಮಂತ್ರಿಸಬೇಕು. ತರುವಾಯ—

"ಫಲಂ ಮನೋರಥ ಫಲಂ ಪ್ರದದಾತಿ ಸದಾನ್ನೃಣಾಂ । ಪುತ್ರಪಾತ್ರಾಭಿವೃದ್ಧ್ಯರ್ಥಂ ಅತಶ್ಯಾಂತಿಂ ಪ್ರಯಚ್ಛಮೇ"

ಇದಂ ಫಲದಾನಂ ಸದಕ್ಷಿಣಾಂ ಸತಾಂಬೂಲಂ ಶ್ರೀ ಸಾಂಬಸದಾ ಶಿವ ಪ್ರೀತಿಂ ಕಾಮಯ ಮಾಸ್ತುಭ್ಯಮಹಂ ಸಂಪ್ರದದೆ । ನಮಯ ನಮಮ ॥

ಎಂದು ಉಚ್ಚರಿಸಿ ಮಾಹೇಶ್ವರರಿಗೆ ಬಾಳೇಹಣ್ಣು ಟೆಂಗಿನಕಾಯಿ ಉತ್ತತ್ತಿ ತಾಂಬೂಲ ಸಹಿತ ಫಲದಾನವನ್ನು ಮಾಡಬೇಕು. ಅನಂತರ ಮಹೇಶ್ವರರು—

"ಉಭಯೋಃ ಸತ್ಸಂತಾನ ಸೌಭಾಗ್ಯ ಫಲ ಸಿದ್ಧಿರಸ್ತು"

ಎಂದು ಆಶೀರ್ವಾದವನ್ನು ಮಾಡಬೇಕು. ಆನಂತರ ದಂಪತಿಗ
ಭದ್ರಾಸನದಿಂದ ಮೇಲಕ್ಕೆದ್ದು ಅಲಂಕಾರ ಮಾಡಿದ ಹಾಸಿಗೆಯ ಮೇಲೆ ಹೋ

ಓಂ ರೇ ತೋ ಮೂತ್ರಂ ವಿಜಹಾತಿ ಯೋನಿಂ ಪ್ರವಿಶದಿಂದ್ರಿಯಮ್ |
ಗರ್ಭೋಜರಾಯುಣಾಽಽವೃತ್ತ ಉಲ್ಬಂ ಜಹಾತಿ ಜನ್ಮನಾ ||

ಎಂಬ ಮಂತ್ರದಿಂದ ಪತಿಯು ಪತ್ನಿಯ ಕೂಡ ಸಂಭೋಗ ಮಾಡಬೇಕ

|| ಇತಿ ಗರ್ಭಾದಾನ ವಿಧಾನಂ ||

## ಪುಂಸವನ ಸಂಸ್ಕಾರ-ವಿಧಾನ.

ಈ ಪುಂಸವನ ಸಂಸ್ಕಾರವನ್ನು ಸ್ತ್ರೀಯಳು ಗರ್ಭಧಾರಣವಾದನಂತರ ಮೂರನೆಯ ಅಥವಾ ನಾಲ್ಕನೆಯ ತಿಂಗಳಲ್ಲಿ ಶುಭ ತಿಥಿ ಶುಭ ಮುಹೂರ್ತ ದಲ್ಲಿ ಮಾಡಬೇಕು. ಈ ಕಾರ್ಯವನ್ನು ಎರಡು ದಿನ ಆಚರಿಸಬೇಕಾಗುವದು. ಈ ಸಂಸ್ಕಾರಾರಂಭದ ಮೊದಲನೇ ದಿವಸ ಪ್ರಾತಃಕಾಲಕ್ಕೆದ್ದು ದಂಪತಿಗಳು ಸ್ನಾನ ಮಾಡಿ ಶಿವಪೂಜಾದಿ ನಿತ್ಯ ಕರ್ಮಗಳನ್ನು ಮುಗಿಸಿಕೊಂಡು ಪತ್ನಿಯ ನ್ನು ಪತಿಯು ತನ್ನ ಬಲಭಾಗದಲ್ಲಿ ಕುಳ್ಳಿರಿಸಿಕೊಂಡು ಆಚಮನ ಪ್ರಾಣಾಯಾ ಮಗಳನ್ನು ಮಾಡಿ, ದೇಶಕಾಲಾದಿಗಳನ್ನುಚ್ಚರಿಸಿ:—

"ಏವಂ ಗುಣವಿಶೇಷಣ ವಿಶಿಷ್ಟಾಯಾಂ ಅಸ್ಯಾಂ ಶುಭತಿಥೌ ಮಮಧರ್ಮ ಪತ್ನ್ಯಃ ಗಾರ್ಬಿಕ ಬೈಜಿಕದೋಷ ಪರಿಹಾರಾರ್ಥಂ ಆಧಾರ ಸಂಸ್ಕಾರ ದ್ವಾರಾ ಆಧೇಯ ಸಂಸ್ಕಾರಾರ್ಥಂ ಪುಗ್ಂ ಸವನಾಖ್ಯಂ ಕರ್ಮಕರಿಷ್ಯೇ"

ಎಂಬ ಸಂಕಲ್ಪವನ್ನು ಮಾಡಿ ಅರ್ಘ್ಯವನ್ನು ಕೊಡಬೇಕು. ತದನಂತರ ಪುಂಸವನ ಸಂಸ್ಕಾರದ ಅಂಗಗಳೆನಿಸಿದ ಸ್ವಸ್ತಿ ಪುಣ್ಯಾಹವಾಚನ ನಾಂದೀ ಸಮಾರಾಧನೆಗಳನ್ನು ಹಿಂದೆ ಸರ್ವ ಪೂಜಾ ಪ್ರಕರಣದಲ್ಲಿ ಹೇಳಿದಂತೆ ಆಚರಿ ಸಬೇಕು. ಆ ಬಳಿಕ:-

ಮರು ದಿವಸ (ಎರಡನೇ ದಿವಸ) ದಲ್ಲಿ ಶಿವಪೂಜಾದಿ ನಿತ್ಯ ಕರ್ಮಗಳನ್ನು ಮುಗಿಸಿಕೊಂಡು ಪವಿತ್ರ ಹಸ್ತಗಳಿಂದ ದೇಶಕಾಲಾದಿಯನ್ನು ಹೇಳಿ:—

"ಏವಂ............ಅಸ್ಯಾಂ ಶುಭ ತಿಥೌ ಧರ್ಮ ಪತ್ನೀ ಸಮೇತಸ್ಯ ಮಮ ಪುಗ್ಂ ಸವನಾಂಗತ್ವೇನ ಉಭಯೋಃ ರಕ್ಷಾರ್ಥಂ ರಕ್ಷಾ ಬಂಧನಾಖ್ಯಂ ಕರ್ಮ ಕರಿಷ್ಯೇ" ಎಂದು ಸಂಕಲ್ಪವನ್ನು ಮಾಡಬೇಕು. ತರುವಾಯ:-

ಅಕ್ಕಿಯನ್ನು ತುಂಬಿದ ಒಂದು ತಟ್ಟೆಯಲ್ಲಿ ಟೆಂಗಿನಕಾಯಿ, ವಿಭೂತಿ,

ವೀಳ್ಯೆದೆಲಿ, ಬೆಟ್ಟಡಿಕೆ, ಕಂಕಣ ಇತ್ಯಾದಿಗಳನ್ನಿಟ್ಟು ಅವುಗಳನ್ನು ಷೋಡಶೋಪಚಾರಗಳಿಂದ ಪೂಜೆ ಮಾಡಿ:—

"ತ್ರಿಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ।
ಉರ್ವಾರುಕಮಿವಬಂಧನಾನ್ಮೃತ್ಯೋ ರ್ಮುಕ್ಷೀಯ ಮಾಮೃತಾತ್॥"

ಎಂಬ ಮಂತ್ರದಿಂದ ಕಂಕಣಕ್ಕೆ ವಿಭೂತಿಯನ್ನು ಲೇಪಿಸಬೇಕು. ತರುವಾಯ:—

"ವಿಶ್ವಾತ್ತಾತೆ ಸವನೇಷು ಪ್ರವಾಚಾಯಾಚ ಕತ್ಥಮಘವನ್ನಿಂದ್ರಸುನ್ವತೆ ಪಾರಾವತಂ ಯತ್ಪುರು ಸಂಭೃತಂ ವಸ್ವಪಾವೃಣೋಃ ಶರಭಾಯ ಋಷಿಬಂಧವೆ"

ಎಂಬ ಮಂತ್ರದಿಂದ ಮಾಹೇಶ್ವರನು ಪತಿಯ ಬಲ ಮುಂಗೈಗೂ,
"ಬೃಹತ್ಸಾಮ ಕ್ಷತ್ರ ಭೃದ್ವೃದ್ಧವೃಷ್ಣಿಯಂ। ತ್ರಿಷ್ಟು ಭೋಜಶ್ಯುಭಿತ ಮುಗ್ರ ವೀರಂ। ಇಂದ್ರಂ ಸೋ ಮೇನ ಪಂಚ ದಶೇನ ಮಧ್ಯಮಿದಂ ವಾತೇನ ಸಗರೇಣ ರಕ್ಷ"

ಎಂಬ ಮಂತ್ರದಿಂದ ಪತ್ನಿಯ ಎಡ ಮುಂಗೈಗೂ, ಕಂಕಣವನ್ನು ಕಟ್ಟುವದು. ಆ ಬಳಿಕ ದಂಪತಿಗಳು ಮಾಹೇಶ್ವರನಿಗೆ ನಮಸ್ಕಾರ ಮಾಡಿ ಗುರು ಪಾದ ತೀರ್ಥ ಪ್ರಸಾದವನ್ನು ಸ್ವೀಕರಿಸಿ ಶಕ್ತ್ಯಾನುಸಾರ ಗಣಾರಾಧನೆಯನ್ನು ಮಾಡಬೇಕು. ತರುವಾಯ ಗುರುಸನ್ನಿಧಿಯಲ್ಲಿ:—

"ಕಂಕತೋನ ಕಂಕತೋಥೊಸತೀನ ಕಂಕತಃ। ದ್ವಾವಿತಿ ಪ್ಲುಷಿ ಇತಿನ್ಯಾ ಆದೃಷ್ಟಾ ಅಲಿಪ್ಸತಾ"
"ಕಂಕಣಂ ಮೇಚ ಯಾಮ್ಯದ್ಯ ರಕ್ಷಾನ್ನಿಮ್ನ ಕದಾಚನ।
ಮಯಿ ರಕ್ಷಾಂ ಸ್ಥಿರಾಭದ್ವಾ ದೇವತ್ವಂ ಗಚ್ಛ ಕಂಕಣ"
ಹೀಗೆಂದು ಹೇಳಿ ಕಟ್ಟಿಕೊಂಡಿದ್ದ ಕಂಕಣವನ್ನು ಬಿಚ್ಚಬೇಕು.

॥ ಇತಿ ಪುಂಸವನ ಸಂಸ್ಕಾರ ವಿಧಾನ ಸಮಾಪ್ತಿ ॥



## ಸೀಮಂತ ಸಂಸ್ಕಾರ ವಿಧಾನ.

### (ಹೂಮುಡಿಸುವ ಕಾರ್ಯ)

ಈ ಸೀಮಂತ ಕಾರ್ಯವನ್ನು ಸ್ತ್ರೀಯಳು ಗರ್ಭಧಾರಣವಾದ ೪, ೬, ೮ನೇ ತಿಂಗಳಲ್ಲಿ ಜ್ಯೋತಿಷ್ಕರಿಂದ ನಿರ್ಧರಿಸಲ್ಪಟ್ಟ ಶುಕ್ಲಪಕ್ಷದ ಶುಭ ತಿಥಿ ಶುಭ ನಕ್ಷತ್ರಗಳಲ್ಲಿ ಮಾಡಬೇಕಾಗುವದು. ಪೂರ್ವೋಕ್ತ ಪ್ರಕಾರವಾಗಿ ಮನೆಯನ್ನು

ಸಾರಣೆ ಹಾಗೂ ರಂಗವಲ್ಯಾದಿಗಳಿಂದ ಅಲಂಕಾರ ಮಾಡಿ ಸ್ವಸ್ತಿವಾಚನ ನಾಂದೀ ಸಮಾರಾಧನೆಗಳನ್ನು ಆಚರಿಸಿ ಶುದ್ಧ ಮಾಡಿದ ಪ್ರದೇಶದಲ್ಲಿ ಭದ್ರಾಸನದ ಮೇಲೆ ಪತಿಯು ತನ್ನ ಬಲಭಾಗದಲ್ಲಿ ಪತ್ನಿಯನ್ನು ಕುಳ್ಳಿರಿಸಿಕೊಂಡು ಪ್ರಾಣಾಯಾಮವನ್ನು ಮಾಡಿ ದೇಶಕಾಲಾದಿಗಳನ್ನುಚ್ಚರಿಸಿ:—

''ಏವಂ ಗುಣವಿಶಿಷ್ಟಾಯಾಂ ಅಸ್ಯಾಂ ಶುಭ ತಿಥೌ ಮಮೈತಸ್ಯಾಃಧರ್ಮ ಪತ್ಯಾಃ ಗಾರ್ಭಿಕ ಬೈಜಿಕ ದೋಷ ಪರಿಹಾರಾರ್ಥಂ ಸೀಮಂತೋನ್ನಯನಾಖ್ಯಂ ಕರ್ಮಕರಿಷ್ಯೇ''

ಎಂದು ಸಂಕಲ್ಪವನ್ನು ಮಾಡಿ ಮತ್ತೊಂದು ಸಾರೆ ಪ್ರಾಣಾಯಾಮವನ್ನು ಮಾಡಿ:—

''ಏವಂ ಗುಣ............ಅಸ್ಯಾಂ ಶುಭ ತಿಥೌ ಸೀಮಂತೋನ್ನಯನಾಂಗತ್ವೇನ ಉಭಯೋಃ ರಕ್ಷಾರ್ಥಂ ರಕ್ಷಾಬಂಧನಂ ಕರಿಷ್ಯೇ''

ಎಂದು ಸಂಕಲ್ಪಮಾಡಿ ಹಿಂದೆ ಪುಂಸವನ ಸಂಸ್ಕಾರ ಕಾರ್ಯದಲ್ಲಿ ಹೇಳಿದಂತೆ ಕಂಕಣಗಳೆರಡನ್ನೂ ಪೂಜಿಸಿ ದಂಪತಿಗಳ ಮುಂಗೈಗೆ ಕಟ್ಟುವದು. ಅನಂತರ ಪತ್ನಿಯನ್ನು ಪೂರ್ವಾಭಿಮುಖವಾಗಿ ಕುಳ್ಳಿರಿಸಿ, ತಾನು ಪಶ್ಚಿಮಕ್ಕೆ ಮುಖಮಾಡಿ ಪತ್ನಿಯ ಎದುರಿಗೆ ಕುಳಿತುಕೊಂಡು ಕಾಡಹಂದಿಯ ಒಟ್ಟು ಮೂರು ಕೂದಲು ದರ್ಭೆಯ ಒಟ್ಟು ಮೂರು ಗುಚ್ಛ; ಹಾಗೂ ಅತ್ತಿಯ ಕೊನೆ ಇವುಗಳನ್ನು ಕೂಡಿಸಿ ಹಿಡಕೊಂಡು ಹೆಂಡತಿಯ ಹಣೆಯ ಮೊದಲ್ಗೊಂಡು ಬೈತಲೆಯ ರೇಖಾಂತದ ವರೆಗೂ,

''ಓಂ ಭೂರ್ಭುವಸ್ಸುವ್ರೋ ರಾಕಾಮಹಗ್ಂ ಸುಹವಾಗ್ಂ ಸುಷ್ಟುತೀಹುವೆ ಶೃಣೋತುನಸ್ಸು ಭಗಾಬೋಧತುತ್ಮನಾ। ಸೀವ್ಯತ್ವಪಸ್ಸೋಚ್ಛ್ಯಾಚ್ಛಿದ್ಯಮಾಗಯಾದದತು । ವೀರಗ್ಂ ಶತದಾಯಮುಕ್ಥ್ಯಂ । ಯಾಸ್ತೆ ರಾಕೆ ಸುಮತಯಸ್ಸುಪ್ಯಶಸೋಯಾಭಿರ್ದದಾಶಿದಾ ಶುಷೇವಸೂನಿ । ತಾಭಿರ್ನೋ ಅದ್ಯ ಸುಮನಾ ಉಪಾಗಹಿ । ಸಹಸ್ರ ಪೋಷಗ್ಂ ಸುಭಗೆ ರರಾಣ''

ಎಂಬ ಮಂತ್ರವನ್ನು ಉಚ್ಚರಿಸುತ್ತ ಮೂರುಸಾರೆ ಅಥವಾ ನಾಲ್ಕು ಸಾರೆ ಎಳೆದು ಅವುಗಳನ್ನು ಬೈತಲೆಯಲ್ಲಿಯೇ ಇಟ್ಟು ತಾವಿರುವ ಊರಿಗೆ ಸಮೀಪವಾದ ನದಿಯ ಧ್ಯಾನವನ್ನು 'ಮಾಡಿ, ಮೊಟ್ಟಮೊದಲೇ ನೆನಿಸಿ ಪೋಣಿಸಿದ ಗೋದೀಕಾಳಿನ ಸರವನ್ನು ಪತ್ನಿಯ ಕಂಠದಲ್ಲಿ ಹಾಕಬೇಕು. ಆ ಮೇಲೆ—

''ಗಾಯೇತಾಮಿತಿ ವೀಣಾ ಗಾಥಿ ನೌಸಗ್ಂಶಾಸ್ತಿ ।
ಸೋಮ ಯೆವನೋರಾಜೆತ್ಯಾಹು ಬ್ರಾಹ್ಮಣೀ ಪ್ರಜಾಃ ।
ವಿವೃತ್ತ ಚಕ್ರ ಆಸೀನಾಸ್ತಿರೇಣ ಯಮುನೇತವ॥''

ಹೀಗೆಂದು ಹೇಳಿ ವೀಣಾಗಾನ ಮಾಡಿಸುತ್ತ ಮುತ್ತೈದೆಯವರು ಮಂಗಲ ಕರವಾದ ಪದ್ಯವನ್ನಾಗಲೀ ಅಥವಾ ಪದಗಳನ್ನಾಗಲೀ ಹಾಡುವದು, ತದ

ನಂತರ ಮಹೇಶ್ವರರಿಂದ ಆಶೀರ್ವಾದವನ್ನು ತೆಗೆದುಕೊಂಡು ದೇವ-ಗುರುಸನ್ನಿಧಾನದಲ್ಲಿ ಕಂಕಣವನ್ನು ಬಿಚ್ಚಬೇಕು. ಶಕ್ತ್ಯಾನುಸಾರವಾಗಿ ಮಹೇಶ್ವರರಿಗೆ ಭೋಜನವನ್ನು ಮಾಡಿಸಬೇಕು.

|| ಇಂತೀ ಸೀಮಂತ ಸಂಸ್ಕಾರ ಸಮಾಪ್ತಃ ||

  

# ಜಾತಕರ್ಮ ಸಂಸ್ಕಾರ ವಿಧಾನ

## ಲಿಂಗಧಾರಣ ಕ್ರಮ

ವೀರಶೈವ ಸ್ತ್ರೀಯರು ಗರ್ಭವತಿಯರಾದ ೮ನೇ ತಿಂಗಳಲ್ಲಿ ಅವರವರ ಕುಲ ಗುರುಗಳಿಂದ ಲಿಂಗಧಾರಣ ಮಾಡಿಸಬೇಕು. ಈ ಎಂಟನೇ ತಿಂಗಳಲ್ಲಿಯೇ ಲಿಂಗ ಧಾರಣವಾಗುವ ಕಾರಣ ವೀರಶೈವ ಧರ್ಮ ಪ್ರಕಾರ ಜನನ ಸೂತಕವು ಅನ್ವಯಿಸುವದಿಲ್ಲ. ಯಾಕಂದರೆ ಸಚ್ಚಿದಾನಂದ ಸ್ವರೂಪವಾದ ಲಿಂಗವನ್ನೇ ಜನನ ಪೂರ್ವದಲ್ಲಿ ಧಾರಣ ಮಾಡಿಕೊಂಡಿರುವದರಿಂದ ಪವಿತ್ರ ಅಂಗವೆಂಬ ಅರ್ಥವು. ಆದರೆ ಈ ಲಿಂಗಧಾರಣ ಕಾಲಕ್ಕೆ ಶುಭವಾದ ಶ್ರೀಶೈಲಾದಿ ಸ್ಥಾನಗಳಲ್ಲಿ ಉದ್ಭವಿಸಿದ ಪಂಚಸೂತ್ರದ ಲಿಂಗವನ್ನು ವಿಧಿಯುಕ್ತವಾಗಿ ಪೂಜಿಸಿ ಗರ್ಭವತಿಯರ ವಶಕ್ಕೆ ಕೊಟ್ಟಿರಬೇಕು. ಆ ಗರ್ಭವತೀಯು ಸ್ತ್ರೀಯರು ನಿತ್ಯ ಸ್ನಾನ ಶಿವಪೂಜಾದಿಗಳನ್ನು ಆಚರಿಸುತ್ತಿರಬೇಕು. ಜನನನವಾದಕೂಡಲೇ ಅದೇ ಲಿಂಗವನ್ನು ಧಾರಣ ಮಾಡಬೇಕು. ಇದೇ ಕ್ರಮವು ವೀರಶೈವ ಧರ್ಮ ಪ್ರಕಾರ ಶ್ರೇಷ್ಠವಾದದ್ದೆನಿಸುವದು. ಇನ್ನು ಶಿಶುವು ಜನಿಸಿದ ನಂತರ ಗುರುಗಳಿಂದ ಲಿಂಗ ಧಾರಣ ಮಾಡಿಸುವದು ಮಧ್ಯಮ ಪದ್ಧತಿಯೆನಿಸುವದು. ಆದರೆ ೩-೫-೧೧ ದಿನಗಳಲ್ಲಿ ಲಿಂಗಧಾರಣ ಮಾಡಿಸುವದು ಕನಿಷ್ಠ(ಹೀನ)ಪದ್ಧತಿಯೆನಿಸುವದು. ಕಾರಣ ಶ್ರೇಷ್ಠ ಪದ್ಧತಿಯನ್ನೇ ಅನುಸರಿಸುವದುತ್ತಮವು.

### ಪಂಚಸೂತ್ರದ ಲಿಂಗುವಿನ ಲಕ್ಷಣ.

ಲಿಂಗವೃತ್ತ ಸಮಂ ಪೀಠಂ ದೀರ್ಘಂ ವಿಸ್ತಾರಮೇವಚ ।
ತದರ್ಧಂ ಗೋಮುಖಂ ಚೈವ ಗೋಮುಖಾಗ್ರಂ ತದರ್ಧಕಂ ॥
ತದರ್ದಂ ನಾಳ ವಿಸ್ತಾರಂ ಪಂಚಸೂತ್ರಂ ಪ್ರಕೀರ್ತಿತಂ ॥ ೧ ॥

ಎಂಬಂತೆ ಲಿಂಗದ ಸುತ್ತಳತೆಗೆ ಸಮಾನವಾಗಿ ಪೀಠವೂ ಆ ಲಿಂಗದ ಸುತ್ತಳತೆಯಲ್ಲಿ (ಪೂರ್ವ ಪಶ್ಚಿಮ ದಕ್ಷಿಣೋತ್ತರದ ಸಮನಾದ ಸುತ್ತಳತೆಯಲ್ಲಿ) ಅರ್ಧ ಭಾಗದಷ್ಟು ಗೋಮುಖವೂ ಆ ಗೋಮುಖದ ಅರ್ಧ ಭಾಗದಷ್ಟು ಗೋಮುಖದ ಅಗ್ರವೂ (ತುದಿಯೂ) ಆ ಮುಖದ ಅರ್ಧ ಭಾಗದಷ್ಟು ನಾಳವೂ ಇದ್ದ

ಇಂಥ ಲಕ್ಷಣಯುಕ್ತವಾದದ್ದೇ ಪಂಚ ಸೂತ್ರದ ಲಿಂಗವೆಂದು ಹೇಳಲ್ಪಡುವದು.

ಈ ಲಿಂಗಧಾರಣ ಸಂಸ್ಕಾರವನ್ನು ಮಾಡುವ ಸಮಯದಲ್ಲಿ ಮನೆಯನ್ನು ಷಟ್ಸಮ್ಮಾರ್ಜನೆಯಿಂದ ಸಾರಿಸಿ ಶುಚಿಯನ್ನಾಗಿ ಮಾಡಬೇಕು ಬಳಿಕ ತಳಿರು ತೋರಣಗಳಿಂದ ಅಲಂಕಾರ ಮಾಡಿ ಸಮಸ್ತ ಪೂಜಾ ಸಾಮಗ್ರಿಗಳನ್ನು ಸಜ್ಜುಗೊಳಿಸಿಕೊಂಡು ಶಿಶುವಿನ ತಂದೆಯು ಮೊದಲು ಶ್ರೀ ಗುರುವಿನ ಸಮ್ಮುಖದಲ್ಲಿ ಸಂಕಲ್ಪವನ್ನು ಮಾಡಬೇಕು. ಹೇಗಂದರೆ— ದೇಶಕಾಲಾದಿಗಳನ್ನುಚ್ಚರಿಸಿ—

"ಏವಂ ಗುಣವಿಶೇಷಣ ವಿಶಿಷ್ಟಾಯಾಂ ಅಸ್ಯಾಂ ಶುಭ ತಿಥೌ ಮಮ ಧರ್ಮಪತ್ನ್ಯಾಂಜಾತಸ್ಯಕುಮಾರಸ್ಯಆಯುಷ್ಯಾಭಿವೃದ್ಧ್ಯರ್ಥಂ........ಗೋತ್ರೋತ್ಪನ್ನಸ್ಯ ಶಿಶೋರ್ಗರ್ಭವಿತ್ರದೋಷಾಪನೋದನದ್ವಾರಾ ಲಿಂಗಾಂಗಿತ್ವ ಸಿದ್ಧ್ಯರ್ಥಂ ಜಾತಕರ್ಮಾಖ್ಯಂ ಕರ್ಮಕರಿಷ್ಯಮಾಣಸ್ತದಂಗ ನಾಂದಿಶೋಭನ ದೇವತಾ ಪ್ರೀತ್ಯರ್ಥಂ ನಾಂದೀ ಸಮಾರಾಧನಾಖ್ಯಂ ಕರ್ಮಕರಿಷ್ಯಮಾಣಸ್ತದಾದೌ ಶುದ್ಧ್ಯರ್ಥಂ ವೃದ್ಧ್ಯರ್ಥಂ ಆಭ್ಯುದಯಾರ್ಥಂಚ ಮಾಹೇಶ್ವರೈಸ್ಸಹಸ್ವಸ್ತಿ ಪುಣ್ಯಾಹವಾಚನಂ

ಎಂದು ಸಂಕಲ್ಪವನ್ನು ಮಾಡಿ ಈ ಹಿಂದೆ ತಿಳಿಸಿದ ಮೇರೆಗೆ ಸ್ವಸ್ತಿಪುಣ್ಯಾಹವಾಚನ ನಾಂದೀ ಕರ್ಮಗಳನ್ನು ಮುಗಿಸಿದ ಬಳಿಕ ಮಾಹೇಶ್ವರನು ಒಂದು ಶಿವ ಕಲಶವನ್ನು ಪ್ರತಿಷ್ಠಾಪನ ಮಾಡಿ, ಅದರಲ್ಲಿ ಶಿವನನ್ನು ಆವಾಹನ ಮಾಡುವ ಮಂತ್ರ—

"ವ್ಯೋಮ ವ್ಯೋಮಾಯ ವಿದ್ಮಹೇ ।
ಸೂಕ್ಷ್ಮ ಸೂಕ್ಷ್ಮಾಯ ಧೀಮಹಿ ।
ತನ್ನೋಶಿವಃ ಪ್ರಚೋದಯಾತ್ ॥"

ಎಂದು ಶಿವನನ್ನು ಆವ್ಹಾಹನ ಮಾಡಿ (ಇಷ್ಟಲಿಂಗದ ಪೂಜಾ ಪ್ರಕರಣದಲ್ಲಿ ಉಕ್ತವಾದ ಉಪಚಾರ ಮಂತ್ರಗಳಿಂದ) ಪೂಜಿಸಿ ಕಲಶದ ಮೇಲೆ ಬಲ ಹಸ್ತವನ್ನಿಟ್ಟು "ನಮಃ ಶಿವಾಯ"ಎಂಬ ಪಂಚಾಕ್ಷರ ಮಂತ್ರವನ್ನು ನೂರಾ ಎಂಟು ಸಾರೆ ಜಪಿಸಿ ಪಂಚಸೂತ್ರದ ಲಿಂಗವನ್ನು ಕೈಯಲ್ಲಿ ತೆಗೆದುಕೊಂಡು ಹಿಂದೆ ಹೇಳಿರುವ "ನಮಸ್ತೇ ರುದ್ರಮನ್ಯವ"ಎಂದು ಆರಂಭಿಸಿ 'ಅಸ್ಮಿನ್ನಿಧೇಹಿತಂ' ಎನ್ನುವವರೆಗೂ ಅನುವಾಕವನ್ನು ಪಠಿಸುತ್ತಾ ಅಭಿಷೇಕವನ್ನು ಮಾಡಿ ಹಿಂದೆ ಹೇಳಿದಂತೆ ಷಂಚೋಪಚಾರಗಳಿಂದ ಪೂಜಿಸಬೇಕು. ತದನಂತರ ಶಿವಲಿಂಗವನ್ನು ಜಲಾಧಿವಾಸ ಮಾಡಿಸುವದಕ್ಕಾಗಿ ಸಂಕಲ್ಪವನ್ನು ಮಾಡಬೇಕು. ಹೇಗೆಂದರೆ ದೇಶಕಾಲಾದಿಗಳನ್ನುಚ್ಚರಿಸಿ —

"ಏವಂ ಗುಣ................ಶುಭ ತಿಥೌ ಲಿಂಗಸ್ಯ ಕರ್ಷಣಾದಿ ದೋಷ ನಿವೃತ್ತ್ಯರ್ಥಂ ಜಲಾಧಿವಾಸಂ ಕರಿಷ್ಯೇ"

ಎಂದು ಸಂಕಲ್ಪ ಮಾಡಿ, ಒಂದು ಪಾತ್ರೆಯಲ್ಲಿ ಗಂಗಾತೀರ್ಥ ಜಲವನ್ನೂ ಪಂಚಗವ್ಯವನ್ನೂ, ಭಸ್ಮವನ್ನೂ ಸಂಮಿಶ್ರಮಾಡಿ, ಲಿಂಗವನ್ನು ಎರಡು ದರ್ಭೆಗಳಿಂದ ಯುಕ್ತವಾದ ಎರಡು ವಸ್ತ್ರಗಳನ್ನು ಸುತ್ತಿ ಆ ಪಾತ್ರೆಯಲ್ಲಿಟ್ಟು, ಅದನ್ನು ಎಡಗೈಯಿಂದ ಹಿಡಿದು, "ಓಂ ನಮಃ ಶಿವಾಯ"ಎಂಬ ಷಡಕ್ಷರ ಮಂತ್ರವನ್ನು ೧೦೮ ಸಾರೆ ಜಪಿಸಿ, ಲಿಂಗವನ್ನು ಆ ಪಾತ್ರೆಯಿಂದ ಮೇಲೆ ತೆಗೆದು (ಆ ವಸ್ತ್ರಗಳನ್ನು ಬಿಟ್ಟು) ಶುದ್ಧೋದಕದಿಂದ ಅಭಿಷೇಕವನ್ನು ಮಾಡಿ ಹಿಂದೆ ಹೇಳಿದಂತೆ ಪಂಚೋಪಚಾರಗಳಿಂದ ಪೂಜೆ ಮಾಡಬೇಕು- (ಶಿವಕಲಶದಿಂದ ಶಿಬುವು ಇರುವ ಸ್ಥಾನದ ವರೆಗೆ ಧಾರದಿಂದ ಸೂತ್ರವನ್ನು ಮರೆಯದೇ ಹಚ್ಚಬೇಕು )

## ಧಾನ್ಯಾದಿ ವಾಸ ವಿಧಾನ

"ಏವಂ ಗುಣ... ....... .. ಶುಭ ತಿಥೌ ಶಿವಲಿಂಗಸ್ಯ ದೇವತಾ ಬೀಜತ್ವ ಸಿದ್ಯರ್ಥಂ ಧಾನ್ಯಾಧಿ ವಾಸಂ ಕರಿಷ್ಯೇ"

ಎಂದು ಸಂಕಲ್ಪ ಮಾಡಬೇಕು. ತರುವಾಯ ಶಿವ ಕಲಶದ ಈಶಾನ್ಯದಿಕ್ಕಿನಲ್ಲಿ ಷಟ್ಸಮಾರ್ಜನೆಯಿಂದ ಸಾರಣೆ ಮಾಡಿ ಭೂ ಶುದ್ಧಿಯನ್ನು ಮಾಡಿ, ರಂಗವಲ್ಲಿಯಿಂದ ಅಷ್ಟದಳದ ಕಮಲವನ್ನು ಬರೆದು,ಅದರ ಮೇಲೆ ಅಕ್ಕಿಯಿಂದ ತುಂಬಿದ ಪಾತ್ರೆಯನ್ನು ಇಟ್ಟು, ಆ ಶಿವಲಿಂಗವನ್ನು ಎರಡು ದರ್ಭೆ ಎರಡು ಸಣ್ಣ ವಸ್ತ್ರಗಳಿಂದ ಸುತ್ತಿ, ಲಿಂಗದ ಶಿರಸ್ಸು ಪೂರ್ವಕ್ಕೆ ಮಾಡಿ, ಗೋಮುಖವು ಕೆಳಭಾಗಕ್ಕೆ ಆಗುವಂತೆ ಮಾಡಿ "ತತ್ಪುರುಷ"ಮಂತ್ರದಿಂದ ಅಕ್ಕಿಯ ಪಾತ್ರೆಯಲ್ಲಿ ಶಿವಲಿಂಗವನ್ನು ಮಲಗಿಸಿ ಅದನ್ನು ಎಡಗೈಯಿಂದ ಹಿಡಿದುಕೊಂಡು, ಪ್ರಾಣಾಯಾಮವನ್ನು ಮಾಡಿ ೧೦೮ ಸಾರೆ ಪಂಚಾಕ್ಷರೀ ಮಂತ್ರದಿಂದ ಅಭಿಮಂತ್ರಿಸಬೇಕು. ಆ ಬಳಿಕ ಶಿವಲಿಂಗವನ್ನು ಮೇಲಕ್ಕೆ ಎಬ್ಬಿಸಿ ಹಸ್ತದಲ್ಲಿ ತೆಗೆದುಕೊಂಡು ಪಾದ್ಯ-ಅರ್ಘ್ಯ ಅಚಮನಗಳಿಂದಲೂ, ಪಂಚಾಮೃತದಿಂದಲೂ ಬೇರೆ ಬೇರೆಯಾಗಿ ಹಿಂದೆ ಹೇಳಿದಂತೆ ಅಭಿಷೇಕವನ್ನು ಸಕ್ರಮವಾಗಿ ಮಾಡಬೇಕು, ತದ ನಂತರ ಪ್ರಾಣ ಪ್ರತಿಷ್ಠೆಯನ್ನು ಮಾಡಬೇಕು.

## ಶಿವಲಿಂಗ ಪ್ರಾಣ ಪ್ರತಿಷ್ಠಾ ಕ್ರಮವು

"ಓಂ ಅಸ್ಯ ಶ್ರೀ ಶಿವಲಿಂಗ ಪ್ರಾಣ ಪ್ರತಿಷ್ಠಾಪನ ಮಂತ್ರಸ್ಯ ಬ್ರಹ್ಮ ವಿಷ್ಣು ರುದ್ರ ಈಶ್ವರ ಸದಾಶಿವ ಋಷಯಃ ಋಗ್ಯಜು ಸಾಮಾರ್ಥವಾಣಿ ಛಂದಾಗ್ಂಸಿ ಸಕಲ ಜಗತ್ಸೃಷ್ಟಿಕಾರಿಣೀ ಪ್ರಾಣಶಕ್ತಿಃ। ಪರಾದೇವತಾ। ಅಂಬೀಜಂ ಹ್ರೀಂ ಶಕ್ತಿಃ ಕ್ರೌಂ ಕೀಲಕಂ ಅಮೃತಲಿಂಗ ಮಧ್ಯೇ ಮಹಾದೇವ ಪ್ರಾಣ ಪ್ರತಿಷ್ಠಾ ಸಿದ್ಧ್ಯರ್ಥಂ ಜಪೇ ವಿನಿಯೋಗಃ"

ಎಂದು ಹೇಳಿ, ಆ ಬಳಿಕ—

"ಓಂ ಆಂಹ್ರೀ ಕ್ರೋಂ ಆಕಾಶ ವಾಯು ವಹ್ನಿ ಸಲಿಲ ಪೃಥಿವ್ಯಾತ್ಮನೆ ಅಂ ಕಂ ಖಂ ಗಂ ಘಂ ಙಂ ಆಂ ಹ್ರಿಂ ಕ್ರೋಂ ಅಂ ಓಂ ಅಂಗುಷ್ಠಾಭ್ಯಾಂ ನಮಃ। ಆಂ ಹ್ರೀಂ ಕ್ರೋಂ ಶಬ್ದ, ಸ್ಪರ್ಶ ರೂಪರಸ ಗಂಧಾತ್ಮನೆ ಇಂ ಚಂ ಛಂ ಜಂ ಝಂ ಇಂ ಆಂ ಹ್ರೀಂ ಕ್ರೋಂ ಈಂ ಓಂ ತರ್ಜನೀಭ್ಯಾ ನಮಃ। ಓಂ ಆಂ ಹ್ರಿಂ ಕ್ರೋಂ ತ್ವಕ್ಚಕ್ಷುಶ್ಶ್ರೋತ್ರ ಜಿಹ್ವಾಘ್ರಾಣಾತ್ಮನೇ ಓಂ ಟಂ ಠಂ ಡಂ ಢಂ ಣಂ ಜಂ ಆಂ ಹ್ರೀಂ ಕ್ರೋಂ ಓಂ ಮಧ್ಯಮಾಭ್ಯಾ ನಮಃ ಓಂ ಆಂ ಹ್ರೀಂ ಕ್ರೋಂ ವಾಕ್ಪಾಣಿಪಾದಪಾಯುಪಸ್ಥಾತ್ಮನೆ ಓಂ ತಂ ಥಂ ದಂ ಧಂ ನಂ ಓಂ ಓಂ ಆಂ ಹ್ರೀಂ ಕ್ರೋಂ ಓಂ ಅನಾಮಿಕಾಭ್ಯಾಂ ನಮಃ ಓಂ ಅಂ ಹ್ರಿಂ ಕ್ರೋಂ ಮನೋಬುದ್ಧ್ಯಹಂಕಾರ ಚಿತ್ತ ವಿಜ್ಞಾನಾತ್ಮನೆ ಓಂ ಪಂ ಫಂ ಬಂ ಭಂ ಮಂ ಔಂ ಆಂ ಹ್ರೀಂ ಕ್ರೋಂ ಕನಿಷ್ಠಿಕಾಭ್ಯಾಂ ನಮಃ। ಓಂ ಆಂ ಹ್ರಿಂ ಕ್ರೋಂ ವಚನದಾನಗಮನ ವಿಸರ್ಜನಾನಂದಾತ್ಮನೆ ಆಂ ಯಂ ರಂ ಲಂ ವಂ ಶಂ ಷಂ ಸಂ ಹಂ ಳಂ ಕ್ಷಂ ಆಂ ಹ್ರೀಂ ಕ್ರೋಂ ಅಂ ಕರತಲಕರಪೃಷ್ಠಾಭ್ಯಾಂ ನಮಃ ॥"

ಎಂದು ಕರನ್ಯಾಸವನ್ನು ಮಾಡಬೇಕು. ತರುವಾಯ ಇದೇ ಪ್ರಕಾರವಾಗಿ ಹೃದಯನ್ಯಾಸವನ್ನು ಮಾಡಬೇಕು. ಹೇಗೆಂದರೆ--

"ಓಂ ಆಂ ಹ್ರೀಂ.................ಅಂ ಓಂ ಹೃದಯಾಯನಮಃ। ಆಂ ಹ್ರೀಂ................ಓಂ ಶಿರಸೇ ಸ್ವಹಾ। ಓಂ ಆಂ ಹ್ರೀಂ........... ....ಓಂ ಶಿಖಾಯೈ ವಷಟ್। ಓಂ............ಅಂ............ಕ್ರೋಂ ಓಂ ಕವಚಾಯ ಹುಂ। ಓಂ ಆಂ............ಕ್ರೋಂ ನೇತ್ರತ್ರಯಾಯ ವೌಷಟ್। ಓಂ ಆಂ .......ಕ್ರೋಂ ಅಂ ಅಸ್ತ್ರಾಯ ಫಟ್। ಓಂ ಭೂರ್ಭುವಸ್ಸ್ವರೋಂತಿ ದಿಗ್ಬಂಧಃ ॥"

ಹೃದಯನ್ಯಾಸ-ಕರನ್ಯಾಸ ಮಾಡುವಾಗ ಹಿಂದೆ ಹೇಳಿದ ನ್ಯಾಸ ಮಂತ್ರಗಳನ್ನು ಅಂದು ಅಂತ್ಯಕ್ಕೆ ಮಾತ್ರ ಮೇಲೆ ಹೇಳಿದಂತೆ "ಶಿರಸೇ ಸ್ವಾಹಾ" "ಶಿಖಾಯೈ ವೌಷಟ್" "ಹೃದಯಾನಮಃ" ಎಂದು ಬೋಧಿಸಿ ವಾಕ್ಯಗಳನ್ನು ಉಚ್ಚರಿಸಬೇಕು. ಆ ಬಳಿಕ ಧ್ಯಾನವು--

"ರಕ್ತಾಂಭೋಧಿಸ್ಥ ಪೋತೊಲ್ಲಸದರುಣಸರೋಜಾಧಿರೂಢಾಕ ರಾಜ್ಞೈಃ ಪಾಶಂ ಕೋದಂಡ ಮಿಕ್ಷೂದ್ಭವಮಳಿಗುಣಮಪ್ಯಂಕುಶಂ ಪಂಚ ಬಾಣಾನ್। ಬಿಭ್ರಾಣಾಸೃಕ್ಕಪಾಲಂ ತ್ರಿಣಯನ ವಿಲಸತ್ಪೀನ ವಕ್ಷೋರುಹಾಢ್ಯಾದೇವೀಬಾಲಾರ್ಕ ವರ್ಣಾ ಭವತು ಸುಖಕರೀ ಪ್ರಾಣಶಕ್ತಿಃ ಪರಾನಃ ॥"

ಹೀಗೆಂದು ಉತ್ಕೃಷ್ಟ ಧ್ಯಾನ ಮಾಡಿ, ತೊಳೆದ ಹೊಸ ಮಡಿ ವಸ್ತ್ರವನ್ನು ಮುಸುಕು ಮಾಡಿಕೊಂಡು—

"ಓಂ ಆಯುಷ್ಯ ಪ್ರಾಣಾಃ ಇಹಃ ಪ್ರಾಣಾಃ ಸ್ಸೋಽಹಂ ಸ್ಸೋಽಹಂ"

ಎಂದು ಉಚ್ಚರಿಸಿ ಪಾದದಿಂದ ನಾಭಿ ಪರ್ಯಂತ ಬ್ರಹ್ಮ ಭಾಗದಲ್ಲಿಯೂ ಇದರಂತೆ--

"ಓಂ ಆಯುಷ್ಯ ಜೀವ ಇಹಸ್ಥಿತಃ ಸ್ಸೋಽಹಂ ಸ್ಸೋಽಹಂ"

ಎಂದು ಪಠಿಸಿ ನಾಭಿಯಿಂದ ಹೃದಯದ ವರೆಗೂ ವಿಷ್ಣು ಭಾಗದಲ್ಲಿಯೂ ಆ ಬಳಿಕ--

"ಓಂ ಆಯುಷ್ಯ ಸರ್ವೇಂದ್ರಿಯಾಣಿ ವಾಙ್ಮನಶ್ಚಕ್ಷುಃ ಶ್ರೋತ್ರ ಜಿಹ್ವಾ ಘ್ರಾಣಾ ಇಹೈವಾಗತ್ಯ ಸುಖಂ ಚಿರಂ ತಿಷ್ಠಂತು ಸ್ವಾಹಾ"

ಹೀಗೆಂದು ಹೇಳಿ ಹೃದಯದಿಂದ ಮಸ್ತಕದ ವರೆಗೂ, ರುದ್ರ ಭಾಗದ ದಲ್ಲಿಯೂ (ನ್ಯಾಸ)ವನ್ನು ಮಾಡಬೇಕು. ಅಂದರೆ ಶಿವಲಿಂಗದ ಆಯಾಯ ಭಾಗಗಳನ್ನು ಆಯಾಯ ಮಂತ್ರದಿಂದ ಮುಟ್ಟಬೇಕು. ಆ ಬಳಿಕ--

"ಓಂ ಆಂ ಹ್ರೀಂ ಕ್ರೋಂ ಅಮುಷ್ಯ ಪ್ರಾಣಾ ಇಹಪ್ರಾಣಾಃ ಸೋಽಹಂ ಸೋಽಹಂ । ಓಂ ಆಂ ಹ್ರೀಂ ಕ್ರೋಂ ಆಮುಷ್ಯಜೀವ ಇಹಸ್ಥಿತಿಃ ಸೋಽಹಂ ಸೋಽಹಂ । ಓಂ ಆಂ ಹ್ರೀಂ ಕ್ರೋಂ ಓಂ ಆಮುಷ್ಯ ಸರ್ವೇಂದ್ರಿಯಾಣಿ ಸೋಽಹಂ ಸೋಽಹಂ । ಓಂ ಆಂ ಹ್ರೀಂ ಕ್ರೋಂ ವಾಙ್ಮನಶ್ಚಕ್ಷುಃ ಶ್ರೋತ್ರ ಜಿಹ್ವಾ ಘ್ರಾಣ ಪ್ರಾಣೋಽಪಾನ ವ್ಯಾನೋದಾನ ಸಮಾನನಾಗ ಕರ್ಮಕೃಕರ ದೇವದತ್ತ ಧನಂಜಯಾದಿ ದಶಪ್ರಾಣಾ ಇಹಾಗತ್ಯಾಗತ್ಯ ಆಗಚ್ಛಾಗಚ್ಛ ಆಕರ್ಷಯಾಕ ರ್ಷಯ । ಸುಖಂ ಚಿರಂ ತಿಷ್ಠಂತುಸ್ವಾಹಾ ॥ ಆಂ ಹ್ರೀಂ ಕ್ರೋಂ ಟಂ ಠಂ ಡಂ ಢಂ ಣಂ ಉಂ ವಾಕ್ಪಾಣಿ ಪಾದಪಾಯೂಪಸ್ಥಾತ್ಮನೇ । ಓಂ ಅಂ ಹ್ರೀಂ ಕ್ರೋಂ ಐಂ ತಂ ಥಂ ದಂ ಧಂ ನಂ ತ್ವಕ್ಚಕ್ಷುಃ ಶೋತ್ರ ಜಿಹ್ವಾ ಘ್ರಾಣಾ ತ್ಮನೆ । ಓಂ ಅಂ ಹ್ರೀಂ ಕ್ರೋಂ ಓಂ ಪಂ ಫಂ ಬಂ ಭಂ ಮಂ ಔಂ ಮನೋ ಬುದ್ಧ್ಯಹಂಕಾರ ಚಿತ್ತವಿದ್ಯಾನಾತ್ಮನೆ । ಓಂ ಅಂ ಹ್ರಿಂ ಕ್ರೊಂ ಯಂ ರಂ ಲಂ ವಂ ಶಂ ಷಂ ಸಂ ಹಂ ಳಂ ಕ್ಷಂ ವಚನಾ ದಾನ ಗಮನ ವಿಸರ್ಜನಾನಂದತ್ಮಾನೆ ಆಮುಷ್ಯಪ್ರಾಣಾ ಇಹ ಪ್ರಾಣಾ ಆಮುಷ್ಯ ಜೀವ ಇಹಸ್ಥಿತಃ ಆಮುಷ್ಯ ಸರ್ವೇಂದ್ರಿಯಾಣಿ ಕಾಯ ವಾಙ್ಮನಶ್ಚ ಕ್ಷುಶ್ರೋತ್ರ ಜಿಹ್ವಾ ಘ್ರಾಣವಾಕ್ಪಾಣಿ ಪಾದಪಾಯೂಪ ಸ್ಥಾಸೃಕ್ ಮೇದೋಸ್ಥಿ ಮಜ್ಜಾಶುಕ್ಲ ಮನೋಬುದ್ಧ್ಯ ಹಂಕಾರ ಚಿತ್ತಾನಿ ಇಹಾಪ್ಯತ ಲಿಂಗ ಮಧ್ಯೇ ಸಮಾವಿಶ್ಯ ಸುಖಂ ಚಿರಂ ತಿಷ್ಠಂತು ಸ್ವಾಹಾ"

ಹೀಗೆಂದು ಉಚ್ಚರಿಸಿ ಪ್ರಾಣ ಹಾಗೂ ಇಂದ್ರಿಯಗಳನ್ನು ಪ್ರತಿಷ್ಠಾಪನೆ ಯನ್ನು ಮಾಡಿ:—

"ಅಸುನೀತೆ ಪುನರಸ್ಮಾಸುಚಕ್ಷುಃ ಪುನಃ ಪ್ರಾಣಮಿಹನೋ ಧೇಹಿ ಭೋಗಂ । ಜ್ಯೋಕ್ಪಶ್ಯೇಮ ಸೂರ್ಯಮುಚ್ಚರಂತ ಮನುಮತೆ ಮೃಡಯಾನ ಶ್ವಸ್ತಿ" ಆಂ ಕ್ರೀಂ ಹ್ರೊಂ ಓಂ । ಮಹಾಪದ್ಮಪನ್ನಾತಸ್ಥ ಕಾರಣಾನಂದ ವಿಗ್ರಹೆ।

ಸರ್ವಭೂತ ಹಿತೇ ಮಾತೆ ಏಹ್ಯಹಿಪರಮೇಶ್ವರಿ। ಓಂ ಅಂ ಹ್ರೀಂ ಕ್ರೋಂ। ಆವಾ ಹಿತೋಭವ ಆಸಿನೋಭವ। ಅವಕುಂರಿತೋಭವ। ಪ್ರಸೀದೋಭವ। ಸುಪ್ರಸನ್ನೋಭವ। ಅಸ್ಮಿನ್ ಅಮೃತಲಿಂಗ ಮೂರ್ತಿ ಮಧ್ಯೆ ಮಹಾದೇವಂ ಪ್ರಸನ್ನಂ ಕುರು ಕುರು ಸ್ವಾಹಾ॥ ಹಂ ಸ್ಲಾಂ ಹಂಸ್ಲೀಂ ಹಂಸ್ಲೂಂ ಹಂಸ್ಲೈಂ ಹಂಸ್ಲೌಂ ಹಂಸ್ಲಂ॥ ಆಗಚ್ಛಾದಿತ್ಯ ಮಧ್ಯಸ್ಯ ಪಾರ್ವತೀ ಸಹಿತ ಪ್ರಭೋ। ಅಸ್ಮಿನ್ ಬಿಂಬೆ ಪ್ರತಿ ದಿನಂ ಸನ್ನಿಧಿರ್ಭವ ಶಂಕರ.''

ಹೀಗೆಂದು ಪ್ರಾರ್ಥಿಸಿ ಪಾದ್ಯ ಅರ್ಘ್ಯ ಆಚಮನಗಳನ್ನು ಕೊಟ್ಟು ಮುಸುಕು ಹಾಕಿಕೊಂಡು ವಸ್ತ್ರವನ್ನು ತೆಗೆಯಬೇಕು. ಅನಂತರ ಕೆಳಗೆ ಬರೆದಂತೆ ಪಂಚ ಬ್ರಹನ್ಯಾಸವನ್ನು ಮಾಡಬೇಕು. ಹೇಗಂದರೆ:-

''ಓಂ ಹ್ರಾಂ ನಂ ಸದ್ಯೋಜಾತಾಯನಮಃ" ಹೀಗೆಂದು ಪಾದಗಳಲ್ಲಿಯೂ
"ಓಂ ಹ್ರೀಂ ಮಂ ವಾಮದೇವಾಯನಮಃ" ಹೀಗೆಂದು ಗುಹ್ಯಸ್ಥಾನದಲ್ಲಿಯೂ
"ಓಂ ಹ್ರೂಂ ಶಿ ಅಘೋರಾಯನಮಃ" ಹೀಗೆಂದು ಹೃದಯದಲ್ಲಿಯೂ,
"ಓಂ ಹ್ರೈಂ ವಾಂ ತತ್ಪುರುಷಾಯನಮಃ" ಹೀಗೆಂದು ಮುಖದಲ್ಲಿಯೂ,
"ಓಂ ಹ್ರೌಂ ಯಂ ಈಶಾಯ ನಮಃ'' ಹೀಗೆಂದು ಶಿರಸ್ಸಿನಲ್ಲಿಯೂ,
ಪಂಚಬ್ರಹ್ಮನ್ಯಾಸವನ್ನು ಮಾಡಬೇಕು. ತರುವಾಯ:-

''ಓಂ ಸಾಂಬಸದಾ ಶಿವಾಯ ನಮಃ''

ಎಂಬ ಮಂತ್ರದಿಂದ ಪಂಚೋಪಚಾರ ಅಥವಾ ಷೋಡಶೋಪಚಾರಗಳಿಂದ ಪೂಜಾ ಮಾಡಬೇಕು. ಆನಂತರ:-

''ಓಂ ನಿಧನಪತಯೇ ನಮಃ"

ಎಂದು ಪಠಿಸಿ ಲಿಂಗವನ್ನು ಎಡಹಸ್ತದಲ್ಲಿಟ್ಟುಕೊಂಡು ಮೊದಲು ಪೂಜಿಸಿದ ಕಲಶೋಧಕದಿಂದ ಪುರುಷಸೂಕ್ತ ಅಥವಾ ರುದ್ರಸೂಕ್ತದಿಂದ ಅಭಿಷೇಕ ಮಾಡುವದು. ತದನಂತರ ಗುರು ಪಾದೋದಕದಿಂದ ಅಭಿಷೇಕ ಮಾಡುವ ಮಂತ್ರ:—

''ಚರಣಂ ಪವಿತ್ರಂ ವಿತತಂ ಪುರಾಣಂ ಯೇನ ಪೂತಸ್ತರತಿದುಷ್ಕೃತಾನಿ ತೇನ ಪವಿತ್ರೇಣ ಶುದ್ಧೇನ ಪೂಜಾಃ। ಅತಿಪಾಪ್ಮಾನ ಮರಾತಂ ತರೇಮ"

ಹೀಗೆಂದು ಅಭಿಷೇಕ ಮಾಡಿ ಷೋಡಶೋಪಚಾರಗಳಿಂದ ಪೂಜೆ ಮಾಡಿ
''ಯಸ್ಯ ಸ್ಮೃತ್ಯಾಚ ನಾಮೋಕ್ತ್ಯಾ ತಪಃ ಪೂಜಾ ಕ್ರಿಯಾದಿಷು।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ಸದಾಶಿವಂ॥
ಮಂತ್ರ ಹೀನಂ ಕ್ರಿಯಾ ಹೀನಂ ಭಕ್ತಿಹೀನಂ ಮಹೇಶ್ವರ।
ಯತ್ಪೂಜಿತಂ ಮಯಾದೇವ ಪರಿಪೂರ್ಣಂ ತದಸ್ತುಮೆ॥

ಅನಯಾಧ್ಯಾನಾದಿ ಷೋಡಶೋಪಚಾರ ಪೂಜಯಾ ಭಗವಾನ್ ಸರ್ವಾತ್ಮಕ ಶ್ರೀ ಸಾಂಬಸದಾಶಿವ ಸುಪ್ರೀತ ಸುಪ್ರಸನ್ನೋ ವರದೋ ಭವತು ||"

ಎಂದು ಪಠಿಸಿ ಅಕ್ಷತೆ ಸಹಿತವಾಗಿ ಕೂಡಿದ ಹಿರಣ್ಯೋದಕವನ್ನು ಕೊಡಬೇಕು. ಆ ಬಳಿಕ:—

"ಅಂಗಾದಂ ಗಾತ್ಸಂ ಭವಸಿ ಹೃದಯಾ ಧಧಿಜಾಯಸೆ
ಆತ್ಮಾವೈ ಪುತ್ರನಾಮಾಸಿ ಸಜೀವ ಶರದಶ್ಶತಂ"

ಹೀಗೆಂದು ಹೇಳಿ ಶಿಶುವಿನ ಬಲಗಿವಿಗೆ ಬಂಗಾರವನ್ನು ಮುಟ್ಟಿಸಿ ಪುನಃ ಅದೇ ಮಂತ್ರದಿಂದ ಎಡಗಿವಿಗೂ ಮುಟ್ಟಿಸಬೇಕು. ತರುವಾಯ:-

"ಅಸ್ಮಾಭವ ಪರಶರ್ಭವ ಹಿರಣ್ಯಮಸ್ತ್ರ್ಯಸಂಭವ |
ಪಶೂನಾಂ ತ್ವಾಹಿಂ ಕಾರೇಣಾಭಿ ಜಿಘ್ರಾಮಿ ||

ಎಂದು ಉಚ್ಚರಿಸಿ ಶಿಶುವಿನ ಎರಡೂ ಭುಜಗಳ ಮೇಲೆ ಬಂಗಾರವನ್ನು ಮುಟ್ಟಿಸಬೇಕು. ತರುವಾಯ ಗುರುಗಳು:-

"ಓಂ ಭೂರ್ಭುವಃ ಸ್ವಃ| ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯಧೀಮಹಿ | ಧಿಯೋ ಯೋನಃ ಪ್ರಚೋದಯಾತ್"

ಎಂಬ ಗಾಯತ್ರೀ ಮಂತ್ರದಿಂದ ಶಿಶುವಿನ ತಲೆಯ ಮೇಲೆ ಕಲಶೋಧಕವನ್ನು ಮೂರು ಸಾರೆ ಸಿಂಪಡಿಸಬೇಕು. ಬಳಿಕ "ತ್ರ್ಯಂಬಕಂ" ಎಂಬ ಮಂತ್ರದಿಂದ ಭಸ್ಮವನ್ನು ಧರಿಸಿ ಲಿಂಗವನ್ನು ರೇಶ್ಮಿಯ ವಸ್ತ್ರದಲ್ಲಿ ಕಟ್ಟಿ:—

"ಯಜ್ಞೋಪವೀತಂ ಪರಮಂ ಪವಿತ್ರಂ ಪ್ರಜಾಪತೇರ್ಯತ್ಸಹಜಂ ಪುರಸ್ತಾತ್ | ಆಯುಷ್ಯಮಗ್ರ್ಯಂ ಪ್ರತಿಮುಂಚ ಶುಭ್ರಂ ಯಜ್ಞೋಪವೀತಂ ಬಲಮಸ್ತುತೇಜಃ ||"

ಎಂದು ಹೇಳಿ ಶಿಶುವಿನ ಕಂಠದಲ್ಲಿ ಆ ಲಿಂಗವನ್ನು ಧರಿಸಿ, ಶಿಶುವಿನ ಬಲಗಿವಿಯಲ್ಲಿ ಪಂಚಾಕ್ಷರೀ ಮಹಾಮಂತ್ರವನ್ನುಪದೇಶಿಸಿ ಪಾದೋದಕವನ್ನು ಕೊಡಿಸುವದು.

ಆ ಮೇಲೆ ಶಿಶುವಿನ ತಂದೆಯೇ ಒಂದು ಕಂಚಿನ ಪಾತ್ರೆಯಲ್ಲಿ ತುಪ್ಪ ಜೇನು ತುಪ್ಪಗಳನ್ನು ಹಾಕಿ ತಾಯಿಯ ತೊಡೆಯ ಮೇಲೆ ಪೂರ್ವಕ್ಕೆ ಮುಖ ಮಾಡಿದ ಶಿಶುವಿನ ಮಸ್ತಕವನ್ನು ಮೂಸಿನೋಡಿ—

"ಮೇಧಾಂತೆ ದೇವತ್ಸವಿತಾ ಮೇಧಾಂ ದೇವಿ ಸರಸ್ವತೀ |
ಮೇಧಾಂತೆ ಅಶ್ವಿನೌದೇವಾ ವಾಧತ್ತಾಂ ಪುಷ್ಕರಸ್ರಜಾ ||
ತ್ವಯಿಮೇಧಾಂ ತ್ವಯಿ ಪ್ರಜಾತ್ವಯ್ಯಗ್ನಿಸ್ತೇಜೋಧ ಧಾತು |
ತ್ವಯಿಮೇಧಾಂ ತ್ವಯಿ ಪ್ರಜಾಂತ್ವಯಿ ಸೂರ್ಯೋ ಭ್ರಾಜೋದ ಧಾತು ||

ಎಂಬ ಮಂತ್ರದಿಂದ ಶಿಶುವಿನ ಬಾಯಲ್ಲಿ ಸ್ವಲ್ಪ ತುಪ್ಪ ಜೇನುತುಪ್ಪಹಾಕಿ-

"ಸಸಿರಾ ಜಾತವೇದಾಃ ಅಕ್ಷರಂ ಪರಮಂ ಪದಂ | ದೇವನಾಂಗ್ಂ ಶಿರ ಉತ್ತಮಂ ಜಾತವೇದಸೆ ಶಿರಸೆ ಮಾತವೇ ಬ್ರಹ್ಮಭೂರ್ಭುವಾಸ್ಸುವರೋಂ"

ಎಂದು ಪತ್ನಿಯು ಬಲಮೊಲೆಯ ಮೇಲೆ ದರ್ಭೆಯಿಂದ ಸ್ವಲ್ಪ ತುಪ್ಪಜೇನು ತುಪ್ಪವನ್ನು ಸಿಂಪಡಿಸಿ —

"ಅಯಂ ಕುಮಾರೋ ಜರಾಂಧಯತ್ |
ದೀರ್ಘಾಯುಃ | ಯಸ್ಮೈತ್ವಗ್ಂಸ್ತನಪ್ರಪ್ಯಾಯಾಯುರ್ವ
ರ್ಚೋಯಶೋಬಲಂ || "

ಎಂಬ ಮಂತ್ರದಿಂದ ಶಿಶುವಿಗೆ ಮೊದಲು ಬಲಮೊಲೆಯನ್ನು ಕುಡಿಸುವದು. ಬಳಿಕ ಸರ್ವರೂ ಗುರುಪಾದೋದಕವನ್ನು ಸ್ವೀಕರಿಸಿ ಯಥಾ ಶಕ್ತಿ ಗಣಾರಾಧನೆಯನ್ನು ಮಾಡಿ ತಾಂಬೂಲ ದಕ್ಷಿಣೆಯನ್ನು ಕೊಟ್ಟು ಸಂತೋಷಗೊಳಿಸಬೇಕು. ನಂತರ ಮಾಹೇಶ್ವರರು ಶಿಸುವಿಗೆ ಆಶೀರ್ವಾದ ಮಾಡುವದು.

|| ಇತಿ ಜಾತಕರ್ಮ ಸಂಸ್ಕಾರ ವಿಧಿ ಸಮಾಪ್ತ ||

  

# ಶಿಶುವಿಗೆ ಹೆಸರಿಡುವ ಹಾಗೂ ತೊಟ್ಟಿಲಲ್ಲಿ ಹಾಕುವ ಸಂಸ್ಕಾರ ವಿಧಾನವು.

ಜ್ಯೋತಿಷ್ಕರಿಂದ ನಿರ್ಧಾರ ಮಾಡಿದ ಶುಭ ದಿವಸದಲ್ಲಿ ಮೊದಲು ಶ್ರೀ ಗುರುಗಳನ್ನು ಮನೆಗೆ ಕರೆತಂದು ಇಷ್ಟಲಿಂಗಾರ್ಚನೆ ವಗೈರೆ ಮುಗಿದ ನಂತರ ದಂಪತಿಗಳು ಕೂಸಿನೊಂದಿಗೆ ಮಂಗಲಸ್ನಾನವನ್ನು ಮಾಡಿ ಗುರುಗಳೆದುರಿಗೆ ಶುಭಾಸನದಲ್ಲಿ ಕುಳಿತು ಆಚಮನ ಪ್ರಾಣಾಯಾಮಾದಿಗಳನ್ನು ಮಾಡಿ ದೇಶಕಾಲಾದಿಗಳನ್ನು ಉಚ್ಚರಿಸಿ:—

"ಏವಂ ಗುಣ...........ಅಸ್ಯಾಂ ಶುಭ ತಿಥೌ ಅಸ್ಯ ಶಿಶೋಃ ಆಯುಷ್ಯಾಭಿವೃದ್ಧ್ಯರ್ಥಂ ವ್ಯವಹಾರಾರ್ಥಂ ಮಾಸಾಂ ನಾಮಕರ ಣಾಹವೇ"

ಹೀಗೆಂದು ಸಂಕಲ್ಪವನ್ನು ಮಾಡಿ, ಒಂದು ಕಂಚಿನ ಪಾತ್ರೆಯಲ್ಲಿ ಅಕ್ಕಿಯನ್ನು ತುಂಬಿ ಆದರಲ್ಲಿ ಮಾಸನಾಮ ನಕ್ಷತ್ರನಾಮ ವ್ಯವಹಾರ ನಾಮಗಳನ್ನು ಬರೆಯುವದು.

(೧) ಜನನವಾದ ಮಾಸದ ಹೆಸರು, ಅಂದಿನ ನಕ್ಷತ್ರದ ಹೆಸರು ಹಾಗೂ ಹುಟ್ಟಿದ ದಿನದ ಹೆಸರು ಇದ್ದಕ್ಕಿದ್ದ ಹಾಗೆ ಬರೆಯುವದೇ ಮಾಸ ನಾಮ ನಕ್ಷತ್ರ ನಾಮವೆನಿಸುವದು. ೨) ಇನ್ನು ವ್ಯವಹಾರ ನಾಮವು, ಗಂಡು ಕೂಸಿಗೆ ಗಂಗಾ

ಧರ, ಜಯದೇವ, ಬಸವರಾಜ ಮೊದಲಾದ ಸರಿ ಅಕ್ಷರವಿದ್ದದ್ದು-- ಹೆಣ್ಣು ಕೂಸಿಗೆ ಪಾರ್ವತೀ, ಕಲ್ಯಾಣೀ, ಮೊದಲಾದ ಬೆಸ ಅಕ್ಷರದ್ದು ಇರಬೇಕು.) ಆ ಹೆಸರಿನ ಆರಂಭದಲ್ಲಿ ಹಾಗೂ ಕೊನೆಯಲ್ಲಿ ಶ್ರೀಕಾರವನ್ನು ಬರೆದು:—

"ಮಾಸನಾಮ ನಕ್ಷತ್ರನಾಮ ವ್ಯವಹಾರನಾಮಾದಿಷ್ಠಿತ ದೇವತಾಭ್ಯೋ ನಮಃ"

ಎಂಬ ಮಂತ್ರದಿಂದ ಪೂಜೆ ಮಾಡಬೇಕು. ಆ ಬಳಿಕ ತಂದೆಯು ಇದೇ ಕೂಸಿನ ಹೆಸರೆಂದು ಅಲ್ಲಿ ನೆರೆದ ಜನಗಳಿಗೆ ತಿಳಿಸಬೇಕು. ಆಗ ಎಲ್ಲರೂ,

"ತಥೈವಾಸ್ತು"

ಎಂದು ಅನ್ನಬೇಕು. ತರುವಾಯ ಕೂಸಿನ ಬಲಗಿವಿಯಲ್ಲಿ ಆ ಹೆಸರನ್ನೇ ಗುರುಗಳು ಗಟ್ಟಿಯಾಗಿ ಹೇಳಿ, ಅದೇ ಹೆಸರಿನಿಂದ ಗುರುಗಳಿಗೂ, ಮಹೇಶ್ವರರಿಗೂ ಕೂಸಿನಿಂದ ನಮಸ್ಕಾರವನ್ನು ಮಾಡಿಸಬೇಕು. ತದನಂತರ--

"ಅಂಗಾದಂಗಾತ್ಸಂ ಭವಸಿ ಹೃದಯಾದಧಿ ಜಾಯಸೇ ।
ಆತ್ಮಾವೈ ಪುತ್ರನಾಮಾಸಿ ಸಜೀವ ಶರದಶ್ಶತಂ ॥"

ಎಂಬ ಮಂತ್ರದಿಂದ ಮೂರು ಸಾರೆ ಪುನಃ ಪುನಃ ಅಭಿಮಂತ್ರಿಸಿ ಕೂಸಿನ ಮಸ್ತಕವನ್ನು ಮೂಸಿನೋಡಬೇಕು. ಆ ಬಳಿಕ ಮಾಸ ನಾಮಾದಿಗಳನ್ನು ಅನ್ನುತ್ತ ಗುರು–ಮಹೇಶ್ವರರಿಗೆ ಕೂಸಿನಿಂದ ನಮಸ್ಕಾರ ಮಾಡಿಸಬೇಕು. ಆ ಬಳಿಕ—

"ಅಗ್ನಿರಾಯುಷ್ಮಾಂತ್ಸ ವನಸ್ಪತಿಭಿರಾಯುಷ್ಮಾನ್ ತೇನತ್ವಾಯುಷಾಯುಷ್ಮಂತಂ ಕರೋಮಿ ॥೧॥ ಸೋಮ ಆಯುಷ್ಮಾಂತ್ಸ ಓಷಧೀಬಿರಾಯುಷ್ಮಾನ್ ತೇನತ್ವಾಯುಷಾ ಯುಷ್ಮಂತಂ ಕರೋಮಿ ॥೨॥ ಯಜ್ಞ ಆಯುಷ್ಮಾಂತ್ಸ ದಕ್ಷಿಣಾಭಿರಾಯುಷ್ಮಾನ್ ತೇನತ್ವಾಯುಷ್ಮಾತಂ ಕರೋಮಿ ॥೩॥ ಬ್ರಹ್ಮಾಯುಷ್ಮತ್ತದ್ಬ್ರಾಹ್ಮಣೈರಾಯುಷ್ಮತ್ತೇನತ್ವಾಯುಷ್ಮಾಂತಂ ಕರೋಮಿ ॥೪॥ ದೇವಾ ಆಯುಷ್ಮಂ ತಸ್ತೇಽಮೃತೇ ನಾಯುಷ್ಮಂ ತಸ್ತೇನತ್ವಾಯುಷ್ಮಾಂತಂ ಕರೋಮಿ ॥೫॥

ಈ ಐದು ಮಂತ್ರಗಳನ್ನು ಕೂಸಿನ ಕಿವಿಯಲ್ಲಿ ಹೇಳಬೇಕು. ಹೆಣ್ಣು ಕೂಸಾದೊಡೆ—

"ಸರ್ವಸ್ಮಾದಾತ್ಮನಃ ಸಂಭೂತಾಸಿಸಾಜೀವಃ ಶರದಃ ಶ್ಶತಂ"
ಎಂಬೀ ಮಂತ್ರದಿಂದ ಅಭಿಮಂತ್ರಿಸಬೇಕು. ಆ ಬಳಿಕ ಮಹೇಶ್ವರರು—
"ಶತಮಾನಂಭವತಿ ಶತಾಯುಃ ಪುರುಷಶ್ಶತೇಂದ್ರಿಯಃ ।
ಆಯುಷ್ಯೇವೇಂದ್ರಿಯೆ ಪ್ರತಿತಿಷ್ಠತಿ ॥"

ಹೀಗೆಂದು ಆಶೀರ್ವಾದ ಮಾಡಬೇಕು. ತರುವಾಯ ಗುರು-ಮಾಹೇಶ್ವರರಿಗೆ ಯಥಾಶಕ್ತಿ ಭೋಜನ ಮಾಡಿಸಿ ತಾಂಬೂಲ ದಕ್ಷಿಣೆ ಕೊಟ್ಟು ತೃಪ್ತಿಪಡಿಸಬೇಕು. ಮತ್ತು ಅಂದೇ ಮುತ್ತೈದೆಯವರಿಂದ ತೊಟ್ಟಿಲ ಪೂಜೆಯನ್ನು ಮಾಡಿಸಿ ಅದರಲ್ಲಿ ಮಡಿ ವಸ್ತ್ರಗಳನ್ನು ಅಥವಾ ನವೀನ ವಸ್ತ್ರಗಳನ್ನು ಹಾಸಿ ಆ ಶಿಶುವನ್ನು ತೊಟ್ಟಿಲಲ್ಲಿ ಮಲಗಿಸಿ, ಮಂಗಲಕರವಾದ ಪದ-ದದ್ಯಗಳನ್ನೂ, ಜೋಗುಳ ಹಾಡುಗಳನ್ನೂ ಹಾಡಬೇಕು. ಹಾಗೂ ಗುರುಗಳಿಂದ ಮೊದಲು ಕರೆಯಲ್ಪಟ್ಟ ಪ್ರೀತಿಯ ಹೆಸರನ್ನು ಮುತ್ತೈದೆಯವರಿಂದ ಪುನಃ ಕರೆಯಿಸಿ, ಆ ಮುತ್ತೈದೆಯವರಿಗೆ ಭೋಜನ ವಗೈರೆ ಮಾಡಿಸಿದ ನಂತರ ತಾಂಬೂಲಾದಿಗಳಿಂದ ಸತ್ಕರಿಸಬೇಕು.

|| ಇತಿ ಹೆಸರಿಡುವ ತೊಟ್ಟಿಲಲ್ಲಿ ಹಾಕುವ ಸಂಸ್ಕಾರ ವಿಧಾನ ಸಮಾಪ್ತಿ ||

## ಸೂರ್ಯ ಚಂದ್ರಾವಲೋಕನ ಹಾಗೂ ಉಪನಿಷ್ಕ್ರಮಣ ಸಂಸ್ಕಾರ-ವಿಧಾನ

ಈ ಸಂಸ್ಕಾರ ವಿಧಾನವನ್ನು ಶಿಶುವಿಗೆ ಮೂರು ತಿಂಗಳು ಕಳೆದ ನಂತರ ನಾಲ್ಕನೇ ತಿಂಗಳಲ್ಲಿ ಶುಭ ದಿವಸ, ಶುಭ ಮುಹೂರ್ತದಲ್ಲಿ ಶಿಶುವಿನ ತಂದೆಯು ತನ್ನ ಪತ್ನಿಯೊಡನೆ ಮಂಗಲ ಸ್ನಾನವನ್ನು ಮಾಡಿ ಗುರು-ಮಹೇಶ್ವರರ ಸಮ್ಮುಖದಲ್ಲಿ ಭದ್ರಾಸನದ ಮೇಲೆ ಕುಳಿತು ಆಚಮನ, ಪ್ರಾಣಾಯಾಮಗಳನ್ನು ಮಾಡಿ ದೇಶ ಕಾಲಾದಿಗಳನ್ನು ಉಚ್ಚರಿಸಿ—

"ಏವಂ ಗುಣ ವಿಶೇಷಣ ವಿಶಿಷ್ಟಾಯಾಂ ಅಸ್ಯಾಂ ಶುಭತಿಥೌ ಶಿಶೋಃ ಗರ್ಭಬೀಜ ದೋಷ ನಿವೃತ್ತಿದ್ವಾರಾಯುರಾರೋಗ್ಯ ಸಿದ್ಧ್ಯರ್ಥಂ ಅಪಶಕುನಾದಿ ದರ್ಶನ ಜನಿಷ್ಯಮಾಣ ದೋಷ ಪರಿಹಾರಾರ್ಥಂ ಉಪನಿಷ್ಕ್ರಮಣಾಖ್ಯಂ ಕರ ಕರಿಷ್ಯೇ"

ಹೀಗೆಂದು ಸಂಕಲ್ಪ ಮಾಡಿ ಗುರು ಪಾದೋದಕವನ್ನು ಸರ್ವರೂ ಸ್ವೀಕರಿಸಿ ಯಥಾ ಶಕ್ತಿ ಗುರು-ಮಹೇಶ್ವರರಿಗೆ ಭೋಜನ ಮಾಡಿಸಿ ದಕ್ಷಿಣೆ ತಾಂಬೂಲಾದಿಗಳಿಂದ ತೃಪ್ತಿಪಡಿಸಬೇಕು. ತರುವಾಯ ಶಿಶುವಿಗೆ ನೂತನ ವಸ್ತ್ರಾಭರಣಗಳಿಂದ ಅಲಂಕಾರ ಮಾಡಿ, ಸೋದರ ಮಾವನಿಂದ ಎತ್ತಿಸಿಕೊಂಡಾಗಲೀ ವಾಹನದ ಮೇಲೆ ಕೂಡ್ರಿಸಿಕೊಂಡಾಗಲೀ ಆಪ್ತೇಷ್ಟರೊಡನೆ ಪತ್ನೀ-ಪರಿವಾರ ಸಹಿತವಾಗಿ ನಿಷ್ಕ್ರಮಣ ಅಂದರೆ ಮನೆಯಿಂದ ಹೊರಗೆ ಹೋಗಿ ಸೂರ್ಯ ದರ್ಶನ ಮಾಡಿಸಬೇಕು. ತದನಂತರ ಶಿವಾಲಯ ಅಥವಾ ಶಿವಯೋಗಿಗಳ ಮಠಕ್ಕೆ ಇಲ್ಲವೇ ಶಿವ

ಭಕ್ತರ ಮನೆಗೆ ಕರೆದುಕೊಂಡು ಹೋಗಿ ಶಿಶುವಿನಿಂದ ಫಲ–ದಕ್ಷಿಣೆಗಳನ್ನು ಅರ್ಪಿಸಿ ಪ್ರದಕ್ಷಿಣಾ ನಮಸ್ಕಾರವನ್ನು ಮಾಡಿಸಿದ ತರುವಾಯ ಸೋದರಮಾವ ಅಥವಾ ಸಮೀಪ ಬಂಧುಗಳ ಮನೆಗೆ ಕರಕೊಂಡುಹೋಗಿ ನೀರಾಜನ ವಗೈರೆ ಮಾಡಿಸಿ ಕೊಂಡು ಸ್ವಗೃಹಕ್ಕೆ ಮರಳಿ ಬರಬೇಕು. ಅದೇ ದಿವಸ ರಾತ್ರಿ ಚಂದ್ರದರ್ಶನ ವನ್ನು ಸಹ ಮಾಡಿಸಬೇಕು.

|| ಇತಿ ಸೂರ್ಯ–ಚಂದ್ರಾವಲೋಕನ–ಉಪನಿಷ್ಕ್ರಮಣ ಸಮಾಪ್ತಿಯು ||

  

# ಅನ್ನಪ್ರಾಶನ ಸಂಸ್ಕಾರ-ವಿಧಾನವು.

ಶಿಶುವು ಜನನವಾದ ೬ ಅಥವಾ ೮ ನೇ ತಿಂಗಳಲ್ಲಿ ಹಲ್ಲು ಹುಟ್ಟಿದ ಬಳಿಕ ಶುಭ ತಿಥಿಯಲ್ಲಿ ಅನ್ನಪ್ರಾಶನ ಮಾಡಿಸಬೇಕು. ಪ್ರಾತಃಕಾಲಕ್ಕೆದ್ದು ಶಿವಪೂಜಾದಿ ನಿತ್ಯ ಕಾರ್ಯಗಳನ್ನು ಮುಗಿಸಿಕೊಂಡು ಪುಣ್ಯಾಹ ನಾಂದೀ ಸಮಾರಾಧನೆ ಮಾಡಿ ಗುರು ಸಮ್ಮುಖದಲ್ಲಿ ಕುಳಿತು ದೇಶಕಾಲಾದಿಗಳನ್ನು ಹೇಳಿ:—

"ಏವಂ ಗುಣ......... ಅಸ್ಯಾಂ ಶುಭ ತಿಥೌ ಧರ್ಮಪತ್ನ್ಯಾಂ ಜಾತಸ್ಯ ಮಮ ಕುಮಾರಸ್ಯಾಯುಷ್ಯಾಭಿವೃದ್ಧ್ಯರ್ಥಂ ಇಮ(ಇಲ್ಲಿ ಕೂಸಿನ ಹೆಸರು ಅಂದು ಹೇಗಂದರೆ "ಗಂಗಾಧರಾಖ್ಯ") ಶರ್ಮಾಣಂ ಕುಮಾರಂ ಅನ್ನಪ್ರಾಶನೇನ ಕರ್ಮಣಾಸಗ್ಂ ಸ್ಕರಿಷ್ಯೇ"

ಎಂದು ಸಂಕಲ್ಪವನ್ನು ಮಾಡಿ ಆ ಮೇಲೆ––

"ಅನ್ನಪ್ರಾಶನಾಂಗತ್ವೇನ ಆಚಮನಾಧಿಕಾರ ಸಿಧ್ಯರ್ಥಂ
ರಕ್ಷಾಬಂಧನಂ ಕರಿಷ್ಯೇ"

ಎಂದು ಹೇಳಿ ಶಿಶುವಿನ ಮುಂಗೈಯಲ್ಲಿ:—

"ಬ್ರಹತ್ಸಾ ಮಕ್ಷತ್ರಭ್ರದ್ವೃದ್ಧವೃಷ್ಣಿಯಂ | ತ್ರಿಷ್ಟುಭೋಜ
ಶುಭಿತ ಮುಗ್ರವೀರಂ ಇಂದ್ರಂ ಸೋಮೇನ ಪಂಚದಶೇನ
ಮಧ್ಯಮಿದಂ ವಾತೇನ ಸಗ ರೇಣರಕ್ಷ"

ಎಂಬ ಮಂತ್ರದಿಂದ ರಕ್ಷಾಬಂಧನ (ಕಂಕಣಧಾರಣ) ವನ್ನು ಮಾಡಿ ತದನಂತರ ಆಚಮನ ಪ್ರಾಣಯಾಮಗಳನ್ನು ಒಂದು ಬೆಳ್ಳಿ ಪಾತ್ರೆಯಲ್ಲಿ ಅನ್ನವನ್ನು ತೆಗೆದುಕೊಂಡು ಅದರಲ್ಲಿ ತುಪ್ಪ, ಹಾಲು, ಮೊಸರು, ಸ್ವಲ್ಪ ಜೇನ ತುಪ್ಪ ಮಿಶ್ರ ಮಾಡಿಕೊಂಡು, ಶಿಶುವನ್ನು ತಾಯಿಯ ತೊಡೆಯಲ್ಲಿ ಪೂರ್ವಾಭಿಮುಖವಾಗಿ ಕೂಡ್ರಿಸಿ:—

"ಭೂರ ಪಾಂತ್ವೌಷಧಿನಾಗ್ಂ ರಸಂ ಪ್ರಾಶಯಾಮಿ ಶಿವಾಸ್ತಾ ಆಪಓಷಧ

ಯಸ್ಸಂತು । ಅನಮೀವಾಸ್ತಾ ಆಪಓಷಧಯಸ್ಸಂತು।...........ಶರ್ಮಗ್ । ಭುವೋ ಪಾಂತ್ವೌಷಧಿನಾಗ್ಂ ರಸಂ ಪ್ರಾಶಯಾಮಿ । ಶಿವಾಸ್ತಾ ಆಪಓಷಧಯಸ್ಸಂತು ...........ಶರ್ಮನ್ | ಸುವರ ಪಾಂತ್ವೌಷಧೀನಾಗ್ಂ ರಸಂ ಪ್ರಾಶಯಾಮಿ । ಶಿವಾಸ್ತಾ ಆಪಓಷಧಯಸ್ಸಂತು । ..........ಶರ್ಮನ್ । ಓಂ ಭೂರ್ಭುವಸ್ಸುವರ ಪಾಂತ್ವೌಷಧೀನಾಗ್ಂ ರಸಂ ಪ್ರಾಶಯಾಮಿ । ಶಿವಾಸ್ತಾ ಆಪಓಷಧಯಾಸ್ಸಂತು ಅನಮೀವಾಸ್ತಾ ಆಪಓಷಧಯಸ್ಸಂತು...........ಶರ್ಮನ್ ॥''

(ಸೂಚನೆ:- ........... ಹೀಗಿ ಚಿಕ್ಕೆ ಕೊಟ್ಟಲ್ಲಿ ಕೂಸಿನ ಹೆಸರು ಅನ್ನಬೇಕು.)

ಎಂಬ ಮಂತ್ರದಿಂದ ಶಿಶುವಿನ ಬಾಯಿಯಲ್ಲಿ ಸ್ವಲ್ಪ ಅನ್ನವನ್ನು ಇಡಬೇಕು. ಇನ್ನುಳಿದ ಅನ್ನವನ್ನು ಮೌನವಾಗಿ ಉಣ್ಣಿಸಬೇಕು.

॥ ಇತಿ ಅನ್ನಪ್ರಾಶನ-ಸಂಸ್ಕಾರ-ವಿಧಾನಂ ॥

  

## ಚೌಲ-ಸಂಸ್ಕಾರ-ವಿಧಾನವು.

### ಜಾವಳ-ಕಾರ್ಯ-ಕ್ರಮ.

ಚೌಲ (ಜಾವಳ) ಕಾರ್ಯಕ್ಕೆ ಜ್ಯೋತಿಷ್ಯ ಶಾಸ್ತ್ರದಲ್ಲಿ ಹೇಳಿದ ಶಿಶುವಿಗೆ ಅನುಕೂಲವಿದ್ದ ಶುಭ ಮುಹೂರ್ತದಲ್ಲಿ ಗುರು-ಮಹೇಶ್ವರರನ್ನು ಕರೆತಂದು ಸತಿ-ಪತಿಗಳು ಮಂಗಲಸ್ನಾನವನ್ನು ಮಾಡಿ ಗುರು ಸಮ್ಮುಖದಲ್ಲಿ ಕುಳಿತು ಆಚಮನ ಪ್ರಾಣಾಯಾಮಾದಿಗಳನ್ನು ಮಾಡಿ, ದೇಶಕಾಲಾದಿಗಳನ್ನು ಉಚ್ಚರಿಸಿ-

''ಏವಂ ಗುಣ...........ಶುಭ ತಿಥೌ । ಮಮಕುಮಾರಸ್ಯಾಯುಷ್ಯಾಬಿವೃದ್ಧ್ಯರ್ಥಂ ಇಮಂ...........ಶರ್ಮಾಣಂ ಚೌಲೇನ ಕರ್ಮಣಾಸಗ್ಂಸ್ಕರಿಷ್ಯೇ''

ಹೀಗೆಂದು ಸಂಕಲ್ಪವನ್ನು ಮಾಡಿ, ಪುಣ್ಯಾಹ-ನಾಂದೀ ಕಾರ್ಯಗಳನ್ನಾಚರಿಸಿ:—

''ಚೌಲ ಕರ್ಮಾಂಗತ್ವೇನ ರಕ್ಷಾರ್ಥಂ ರಕ್ಷಾಬಂಧನಂ ಕರಿಷ್ಯೇ''

ಎಂದು ಶಿಶುವಿಗೆ (ಹಿಂದೆ ಅನ್ನಪ್ರಾಶನ ವಿಧಿಯಲ್ಲಿ ಹೇಳಿದ ''ಬೃಹತ್ಸಾಮ...........ರಕ್ಷ'' ಎಂಬ ಮಂತ್ರದಿಂದ) ಕಂಕಣವನ್ನು ಧರಿಸಿ, ಶಿಶುವನ್ನು ಪೂರ್ವ ದಿಕ್ಕಿಗೆ ಮುಖ ಮಾಡಿ ಕೂಡ್ರಿಸಿ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಗೋಮಯದ ಉಂಡಿಗಳನ್ನಿಟ್ಟು—

''ಉಷ್ಣೇನ ವಾಯು ಉದಕೇನಹ್ಯದಿತಿಃ ಕೇಶನ್ವಪತು''

ಎಂಬ ಮಂತ್ರದಿಂದ ಶಿಶುವಿನ ತಲೆಗೆ ನೀರನ್ನು ನವರಬೇಕು. ತದ ನಂತರ ಮೂರು ದರ್ಭೆಗಳನ್ನು ಶಿಶುವಿನ ಮುಂದಿಟ್ಟು;—

"ಯೇನಾವಪತ್ಸವಿತಾಕ್ಷುರೇಣ ಸೋಮಸ್ಯ ರಾಜ್ಞೋ ವರುಣಸ್ಯ ಲಿದ್ವಾನ್ । ತೇನ ಬ್ರಹ್ಮಾಣೋವಪತೆ ದಮಸ್ಯಾ ಯುಷಾನ್ ಜರದಷ್ಟಿರ್ಯಥಾಸತ್"

ಎಂಬ ಮಂತ್ರದಿಂದ ಮಂತ್ರದಿಂದ ಮುಂದಿನ ತಲೆಯ ಸ್ವಲ್ಪ ಕೂದಲನ್ನು ಕತ್ತರಿಸಿ ನೀರನ್ನು ಮುಟ್ಟಿಸಿ ಕತ್ತರಿಸಿದ ಕೂದಲನ್ನು ಪೂರ್ವದಿಕ್ಕಿಗಿರುವ ಗೋಮಯ ಉಂಡೆಯಲ್ಲಿಡಬೇಕು. ಆ ಬಳಿಕ ದಕ್ಷಿಣ ದಿಕ್ಕಿನಲ್ಲಿ ಮೂರು ದರ್ಭೆಗಳನ್ನಿಟ್ಟು—

"ಯೇನಪೂತಾ ಬೃಹಸ್ಪತೆರಗ್ನೆರಿಂದ್ರಸ್ಯ ಚಾಯುಷೋವಪತ್ ।
ತೇನಾಸ್ಯಾಯುಷೆ ವಪಸೌ ಶ್ಲೋಕ್ಯಾಯ ಸ್ವಸ್ತಯೇ ॥

ಎಂಬ ಮಂತ್ರದಿಂದ ತಲೆಯ ದಕ್ಷಿಣ ಭಾಗದ (ಬಲಗಡೆಯ) ಕೂದಲನ್ನು ತೆಗೆದುಕೊಂಡು ನೀರು ಮುಟ್ಟಿಸಿ ದಕ್ಷಿಣ ದಿಕ್ಕಿನ ಗೋಮಯದ ಉಂಡಿಯಲ್ಲಿಡಬೇಕು. ತದ ನಂತರ ಮೂರು ದರ್ಭೆಗಳನ್ನು ಪಶ್ಚಿಮ ದಿಗ್ಭಾಗದ ಕಡೆಗಿಟ್ಟು—

"ಯೇನಭೂಯಶ್ಚರಾತ್ಯಯಂ ಜ್ಯೋಕ್ಚಪಶ್ಯಾತಿ ಸೂರ್ಯಂ ।
ತೇನಾಸ್ಯಾಯುಷೆವ ಪಸೌ ಶ್ಲೋಕ್ಯಾಯ ಸ್ವಸ್ತಯೇ ॥

ಎಂಬ ಮಂತ್ರದಿಂದ ಪಶ್ಚಿಮ ಭಾಗ ಅಂದರೆ ತಲೆಯ ಹಿಂದಿನ ಭಾಗದಲ್ಲಿಯ ಕೂದಲನ್ನು ಕತ್ತರಿಸಿ ಅವುಗಳನ್ನು ನೀರಿನಿಂದ ಮುಟ್ಟಿಸಿ ಪಶ್ಚಿಮ ದಿಗ್ಭಾಗದಲ್ಲಿಯ ಗೋಮಯ ಉಂಡಿಯಲ್ಲಿಡಬೇಕು. ಆ ಬಳಿಕ ಮೂರು ದರ್ಭೆಗಳನ್ನು ಉತ್ತರ ದಿಗ್ಭಾಗದ ಕಡೆಗಿಟ್ಟು—

"ಯೇನಪೂಷಾ ಬ್ರಹಸ್ಪತೆ ರಗ್ನೆರಿಂದ್ರಸ್ಯ ಚಾಯುಷೇವ ಪತ್ ।
ತೇನತೇವ ಪಾಲು........ಶರ್ಮನ್ನಾ ಯುಷಾವರ್ಚಸಾಯಥಾ ।
ಜ್ಯೋಕ್ಸ ಮನ ಅಸಾಃ ॥"

ಎಂಬ ಮಂತ್ರದಿಂದ ಉತ್ತರ ಕಡೆಯ ಅಂದರೆ ತಲೆಯ ಎಡಭಾಗದ ಕೂದಲನ್ನು ಕತ್ತರಿಸಿ ನೀರಿನಿಂದ ಮುಟ್ಟಿಸಿ ಉತ್ತರ ದಿಗ್ಭಾಗದಲ್ಲಿರುವ ಗೋಮಯ ಉಂಡೆಯಲ್ಲಿಡುವದು. ತದ ನಂತರ ಇನ್ನುಳಿದ ಕೂದಲನ್ನು ಸರಿಯಾಗಿ ಕತ್ತರಿಸಿ ಅವುಗಳನ್ನು ಕಂಡ-ಕಂಡಲ್ಲಿ ಚಲ್ಲದೆ ಅತ್ತಿಯ ಮರದ ಬಡದಲ್ಲಾಗಲೀ ಅಥವಾ ದರ್ಭೆ ಬೆಳೆದಿರುವ ಜಾಗೆಯಲ್ಲಾಗಲೀ ಇಡಬೇಕು. ಇಲ್ಲವೇ ಪವಿತ್ರ ಹೊಳಿಯೊಳಗೆ ಕೂಡಿಸಿದರೂ ವಿಹಿತವು. ಆ ಮೇಲೆ—

"ಓಂ ಹಿರಣ್ಯಶೃಂಗಂ ವರುಣಂ ಪ್ರಪದ್ಯೇ ತೀರ್ಥಂಮೇ ದೇಹಿಯಾಚತಃ ಯನ್ಮಯಾಭೂಕ್ತ ಮನಾಥೂನಾಂ ಪಾಪೇಭ್ಯಶ್ಚ ಪ್ರತಿ ಗ್ರಹಃ । ಯನ್ಮೆ ಮನಸಾ ವಾಚಾ ಶರ್ಮಣಾ ಪಾದುಷ್ಕೃತಂಕೃತಂ । ತನ್ನ ಇಂನ್ರೋ ವರುಣೊ ಬೃಹಸ್ಪತಿ ಸ್ಸವಿತಾಚ ಪುನಂತು ಪುನಃ ಪುನಃ । ನಮೋಗ್ನ ಯೆಽಪ್ಸುಮತೇನಮ ಇಂದ್ರಾಯ।

ನಲೋ ವರುಣಾಯ ನಮೊ ವಾರುಣ್ಯೈನಮೋದ್ಭ್ಯಃ । ಯದಪಾಂ ಕ್ರೂರಂಯದ ಮೇಧ್ಯಂ ಯದ ಶಾಂತಂ ತದಪಗಚ್ಛತಾತ್ । ಅತ್ಯಾಶನಾದತೀ ಪಾನಾದ್ಯಚ್ಚ ಉಗ್ರಾತ್ಪ್ರತಿಗ್ರಹಾತ್ । ತನ್ನೋ ವರುಣೋ ರಾಜಾಪಾಣಿ ನಾಹ್ಯವಮರ್ಶತು । ಸೋಹಮಪಾಪೋವಿರಜೊ ನಿರ್ಮುಕ್ತೊ ಮುಕ್ತ ಕಿಲ್ಬಿಶಃ । ನಾಕಸ್ಯ ಪೃಷ್ಠಮಾರುಹ್ಯ ಗಚ್ಛೇದ್ಬ್ರಹ್ಮಸಲೋಕತಾಂ। ಯಶ್ಚಾಪ್ಸುರುಣಸ್ಸ ಪುನಾತ್ಯಘಮರ್ಷಣಃ”

ಎಂಬ ಮಂತ್ರದಿಂದ ಬಾಲಕನಿಗೆ ಚನ್ನಾಗಿ ಮಂಗಲ ಸ್ನಾನವನ್ನು ಮಾಡಿಸಿ ಪಾದೋದಕ ಪ್ರಸಾದವಂ ಸ್ವೀಕರಿಸಿ ನೂತನ ವಸ್ತ್ರಾಭರಣಗಳನ್ನು ಧರಿಸಬೇಕು. ತದನಂತರ ಮುತ್ತೈದೆಯವರು ಆರತಿ ವಗೈರೆ ಮಾಡಬೇಕು. ಆ ಮೇಲೆ ಗುರು ಜಂಗಮರ ಸಮ್ಮುಖದಲ್ಲಿ ಕಂಕಣವನ್ನು ಬಿಚ್ಚಿ ಅವರಿಗೆ ಯಥಾಶಕ್ತಿ ಭೋಜನ ಮಾಡಿ ತಾಂಬೂಲ ದಕ್ಷಿಣೆಗಳಿಂದ ತೃಪ್ತಿಪಡಿಸಬೇಕು.

॥ ಇತಿ ಚೌಲ ಸಂಸ್ಕಾರ ಸಮಾಪ್ತಿ ॥

# ವಿದ್ಯಾರಂಭ ವಿಧಾನವು

ಬಾಲಕನಾಗಲೀ ಅಥವಾ ಬಾಲಕಿಯಳಾಗಲೀ ಐದನೇ ವರ್ಷ ನಡೆಯುತ್ತಿರುವಾಗ ಜ್ಯೋತಿಷ್ಯ ಶಾಸ್ತ್ರದಲ್ಲಿ ಹೇಳಿದ ಶುಭ ಮುಹೂರ್ತದೊಳು ವಿಘ್ನೇಶ್ವರ, ಕುಲದೇವರ, ಪಾರ್ವತಿ-ಪರಮೇಶ್ವರರ, ಸರಸ್ವತಿಯ ಹಾಗೂ ಗುರು ಜಂಗಮರ ಪೂಜೆ ಮಾಡಿಸಿ, ತಾಯಿ–ಅಕ್ಕ ಮೊದಲಾದ ಹಿರಿಯರಿಗೆ ನಮಸ್ಕಾರ ಮಾಡಿ ವಿದ್ಯಾ ಗುರುಗಳಿಗೆ ನಮಸ್ಕರಿಸಬೇಕು. ಆ ನಂತರ ಅವರು ‘‘ಓಂ’’ಎಂಬ ಅಕ್ಷರವನ್ನು ಬರೆದುಕೊಟ್ಟು, ಅದರಂತೆ ಬಾಲಕನಿಂದ ಬರೆಯಿಸಿ ಓದಿಸುವರು. ಆ ಬಳಿಕ ಅಲ್ಲಿ ನೆರೆದ ಮಹೇಶ್ವರರಿಗೂ ವಿದ್ಯಾ ಗುರುಗಳಿಗೂ ತಾಂಬೂಲ ದಕ್ಷಿಣೆಗಳನ್ನು ಕೊಟ್ಟು, ಸಂತೋಷಪಡಿಸಬೇಕು.

॥ ಇತಿ ವಿದ್ಯಾರಂಭ ವಿಧಾನ ಸಮಾಪ್ತವು ॥

  

# ಅ ಷ್ಟ ಮ — ರ ತ್ನ

## ವೀರಶೈವ-ಉಪನಯನ (ದೀಕ್ಷಾ) ಕಾರ್ಯ ವಿಚಾರ.

ವೀರಶೈವರು ದೀಕ್ಷೆಯನ್ನು ಹೊಂದಬೇಕಾದುದು ಎಷ್ಟು ಅತ್ಯಗತ್ಯವಿರುವದೆಂಬದನ್ನು ಮೊದಲಿನ ಪ್ರಕರಣದಲ್ಲಿ ಹೇಳಲಾಗಿದೆ. ಆ ಪ್ರಕಾರವಾಗಿ ಬಾಲಕರಿಗೆ ಜನನಮಾರಭ್ಯ ೮ ನೇ ವರ್ಷದಲ್ಲಿ ದೀಕ್ಷಾ ಸಂಸ್ಕಾರವನ್ನೂ, ಮಾಹೇಶ್ವರ ವಟುಗಳಿಗೂ ಅಯ್ಯಾಚಾರ (ಉಪನಯನ) ವನ್ನು ಮಾಡಬೇಕು. ಇದು ಉತ್ತಮ ಪಕ್ಷವು. ಇನ್ನು ೯ ರಿಂದ ೧೬ ವರ್ಷದೊಳಗೆ ಮಾಡುವದು ಸಾಮಾನ್ಯ (ಗೌಣ) ಪಕ್ಷವು. ೧೬ ವರ್ಷಗಳ ನಂತರ ಮಾಡುವದು ಕನಿಷ್ಠ ಪಕ್ಷವು. ಇದಕ್ಕೆ ಶಿವಾಗಮದಲ್ಲಿ- ಹೀಗೆ ಹೇಳಲಾಗಿದೆಃ-- ''ಗರ್ಭಾಷ್ಟಮೇ ಕೃತಾ ದೀಕ್ಷಾ ಮುಖ್ಯಸಾ ಷೋಡಶಾವಧಿ। ಗೌಣಾ ತದೂರ್ಧ್ವ ಮಧಮಾ ವೀರಶೈವಾನ್ವಯಾಯಿನಾಂ ॥ ಎಂದು ಆಗಮ ಪ್ರಮಾಣವದೆ.

## ದೀಕ್ಷಾ ಹೊಂದುವ ಪದ್ಧತಿ

ಗುರು ಶಿಷ್ಯರ ಗೋತ್ರ-ಸೂತ್ರಗಳು ಒಂದೇ ಆಗಿರಬೇಕಲ್ಲದೆ, ಪಟ್ಟಾಧಿಕಾರಿಗಳಿಂದಲೇ ದೀಕ್ಷೆಯನ್ನು ( ಮಂತ್ರೋಪದೇಶವನ್ನು ) ಹೊಂದಬೇಕು. ಒಂದು ವೇಳೆ ವಂಶದ ಗುರುಗಳೇ ಪಟ್ಟಾಧಿಕಾರಿಗಳಾಗಿದ್ದರೂ ಅಡ್ಡಿಯಿಲ್ಲ. ಅವರಿಂದ ಮಾಡಿಸಬೇಕು. ಅಕಸ್ಮಾತ್ ಹೆಚ್ಚಿಗೆ ಜನರ ದೀಕ್ಷೆಯನ್ನು ಮಾಡುವ ಸಂದರ್ಭ ಬಂದರೆ ಆಯಾಯ ಸೂತ್ರದ ಅಷ್ಟೇ ಪಟ್ಟಾಧಿಕಾರಿಗಳಿಂದ ಮಂತ್ರೋಪದೇಶ ಮಾಡಿಸಬೇಕು. ಹೀಗೆ ಸಾಧ್ಯವಾಗದ ಪಕ್ಷದಲ್ಲಿ ಒಬ್ಬ ಪಟ್ಟಾಧಿಕಾರಿಯಿಂದ ತಮ್ಮ ತಮ್ಮ ಗೋತ್ರದ ಮಂತ್ರವನ್ನು ಉಪದೇಶ ಮಾಡಬೇಕು. ವೀರಶೈವರ ಗೋತ್ರ ಸೂತ್ರಾದಿಗಳನ್ನು ಹಿಂದೆ ತಿಳಿಸಲಾಗಿದೆ. (ಅಲ್ಲಿ ನೋಡಿಕೊಳ್ಳಿರಿ.) ಮತ್ತು ಇಲ್ಲಿ ಕೇವಲ ಐದು ಸಿಂಹಾಸನ (ಸೂತ್ರದ) ಮಂತ್ರವನ್ನು ಈ ಅಧ್ಯಾಯದ ಕೊನೆಗೆ ಕೊಡಲಾಗಿದೆ.

## ದೀಕ್ಷೆಯ ಪೂರ್ವದಿವಸದ ಕಾರ್ಯ

ದೀಕ್ಷೆಯಾಗತಕ್ಕ ವಟುವು ಪೂರ್ವ ದಿವಸದಲ್ಲಿ ಉಪವಾಸವಿದ್ದು ಕೇವಲ ಹಾಲು ತೆಗೆದುಕೊಳ್ಳಬೇಕು. ಹಾಗೂ ದೀಕ್ಷೆಯಕ್ಕಿಂತ ಒಂದು ದಿನ ಮೊದಲು ದೀಕ್ಷೆ ಹೊಂದುವ ವಟುವಿಗೆ ಉಟ್ಟುಕೊಳ್ಳುವದರ ಸಲುವಾಗಿ, ಉಪಯೋಗ ಮಾಡದೇ ಇರತಕ್ಕಂಥ ಕಾವಿಯ ಹೊಸ ಪಂಜೆಯೊಂದನ್ನು, ಒಂದು ಕೌಪೀನ

ವನ್ನೂ ಅದನ್ನು ಕಟ್ಟತಕ್ಕ ದಾರವನ್ನೂ, ಭಿಕ್ಷಾ ಪಾತ್ರೆಯನ್ನೂ ತರಿಸಿಟ್ಟು ಕೊಂಡಿರಬೇಕು. ಮತ್ತು ಡೊಂಕಾಗಿರದ, ಗಾಯವಿಲ್ಲದ, ನೀಟಾದ ಮುತ್ತುಗದ ದಂಡವನ್ನು ತರಿಸಿರಬೇಕು. ಹಾಗೂ ಇದೇ ದಿವಸವೇ ಮಠದಲ್ಲಾಗಲೀ, ಅಥವಾ ಮನೆಯಲ್ಲಾಗಲೀ ಯೋಗ್ಯ ಜಾಗೆಯಲ್ಲಿ ದೀಕ್ಷಾಮಂಟಪವನ್ನು ಹಾಕಿ ತಯಾರ ಮಾಡಬೇಕು. ಆ ಮಂಟಪಕ್ಕೆ ತಳಿರು-ತೋರಣಗಳಿಂದಲೂ, ಬಾಳೆ ಕಂಬ-ಕಬ್ಬುಗಳಿಂದಲೂ, ಕಟ್ಟಿ ಅಲಂಕಾರ ಮಾಡಿ, ಸಾರಣೆ ಮಾಡಿ ಷಟ್ಸಮಾರ್ಜನೆಯಿಂದ ಶುದ್ಧಗೊಳಿಸಿ ತದನಂತರ ದೀಕ್ಷೆಯಾಗತಕ್ಕ ವಟುವು ಮಂಗಲ ಸ್ನಾನವನ್ನು ಮಾಡಿ ಶಿವಪೂಜಾದಿ ನಿತ್ಯ ಕರ್ಮಗಳನ್ನು ಮುಗಿಸಿಕೊಂಡು ಅಲಂಕೃತವಾದ ಮಂಟಪದಲ್ಲಿ ಪೂರ್ವಮುಖ ಮಾಡಿ ಕುಳಿತುಕೊಂಡು ದೇಶ ಕಾಲಾದಿಗಳನ್ನುಚ್ಚರಿಸಿ—

"ಏವಂ ಗುಣ ವಿಶೇಷಣ ವಿಶಿಷ್ಟಾಯಾಂ ಅಸ್ಯಾಂ ಶುಭಪುಣ್ಯತಿಥೌ ದೀಕ್ಷಯಿತೃತ್ವಾದಿ ಸಿದ್ಧಯೇ ಕಚ್ಛಾರ್ಣ್ಯಾ ಚರಿಷ್ಯೇ" ಎಂದು ಸಂಕಲ್ಪಮಾಡಿ, ಒಂದು ಪಾತ್ರೆಯಲ್ಲಿ ಶಕ್ತ್ಯಾನುಸಾರ ಫಲದ್ರವ್ಯಗಳನ್ನಿಟ್ಟು ಮಹೇಶ್ವರ ಸಮೀಪಕ್ಕೆಹೋಗಿ-

"ಅಶೇಷೇಹೇ ಪರಿಷತ್ ಮದೀಯಾಂ ವಿಜ್ಞಾಪನಾ ಮವಧಾರ್ಯ, ಮಯಾಸಮರ್ಪಿತಾಮಿಮಾಂ ಸೌವರ್ಣೀಂ ಅಲ್ಪೀಯಸೀಮಪಿ ಯಥೋಕ್ತ ದಕ್ಷಿಣಾಮಿವ ಸ್ವೀಕೃತ್ಯ ಮಮಾನುಗ್ರಹಾಣ ॥

ಎಂದು ಪ್ರಾರ್ಥನೆ ಮಾಡಿ ಆ ಪಾತ್ರೆಯನ್ನು ಅವರ ಮುಂದಿಡಬೇಕು. ಅದಕ್ಕೆ ಮಾಹೇಶ್ವರರು "ಅನುಗೃಹ್ಣಾಮಃ" ಎಂದು ಅನ್ನಬೇಕು.

ಆ ಬಳಿಕ ದೀಕ್ಷೆಯಾಗತಕ್ಕ ವಟುವು ಭಸ್ಮ, ದಕ್ಷಿಣೆ, ಫಲ, ಪುಷ್ಪಾಕ್ಷತೆಗಳನ್ನು ಒಂದು ಪಾತ್ರೆಯಲ್ಲಿ ಗುರು ಕಾಣಿಕೆ ಸಹಿತ ಇಟ್ಟುಕೊಂಡು ಗುರುಸನ್ನಿಧಿಯಲ್ಲಿಟ್ಟು ಸಾಷ್ಟಾಂಗ ನಮಸ್ಕಾರವನ್ನು ಮಾಡಿ--

"ಮಮ ಬಾಲ್ಯೆ ವಯಸಿ ಅಜ್ಞಾನತಃ ಪಿತ್ರಾದ್ಯುಪೇಕ್ಷಯಾಚ ಸಂಭವಿತಾನಾಂ ಪಾಪಾನಾಂ ಅಪನೋದನಾರ್ಥಂ ಜನನೀಸ್ತನ್ಯಪಾನ ಸಹಭೋಜನೋಚ್ಛಿಷ್ಟ ಭೋಜನ ಸಂಧಿತ ಗೃಹಾನ್ನ ಭೋಜನ ಸಜಾತೀಯ ವಿಜಾತೀಯ ಸಹಚರ ಕ್ರೀಡಾ ಸಲ್ಲಾಪ ಅನಿಯತ ಮೂತ್ರೋತ್ಸರ್ಜನ ತತ್ಕಾಲ ಶೌಚಾಭಾವ ಮೌನಾಭಾವ ಪ್ರಭತೀನಾಂ ಸಂಭವಿತಾನಾಂ ಪಾಪಾನಾಮಪಾನೋದನದ್ವಾರಾ ಮಾಂಸ ಪಿಂಡ ನಿವೃತ್ತ್ಯಾ ಮಂತ್ರ ಪಿಂಡೀಕರ್ತುಂ ಶಿವದೀಕ್ಷಯಾ ಮಾಮನುಗೃಹ್ಣಂತು ಭವಂತಃ"

ಹೀಗೆಂದು ಪ್ರಾರ್ಥಿಸಬೇಕು. ಅದಕ್ಕೆ ಗುರುಗಳು "ಅನುಗೃಹ್ಣಾಮಃ" ಎಂದು ಉತ್ತರವನ್ನು ಕೊಡಬೇಕು.

ತರುವಾಯ ವಟುವಿನ ತಂದೆಯೂ ಪೂರ್ವದಿನದಲ್ಲಿ ಕ್ಷೀರಾಹಾರಿಯಾಗಿದ್ದು ಮಂಗಲ ಸ್ನಾನವನ್ನು ಮಾಡಿ, ಶಿವಪೂಜೆಯನ್ನು ಪೂರೈಸಿಕೊಂಡು, ಭದ್ರಾಸನದಲ್ಲಿ ಕುಳಿತುಕೊಂಡು ತನ್ನ ಬಲಕ್ಕೆ ವಟುವನ್ನು ಉತ್ತರಾಭಿಮುಖವಾಗಿ ಕೂಡ್ರಿಸಿಕೊಂಡು ಆಚಮನಪೂರ್ವಕ ಪ್ರಾಣಾಯಾಮವನ್ನು ಮಾಡಿ--

"ಏವಂ ಗುಣವಿಶೇಷಣ ವಿಶಿಷ್ಟಾಯಾಂ ಅಸ್ಯಾಂ ಶುಭ ಪುಣ್ಯ ತಿಥೌ ( ) ಗೋತ್ರೋತ್ಪನ್ನೋऽಹಂ ಅಸ್ಯ ಕುಮಾರಸ್ಯ ವೀರಶೈವತ್ವ ಸಿದ್ಧಾ ವೇದಾಗಮಾಧ್ಯಯನಾಧಿ ದ್ವಾರಾ ಮೋಕ್ಷ ಸಿದ್ಧ್ಯರ್ಥಂ ಶಿವದೀಕ್ಷಾಖ್ಯಂ ಕರ್ಮ ಕರಿಷ್ಯೇ || ತದಂಗ ಗಣೇಶ ಪೂಜನ ಪೂರ್ವಕಂ ಸ್ವಸ್ತಿವಾಚನ ಅಂಕುರಾರೋಪಣ ನಾಂದೀ ಮಂಟಪ ದೇವತಾ ಪ್ರತಿಷ್ಠಾ ಕುಲದೇವತಾ ಸ್ಥಾಪನಾನಿಚ

ಹೀಗೆಂದು ಸಂಕಲ್ಪ ಮಾಡಿ ಹಸ್ತದಲ್ಲಿ ಹಿಡಿದುಕೊಂಡ ಜಲಾಕ್ಷತೆಗಳನ್ನು ಒಂದು ಪಾತ್ರೆಯಲ್ಲಿ ಬಿಡಬೇಕು.

**ಇನ್ನು ಈ ಹಿಂದೆ ಹೇಳಿದಂತೆ ಸರ್ವಪೂಜಾ ಪ್ರಕರಣದಲ್ಲುಕ್ತವಾದಂತೆ ಗಣಪತಿಪೂಜಾ, ನಾಂದೀ ಸಮಾರಾಧನೆ, ಸ್ವಸ್ತಿಪುಣ್ಯಾಹ ವಾಚನ, ಅಂಕುರಾರೋಪಣ, ಮಂಟಪದೇವತಾ ಪ್ರತಿಷ್ಠೆ, ಹಾಗೂ ಪಂಚ ಕಲಶ ಸ್ಥಾಪನಾ,ಇತ್ಯಾದಿಗಳನ್ನು ಸ್ಥಾಪಿಸಿ, ಪೂಜೆಮಾಡಬೇಕು ವೀರಶೈವರಿಗೆ ಹೋಮಾದಿ ಕರ್ಮಗಳಿಲ್ಲದ್ದರಿಂದ ಅವುಗಳನ್ನು (ಹೋಮಾಚರಣೆಯನ್ನು)ವೀರಶೈವರು ಮಾಡಕೂಡದು.**

## ಶಿವಲಿಂಗ ಸಂಸ್ಕಾರ

ಪುರೋಹಿತನು ವಟುವಿನನ್ನು ಹತ್ತರ ಕೂಡ್ರಿಸಿಕೊಂಡು ಸೂತ್ರ ಬಿಡದಂತೆ ವಟುವಿನ ಲಿಂಗಕ್ಕೆ ಈ ಹಿಂದೆ ಲಿಂಗಧಾರಣ ಪ್ರಕರಣದಲ್ಲಿ ಹೇಳಿದಂತೆ ಧಾನ್ಯಾಧಿವಾಸ ಪಂಚಾಮೃತಅಭಿಷೇಕದ ವರೆಗೆ ಅಭಿಷೇಕ ಮಾಡಿ ಪೂಜಿಸಬೇಕು- ತದನಂತರ ಬೇರೆ ಕಡೆ ಒಂದು ಸ್ಥಾನದಲ್ಲಿ ಸಾರಿಸಿ ಮಂಡಲವನ್ನು ಬರೆದು ಅದರಲ್ಲಿ ಅಕ್ಕಿಯ ಗುಂಪಿಯನ್ನಿಟ್ಟು ಅದರ ಮೇಲೆ ಒಂದು ಪಾತ್ರೆಯನ್ನಿಟ್ಟು ಅದರಲ್ಲಿ ಲಿಂಗಸ್ಥಲವನ್ನು ಇಟ್ಟು ಶಿವಕಲೆಯನ್ನು ಆವಾಹಿಸುವದಕ್ಕಾಗಿ ಆಚಮನ ಪ್ರಾಣಾಯಾಮಗಳನ್ನು ಮಾಡಿ ಪವಿತ್ರಪಾಣಿಯಾಗಿ ದೇಶಕಾಲಾದಿಗಳನ್ನುಚ್ಚರಿಸಿ:-

ಏವಂ ಗುಣವಿಶೇಷಣ ವಿಶಿಷ್ಟಾಯಾಂ ಅಸ್ಯಂ ಶುಭ ಪುಣ್ಯ ತಿಥೌ ಷಡಧ್ವ ಶೋಧನದ್ವಾರಾ ಶಿವಕಳಾವಾಹಾನಾರ್ಥಂ ಷಡಧ್ವ ಶುದ್ಧಿಂ ಕರೋಮಿ"

ಹೀಗೆಂದು ಸಂಕಲ್ಪವನ್ನು ಮಾಡಿ ಬಲಗೈಯಲ್ಲಿ ಹಿಡಿದುಕೊಂಡು ದರ್ಭೆಯಿಂದ ಆ ಲಿಂಗುವಿನ ಪೀಠದ ಅಧೋಭಾಗ (ಕೆಳಭಾಗ) ದ ಸುತ್ತು ಪಟ್ಟಿಗೆ

ಸೋಂಕಿಸಿ ಹಿಡಿದುಕೊಂಡು ಭುವನಾಧ್ವನ್ಯಾಸವನ್ನು ಮಾಡಬೇಕು. ತದನಂತರ ಆ ಲಿಂಗುವಿನ ಪೀಠದ ಕೆಳಪಟ್ಟಿಕೆಯ ಮೇಲೆ ಕೆಳಗೆ ಮುಖವಾದ ಕಮಲಾಕೃತಿಯಂತಿರುವ ಭಾಗಕ್ಕೆ ದರ್ಭೆಯನ್ನು ಸೋಂಕಿಸಿ ಪದಧ್ವನ್ಯಾಸವನ್ನು ಮಾಡಬೇಕು. ಆ ಬಳಿಕ ಆ ಲಿಂಗುವಿನ ಪೀಠದ ಮಧ್ಯೆದಲ್ಲಿ ಕಂಠದಂತಿರುವ ಭಾಗದಲ್ಲಿ ದರ್ಭೆಯನ್ನು ಸೋಂಕಿಸಿ ವರ್ಣಾಧ್ವನ್ಯಾಸವನ್ನು ಮಾಡಬೇಕು. ತದನಂತರ ಆ ಲಿಂಗುವಿನ ಮಧ್ಯ ಕಂಠದ ಮೇಲ್ಗಡೆ ಭಾಗದ ಕೆಳಮುಖಕ್ಕೆ ಮಾಲಾದಂತಿರುವ ಭಾಗದಲ್ಲಿ ದರ್ಭೆಯನ್ನು ಸೋಂಕಿಸಿ ಕಲಾಧ್ವನ್ಯಾಸವನ್ನು ಮಾಡಬೇಕು. ಆ ಬಳಿಕ ಆ ಲಿಂಗುವಿನ ಕಮಲಾಕೃತಿಯ ಮೇಲಿರುವ ಸುತ್ತಿಗೆಯಲ್ಲಿ ದರ್ಭೆಯನ್ನಿಟ್ಟು ತತ್ವಾಧ್ವಾನ್ಯಾಸವನ್ನು ಮಾಡಬೇಕು. ತರುವಾಯ ಲಿಂಗದ ನಡುನೆತ್ತಿಯ ಮೇಲೆ ದರ್ಭೆಯನ್ನಿಟ್ಟು ಮಂತ್ರಾಧ್ವನ್ಯಾಸವನ್ನು ಮಾಡಬೇಕು.



## ಭುವನಾಧ್ವನ್ಯಾಸ.

ಓಂ ಹ್ರಾಂ ಅನಾಶ್ರಿತಭುವನಾಯನಮಃ। ಓಂ ಹ್ರಾಂ ಅನಾಥಭುವನಾಯನಮಃ। ಓಂ ಹ್ರಾಂ ವ್ಯೋಮರೂಪಿಭುವನಾಯನಮಃ। ಓಂ ಹ್ರಾಂ ಊರ್ಧ್ವಗಾಮಿಭುವನಾಯನಮಃ। ಓಂ ಹ್ರಾಂ ಮೋಚಿಕಾಭುವನಾಯನಮಃ। ಓಂ ಹ್ರಾಂ ರೋಚಿಕಾಭುವನಾಯನಮಃ। ಓಂ ಹ್ರಾಂ ದೀಪಿಕಾಭುವನಾಯನಮಃ। ಓಂ ಹ್ರಾಂ ಇಂಧಿಕಾಭುವನಾಯನಮಃ। ಓಂ ಹ್ರಾಂ ಶಾಂತ್ಯತೀತಭುವನಾಯನಮಃ। ಓಂ ಹ್ರಾಂ ಶಾಂತಭುವನಾಯನಮಃ। ಓಂ ಹ್ರಾಂ ವಿದ್ಯಾಭುವನಾಯನಮಃ। ಓಂ ಹ್ರಾಂ ಪ್ರತಿಷ್ಠಾಭುವನಾಯನಮಃ। ಓಂ ಹ್ರಾಂ ನಿವೃತ್ತಿಭುವನಾಯನಮಃ। ಓಂ ಹ್ರಾಂ ಶಿಖಂಡಿಭುವನಾಯನಮಃ। ಓಂ ಹ್ರಾಂ ಶ್ರೀಕಂಠಭುವನಾಯನಮಃ। ಓಂ ಹ್ರಾಂ ತ್ರಿಮೂರ್ತಿಭುವನಾಯನಮಃ। ಓಂ ಹ್ರಾಂ ಏಕರುದ್ರಾಯನಮಃ। ಓಂ ಹ್ರಾಂ ಏಕನೇತ್ರಭುವನಾಯನಮಃ। ಓಂ ಹ್ರಾಂ ಶಿವೋತ್ತಮಭುವನಾಯನಮಃ। ಓಂ ಹ್ರಾಂ ಸೂಕ್ಷ್ಮಭುವನಾಯನಮಃ। ಓಂ ಹ್ರಾಂ ಅನಂತಭುವನಾಯನಮಃ। ಓಂ ಹ್ರಾಂ ವಿದ್ಯಾಧಿಪಭುವನಾಯನಮಃ। ಓಂ ಹ್ರಾಂ ಜ್ವಾಲಾಭುವನಾಯನಮಃ। ಓಂ ಹ್ರಾಂ ನಂದಿನೀಭುವನಾಯನಮಃ। ಓಂ ಹ್ರಾಂ ರೂಪಿಣೀಭುವನಾಯನಮಃ। ಓಂ ಹ್ರಾಂ ಅಂಬಿಕಾಭುವನಾಯನಮಃ। ಓಂ ಹ್ರಾಂ ಸ್ಥಾಣುಮತೀಭುವನಾಯನಮಃ। ಓಂ ಹ್ರಾಂ ಬ್ರಹ್ಮವೇತಾಲೀಭುವನಾಯನಮಃ। ಓಂ ಹ್ರಾಂ ತ್ರಿಗುಣೀಭುವನಾಯನಮಃ। ಓಂ ಹ್ರಾಂ

ಮನೋನ್ಮನಭುವನಾಯನಮಃ | ಓಂ ಹ್ರಾಂ ಸರ್ವಭೂತದಮನಭುವನಾಯ
ನಮಃ । ಓಂ ಹ್ರಾಂ ಬಲಪ್ರಮಥನಭುವನಾಯನಮಃ | ಓಂ ಹ್ರಾಂ ಬಲಭುವ
ನಾಯನಮಃ | ಓಂ ಹ್ರಾಂ ಬಲವಿಕರಣಭುವನಾಯನಮಃ | ಓಂ ಹ್ರಾಂ ಕಲ
ವಿಕರಣಭುವನಾಯನಮಃ । ಓಂ ಹ್ರಾಂ ಕಾಲಭುವನಾಯನಮಃ | ಓಂ ಹ್ರಾಂ
ರುದ್ರಭುವನಾಯನಮಃ | ಓಂ ಹ್ರಾಂ ಶ್ರೇಷ್ಠಭುವನಾಯನಮಃ | ಓಂ ಹ್ರಾಂ
ಜ್ಯೇಷ್ಠಭುವನಾಯನಮಃ | ಓಂ ಹ್ರಾಂ ವಾಮದೇವಭುವನಾಯನಮಃ | ಓಂ
ಹ್ರಾಂ ಏಕವೀರಭುವನಾಯನಮಃ | ಓಂ ಹ್ರಾಂ ಪಂಚಾಂತಕಭುವನಾಯನಮಃ
ಓಂ ಹ್ರಾಂ ಸೂರಗಭುವನಾಯನಮಃ | ಓಂ ಹ್ರಾಂ ಪಿಂಗಲಭುವನಾಯನಮಃ|
ಓಂ ಹ್ರಾಂ ಜ್ಯೋತಿರ್ಭುವನಾಯನಮಃ | ಓಂ ಹ್ರಾಂ ಸಂವರ್ತಭುವನಾಯ
ನಮಃ | ಓಂ ಹ್ರಾಂ ಚಂಡಭುವನಾಯನಮಃ । ಓಂ ಹ್ರಾಂ ಕ್ರೋಧೇಶಭುವನಾ
ಯನಮಃ | ಓಂ ಹ್ರಾಂ ಶ್ರೀಕಂಠಭುವನಾಯನಮಃ । ಓಂ ಹ್ರಾಂ ಉಮಾಭು
ವನಾಯನಮಃ | ಓಂ ಹ್ರಾಂ ಕುಮಾರಭುವನಾಯನಮಃ | ಓಂ ಹ್ರಾಂ ವಿಷ್ಣು
ಭುವನಾಯನಮಃ | ಓಂ ಹ್ರಾಂ ಭೈರವಭುವನಾಯನಮಃ | ಓಂ ಹ್ರಾಂ ಕೃತ
ಭುವನಾಯನಮಃ | ಓಂ ಹ್ರಾಂ ಅಕೃತಭುವನಾಯನಮಃ | ಓಂ ಹ್ರಾಂ ಬ್ರಹ್ಮ
ಭುವನಾಯನಮಃ| ಓಂ ಹ್ರಾಂ ಪ್ರಜೇಶಭುವನಾಯನಮಃ| ಓಂ ಹ್ರಾಂ ಸೌಮ್ಯ
ಭುವನಾಯನಮಃ | ಓಂ ಹ್ರಾಂ ಇಂದ್ರಭುವನಾಯನಮಃ | ಓಂ ಹ್ರಾಂ ಗಂಧ
ರ್ವಭುವನಾಯನಮಃ | ಓಂ ಹ್ರಾಂ ಯಕ್ಷಭುವನಾಯನಮಃ । ಓಂ ಹ್ರಾಂ
ರಾಕ್ಷಸಭುವನಾಯನಮಃ | ಓಂ ಹ್ರಾಂ ಪಿಶಾಚಭುವನಾಯನಮಃ | ಓಂ ಹ್ರಾಂ
ಸ್ಥೂಲೇಶ್ವರಭುವನಾಯನಮಃ | ಓಂ ಹ್ರಾಂ ಸ್ಥಲೇಶ್ವರಭುವನಾಯನಮಃ |
ಓಂ ಹ್ರಾಂ ಶಂಖಕರ್ಣಭುವನಾಯನಮಃ | ಓಂ ಹ್ರಾಂ ಕಾಲಾಂಜನಭುವನಾ
ಯನಮಃ | ಓಂ ಹ್ರಾಂ ಮಂಡಲೇಶ್ವರಭುವನಾಯನಮಃ | ಓಂ ಹ್ರಾಂ ದರಗಂ
ಡಭುವನಾಯನಮಃ | ಓಂ ಹ್ರಾಂ ಡಾಲಗಂಡಭುವನಾಯನಮಃ | ಓಂ ಹ್ರಾಂ
ಅನುಪಮಗುಣಯುತಭುವನಾಯನಮಃ | ಓಂ ಹ್ರಾಂ ವಿದೂರಕಭುವನಾಯ
ನಮಃ | ಓಂ ಹ್ರಾಂ ಘೋರಕಭುವನಾಯನಮಃ | ಓಂ ಹ್ರಾಂ ಪ್ರಜಾಪತಿಭು
ವನಾಯನಮಃ | ಓಂ ಹ್ರಾಂ ಹುತಾಶನಭುವನಾಯನಮಃ | ಓಂ ಹ್ರಾಂ ಕಾಲ
ರೂಪಿಭುವನಾಯನಮಃ | ಓಂ ಹ್ರಾಂ ವಿಶಾಲಭುವನಾಯನಮಃ | ಓಂ ಹ್ರಾಂ
ಜಟಿಲಭುವನಾಯನಮಃ | ಓಂ ಹ್ರಾಂ ರೌದ್ರಭುವನಾಯನಮಃ ।
ಓಂ ಹ್ರಾಂ ಪಿಂಗಲಾಕ್ಷಭುವನಾಯನಮಃ | ಓಂ ಹ್ರಾಂ ಕಾಲದಂಷ್ಟ್ರಭುವನಾ
ಯನಮಃ | ಓಂ ಹ್ರಾಂ ಅಜೇಶಭುವನಾಯನಮಃ | ಓಂ ಹ್ರಾಂ ಸರ್ವವಿದ್ಭು
ನಾಯನಮಃ | ಓಂ ಹ್ರಾಂ ಭಾಸುರಭುವನಾಯನಮಃ | ಓಂ ಹ್ರಾಂ ಸುಬಾ
ಹುಭುವನಾಯನಮಃ| ಓಂ ಹ್ರಾಂ ಮಂತ್ರರೂಪಿಭುವನಾಯನಮಃ | ಓಂ ಹ್ರಾಂ
ಓಂ ಹ್ರಾಂ ಸ್ಥಾಣುಭುವನಾಯನಮಃ | ಓಂ ಹ್ರಾಂ ಸ್ವರ್ಣಾಕ್ಷಭುವನಾಯನ

ಮಃ । ಓಂ ಹ್ರಾಂ ಭದ್ರಕರಣಭುವನಾಯುನಮಃ । ಓಂ ಹ್ರಾಂ ಗೋಕರ್ಣಭು ವನಾಯುನಮಃ । ಓಂ ಹ್ರಾಂ ಮಹಾಬಲಭುವನಾಯುನಮಃ । ಓಂ ಹ್ರಾಂ ಅವಿ ಮುಕ್ತಭುವನಾಯುನಮಃ । ಓಂ ಹ್ರಾಂ ರುದ್ರಕೋಟಿಭುವನಾಯುನಮಃ । ಓಂ ಹ್ರಾಂ ವಸ್ತ್ರಾಪದಭುವನಾಯುನಮಃ । ಓಂ ಹ್ರಾಂ ಭೀಮಭುವನಾಯುನಮಃ । ಓಂ ಹ್ರಾಂ ಮಹೇಂದ್ರಭುವನಾಯುನಮಃ । ಓಂ ಹ್ರಾಂ ಅಟ್ಟಹಾಸಭುವನಾಯು ನಮಃ । ಓಂ ಹ್ರಾಂ ವಿಮಲಭುವನಾಯುನಮಃ । ಓಂ ಹ್ರಾಂ ಬಲಭುವನಾಯು ನಮಃ । ಓಂ ಹ್ರಾಂ ನಾಗಖಂಡಲಿಭುವನಾಯುನಮಃ । ಓಂ ಹ್ರಾಂ ಕುರುಕ್ಷೇ ತ್ರಭುವನಾಯುನಮಃ । ಓಂ ಹ್ರಾಂ ಗಯಾಭುವನಾಯುನಮಃ । ಓಂ ಹ್ರಾಂ ಭೈ ರವಭುವನಾಯುನಮಃ । ಓಂ ಹ್ರಾಂ ಕೇದಾರ ಭುವನಾಯುನಮಃ । ಓಂ ಹ್ರಾಂ ಮಧ್ಯಭುವನಾಯುನಮಃ । ಓಂ ಹ್ರಾಂ ಮಹಾಕಾಲಭುವನಾಯುನ ಮಃ । ಓಂ ಹ್ರಾಂ ಮಾತೃಕೇಶ್ವರಭುವನಾಯುನಮಃ । ಓಂ ಹ್ರಾಂ ಕಲ್ಪವದ್ಭು ವನಾಯುನಮಃ । ಓಂ ಹ್ರಾಂ ಶ್ರೀಶೈಲಭುವನಾಯುನಮಃ । ಓಂ ಹ್ರಾಂ ಹರಿಶ್ಚಂ ದ್ರಭುವನಾಯುನಮಃ । ಓಂ ಹ್ರಾಂ ನಾಕುಲಭುವನಾಯುನಮಃ । ಓಂ ಹ್ರಾಂ ಭಾರಭೂತಿಭುವನಾಯುನಮಃ । ಓಂ ಹ್ರಾಂ ಢುಂಡಿಭುವನಾಯುನಮಃ । ಓಂ ಹ್ರಾಂ ಆಷಾಢಿಭುವನಾಯುನಮಃ । ಓಂ ಹ್ರಾಂ ಪುಷ್ಕರಭುವನಾಯುನಮಃ । ಓಂ ಹ್ರಾಂ ನೈಮಿಷಭುವನಾಯುನಮಃ । ಓಂ ಹ್ರಾಂ ಪ್ರಭಾಸಭುವನಾಯುನಮಃ ಓಂ ಹ್ರಾ ಅಮರೇಶ ಭುವನಾಯುನಮಃ । ಓಂ ಹ್ರಾಂ ತ್ರಿದಶವಂದಿತಭುವನಾ ಯುನಮಃ । ಓಂ ಹ್ರಾಂ ತ್ರ್ಯಕ್ಷಭುವನಾಯುನಮಃ । ಓಂ ಹ್ರಾಂ ಗುಣಸಂವಾಹ ಭುವನಾಯುನಮಃ । ಓಂ ಹ್ರಾಂ ವಿವಾಹಭುವನಾಯುನಮಃ । ಓಂ ಹ್ರಾಂ ವಿಚ ಕ್ಷಣಭುವನಾಯುನಮಃ । ಓಂ ಹ್ರಾಂ ವಿಭುಭುವನಾಯುನಮಃ ಓಂ ಹ್ರಾಂ ಶಂಭು ಭುವನಾಯುನಮಃ । ಓಂ ಹ್ರಾಂ ಲಿಪ್ಸುಭುವನಾಯುನಮಃ । ಓಂ ಹ್ರಾಂ ನಭೋ ಭುವನಾಯುನಮಃ । ಓಂ ಹ್ರಾಂ ಗಣಾಧ್ಯಕ್ಷಭುವನಾಯುನಮಃ । ಓಂ ಹ್ರಾಂ ಅನಂತಭುವನಾಯುನಮಃ । ಓಂ ಹ್ರಾಂ ಲೋಹಿತಭುವನಾಯುನಮಃ । ಓಂ ಹ್ರಾಂ ಪಾತಾಲೇಶಭುವನಾಯುನಮಃ । ಓಂ ಹ್ರಾಂ ವೃಷಭಭುವನಾಯುನಮಃ । ಓಂ ಹ್ರಾಂ ಸುವೀರ್ಯಭುವನಾಯುನಮಃ । ಓಂ ಹ್ರಾಂ ಶುಭಭುವನಾಯುನಮಃ ಓಂ ಹ್ರಾಂ ಪಾಲಕ ಭುವನಾಯುನಮಃ । ಓಂ ಹ್ರಾಂ ಗ್ರಸನಭುವನಾಯುನಮಃ । ಓಂ ಹ್ರಾಂ ವಿಷಧರಭುವನಾಯುನಮಃ । ಓಂ ಹ್ರಾಂ ಧೀರಭುವನಾಯುನಮಃ । ಓಂ ಹ್ರಾಂ ಸುಖಕೃದ್ಭುವನಾಯುನಮಃ । ಓಂ ಹ್ರಾಂ ಬಲಿಪ್ರಿಯಭುವನಾಯುನ ಮಃ । ಓಂ ಹ್ರಾಂ ವೇದಪಾರಾಂಗಭುವನಾಯುನಮಃ । ಓಂ ಹ್ರಾಂ ಸರ್ವಜ್ಞ ಭುವನಾಯುನಮಃ । ಓಂ ಹ್ರಾಂ ಅಜಭುವನಾಯುನಮಃ । ಓಂ ಹ್ರಾಂ ಭೂತ ಪಾಲಭುವನಾಯುನಮಃ । ಓಂ ಹ್ರಾಂ ಪಿಂಗಲಾಕ್ಷಭುವನಾಯುನಮಃ । ಓಂ ಹ್ರಾಂ ಜ್ಞಾನವದ್ಭುವನಾಯುನಮಃ । ಓಂ ಹ್ರಾಂ ವಿದ್ಯೇಶಭುವನಾಯುನಮಃ ।

ಓಂ ಹ್ರಾಂ ಈಶಾನಭುವನಾಯನಮಃ। ಓಂ ಹ್ರಾಂ ಇಂದುಯಜ್ಞಪಭುವನಾಯನಮಃ। ಓಂ ಹ್ರಾಂ ಪ್ರಕಾಶಭುವನಾಯನಮಃ। ಓಂ ಹ್ರಾಂ ಲಕ್ಷ್ಮೀಶಭುವನಾಯನಮಃ। ಓಂ ಹ್ರಾಂ ಕಾಮಪ್ರಸಾದಭುವನಾಯನಮಃ। ಓಂ ಹ್ರಾಂ ಜಟಾಧರಭುವನಾಯನಮಃ। ಓಂ ಹ್ರಾಂ ಶಾಂತಭುವನಾಯನಮಃ। ಓಂ ಹ್ರಾಂ ಸೌಮ್ಯಭುವನಾಯನಮಃ। ಓಂ ಹ್ರಾ ಧನ್ಯಭುವನಾಯನಮಃ। ಓಂ ಹ್ರಾಂ ರೂಪವದ್ಭುವನಾಯನಮಃ। ಓಂ ಹ್ರಾಂ ಸಿಧೀಶಭುವನಾಯನಮಃ। ಓಂ ಹ್ರಾಂ ಮೇಘವಾಹನಭುವನಾಯನಮಃ। ಓಂ ಹ್ರಾಂ ಕಪರ್ದಿಭುವನಾಯನಮಃ। ಓಂ ಹ್ರಾಂ ಪಂಚಶಿಖಭುವನಾಯನಮಃ। ಓಂ ಹ್ರಾಂ ಪಂಚಾತ್ಮಕಭುವನಾಯನಮಃ। ಓಂ ಹ್ರಾಂ ಭಯಂಕರಭುವನಾಯನಮಃ। ಓಂ ಹ್ರಾಂ ಓಂ ಹ್ರಾಂ ತೀಕ್ಷ್ಣಭುವನಾಯನಮಃ। ಓಂ ಹ್ರಾಂ ಸೂಕ್ಷ್ಮಭುವನಾಯನಮಃ ಓಂ ಹ್ರಾಂ ವಾಯುವೇಗಭುವನಾಯನಮಃ। ಓಂ ಹ್ರಾಂ ಲಘುಭುವನಾಯನಮಃ। ಓಂ ಹ್ರಾಂ ಶೀಘ್ರಭುವನಾಯನಮಃ। ಓಂ ಹ್ರಾಂ ಭೈರವಭುವನಾಯನಮಃ। ಓಂ ಹ್ರಾಂ ಬಡಬಾಮುಖಭುವನಾಯನಮಃ। ಓಂ ಹ್ರಾಂ ಬಲಾಂತಕಭುವನಾಯನಮಃ। ಓಂ ಹ್ರಾಂ ದೀರ್ಘಬಾಹುಭುವನಾಯನಮಃ। ಓಂ ಹ್ರಾಂ ಜಯಭದ್ರಭುವನಾಯನಮಃ। ಓಂ ಹ್ರಾಂ ಶ್ವೇತಭುವನಾಯನಮಃ। ಓಂ ಹ್ರಾಂ ಮಹಾಬಲಭುವನಾಯನಮಃ। ಓಂ ಹ್ರಾಂ ಪಾಶಹಸ್ತಭುವನಾಯನಮಃ। ಓಂ ಹ್ರಾಂ ಅತಿಬಲಭುವನಾಯನಮಃ। ಓಂ ಹ್ರಾಂ ಬಲಭುವನಾಯನಮಃ। ಓಂ ಹ್ರಾಂ ದಂಷ್ಟ್ರಕಭುವನಾಯನಮಃ। ಓಂ ಹ್ರಾ ಲೋಹಿತಭುವನಾಯನಮಃ। ಓಂ ಹ್ರಾಂ ಧೂಮ್ರಭುವನಾಯನಮಃ। ಓಂ ಹ್ರಾಂ ವಿರೂಪಾಕ್ಷಭುವನಾಯನಮಃ। ಓಂ ಹ್ರಾಂ ಊರ್ಧ್ವಕೇಶಭುವನಾಯನಮಃ। ಓಂ ಹ್ರಾಂ ಭಯಾನಕಭುವನಾಯನಮಃ। ಓಂ ಹ್ರಾಂ ಕ್ರೂರದೃಷ್ಟಿಭುವನಾಯನಮಃ। ಓಂ ಹ್ರಾಂ ಹಂತೃಭುವನಾಯನಮಃ। ಓಂ ಹ್ರಾಂ ಮಾರಣಭುವನಾಯನಮಃ। ಓಂ ನಿರ್ಋತೀಶಭುವನಾಯನಮಃ। ಓಂ ಹ್ರಾಂ ಧರ್ಮಭುವನಾಯನಮಃ। ಓಂ ಹ್ರಾಂ ಮೃತ್ಯುಹರಭುವನಾಯನಮಃ। ಓಂ ಹ್ರಾಂ ಸಂಯೋಕ್ತೃಭುವನಾಯನಮಃ। ಓಂ ಹ್ರಾಂ ರಮೇಶಭುವನಾಯನಮಃ। ಓಂ ಹ್ರಾಂ ಯಾಮ್ಯೇಶಭುವನಾಯನಮಃ। ಓಂ ಹ್ರಾಂ ಸರ್ವನಿಯೋಕ್ತೃಭುವನಾಯನಮಃ। ಓಂ ಹ್ರಾಂ ಶ್ರೀ ಕಾಮಭುವನಾಯನಮಃ। ಓಂ ಹ್ರಾಂ ಕರ್ತೃಭುವನಾಯನಮಃ। ಓಂ ಹ್ರಾಂ ಧಾತೃಭುವನಾಯನಮಃ। ಓಂ ಹ್ರಾಂ ವಿಧಾತೃಭುವನಾಯನಮಃ। ಓಂ ಹ್ರಾಂ ಕ್ಷಯಾಂತಕಭುವನಾಯನಮಃ। ಓಂ ಹ್ರಾಂ ಭಸ್ಮಾಂತಕಭುವನಾಯನಮಃ। ಓಂ ಹ್ರಾಂ ಬಭ್ರುಭುವನಾಯನಮಃ। ಓಂ ಹ್ರಾಂ ದಹನಭುವನಾಯನಮಃ। ಓಂ ಹ್ರಾಂ ಜ್ವಲನಭುವನಾಯನಮಃ।

ಓಂ ಹ್ರಾಂ ಹರಭುವನಾಯನಮಃ| ಓಂ ಹ್ರಾಂ ಖಾದಕಭುವನಾಯನಮಃ | ಓಂ ಹ್ರಾಂ ಪಿಂಗಲಭುವನಾಯನಮಃ | ಓಂ ಹ್ರಾಂ ಹುತಾಶಿಭುವನಾಯನಮಃ| ಓಂ ಹ್ರಾಂ ಅಗ್ನಿರುದ್ರಭುವನಾಯನಮಃ | ಓಂ ಹ್ರಾಂ ತ್ರಿದಶಾಧಿಪಭುವನಾಯ ನಮಃ | ಓಂ ಹ್ರಾಂ ಪಿನಾಕಿಭುವನಾಯನಮಃ | ಓಂ ಹ್ರಾಂ ಶಾಸ್ತೃಭುವನಾಯನಮಃ | ಓಂ ಹ್ರಾಂ ಅವ್ಯಯಭುವನಾಯನಮಃ | ಓಂ ಹ್ರಾಂ ವಿಭೂತಿಭುವನಾಯನಮಃ | ಓಂ ಹ್ರಾಂ ಪ್ರಮರ್ದನಭುವನಾಯನಮಃ | ಓಂ ಹ್ರಾಂ ವಜ್ರದೇಹಭುವನಾಯನಮಃ | ಓಂ ಹ್ರಾಂ ಬದ್ಧಭುವನಾಯನಮಃ | ಓಂ ಹ್ರಾಂ ಅಜಭುವನಾಯನಮಃ | ಓಂ ಹ್ರಾಂ ಕಪಿಲೇಶಭುವನಾಯನಮಃ | ಓಂ ಹ್ರಾಂ ರೌದ್ರಭುವನಾಯನಮಃ | ಓಂ ಹ್ರಾಂ ವೈಷ್ಣವಭುವನಾಯನಮಃ| ಓಂ ಹ್ರಾಂ ಕೂಷ್ಮಾಂಡಭುವನಯನಮಃ | ಓಂ ಹ್ರಾಂ ಬ್ರಾಹ್ಮಭುವನಾಯನಮಃ | ಓಂ ಹ್ರಾಂ ಕಾಲಾಗ್ನಿರುದ್ರಭುವನಾಯನಮಃ | ಓಂ ಹ್ರಾಂ ವಾಟಕಭುನಾಯನಮಃ |

ಇತಿ ಭುವನಾಧ್ವನ್ಯಾಸ ಸಮಾಪ್ತಿ || ೨೨೪ ||

## ಪದಾಧ್ವನ್ಯಾಸ

ಓಂ ಹ್ರಾಂ ವ್ಯೋಮವ್ಯಾಪಿನೇ | ಓಂ ಹ್ರಾಂ ವ್ಯೋಮರೂಪಾಯ | ಓಂ ಹ್ರಾಂ ಸರ್ವವ್ಯಾಪಿನೇ | ಓಂ ಹ್ರಾಂ ಶಿವಾಯ | ಓಂ ಹ್ರಾಂ ಅನಂತಾಯ | ಓಂ ಹ್ರಾಂ ಅನಾಥಾಯ | ಓಂ ಹ್ರಾಂ ಅನಾಶ್ರಿತಾಯ | ಓಂ ಹ್ರಾಂ ಧ್ರುವಾಯ | ಓಂ ಹ್ರಾಂ ಶಾಶ್ವತಾಯ | ಓಂ ಹ್ರಾಂ ಯೋಗಪೀಠಸಂಸ್ಥಿತಾಯ | ಓಂ ಹ್ರಾಂ ನಿತ್ಯಯೋಗಿನೇ | ಓಂ ಹ್ರಾಂ ಧ್ಯಾನಾಧಾರಾಯ| ಓಂ ಹ್ರಾಂ ಓಂನಮಃಶಿವಾಯ ಓಂ ಹ್ರಾಂ ಸರ್ವಪ್ರಭುವೇ | ಓಂ ಹ್ರಾಂ ಶಿವಾಯ | ಓಂ ಹ್ರಾಂ ಈಶಾನಶಿರಸೇ ಓಂ ಹ್ರಾಂ ತತ್ಪುರುಷವಕ್ತ್ರಾಯ | ಓಂ ಹ್ರಾಂ ಅಘೋರಹೃದಯಾಯ | ಓಂ ಹ್ರಾಂ ವಾಮದೇವಗುಹ್ಯಾಯ | ಓಂ ಹ್ರಾಂ ಸದ್ಯೋಜಾತಪಾದಾಯ | ಓಂ ಹ್ರಾಂ ಓಂನಮೋನಮಃ | ಓಂ ಹ್ರಾಂ ಗುಹ್ಯಾತಿಗುಹ್ಯಾಯ | ಓಂ ಹ್ರಾಂ ಗೋಪ್ತ್ರೇ | ಓಂ ಹ್ರಾಂ ಅನಿಧನಾಯ | ಓಂ ಹ್ರಾಂ ಸರ್ವಯೋಗಾದಿಕೃತಾಯ ಓಂ ಹ್ರಾಂ ಸರ್ವವಿದ್ಯಾಧಿಪಾಯ | ಓಂ ಹ್ರಾಂ ಜ್ಯೋತೀರೂಪಾಯ | ಓಂ ಹ್ರಾ ಪರಮೇಶ್ವರಪದಾಯ | ಓಂ ಹ್ರಾಂ ಅಚೇತನಾಚೇತನ| ಓಂ ಹ್ರಾಂ ವ್ಯೋಮನ್ ವ್ಯೋಮನ್ | ಓಂ ಹ್ರಾಂ ವ್ಯಾನ್ ವ್ಯಾಪಿನ್ | ಓಂ ಹ್ರಾಂ ಅರೂಪಿನ್ ಅರೂಪಿನ್ | ಓಂ ಹ್ರಾಂ ಪ್ರಥಮಪ್ರಥಮ | ಓಂ ಹ್ರಾಂ ತೇಜಸ್ತೇಜಃ | ಓಂ ಹ್ರಾಂ ಜ್ಯೋತಿರ್ಜ್ಯೋತಿಃ | ಓಂ ಹ್ರಾಂ ಅರೂಪ | ಓಂ ಹ್ರಾಂ ಅನಗ್ನಿ | ಓಂ ಹ್ರಾಂ ಅಧೂಮ | ಓಂ ಹ್ರಾಂ ಅಭಸ್ಮ | ಓಂ ಹ್ರಾಂ ಅನಾದ | ಓಂ ಹ್ರಾಂ ನಾನಾನಾ

ಓಂ ಹ್ರಾಂ ಧೂಧೂಧೂ | ಓಂ ಹ್ರಾಂ ಓಂ ಭೂಃ | ಓಂ ಹ್ರಾಂ ಓಂ ಭುವಃ | ಓಂ ಹ್ರಾಂ ಓಂ ಸುವಃ | ಓಂ ಹ್ರಾಂ ಅನಿಧನ | ಓಂ ಹ್ರಾಂ ನಿಧನ | ಓಂ ಹ್ರಾಂ ನಿಧನೋದ್ಭವ | ಓಂ ಹ್ರಾಂ ಶಿವ | ಓಂ ಹ್ರಾಂ ಶರ್ವ | ಓಂ ಹ್ರಾಂ ಪರಮಾತ್ಮನ್ | ಓಂ ಹ್ರಾಂ ಮಹೇಶ್ವರ | ಓಂ ಹ್ರಾಂ ಮಹಾತೇಜಃ| ಓಂ ಹ್ರಾಂ ಸದ್ಭಾವೇಶ್ವರ | ಓಂ ಹ್ರಾಂ ಪರಮೇಶ್ವರ | ಓಂ ಹ್ರಾಂ ಮಹಾದೇವ | ಓಂ ಹ್ರಾಂ ಯೋಗಾಧಿಪತೇ | ಓಂ ಹ್ರಾಂ ಮುಂಚಮುಂಚ | ಓಂ ಹ್ರಾಂ ಪ್ರಥಮಪ್ರಥಮ ಓಂ ಹ್ರಾಂ ಶರ್ವಶರ್ವ | ಓಂ ಹ್ರಾಂ ಭವಭವ | ಓಂ ಹ್ರಾಂ ಭವೋದ್ಭವ | ಓಂ ಹ್ರಾಂ ಸರ್ವ ಭೂತಸುಖೋದ್ಭವ | ಓಂ ಹ್ರಾಂ ಸರ್ವಸಾನ್ನಿಧ್ಯಕರ | ಓಂ ಹ್ರಾಂ ಬ್ರಹ್ಮವಿಷ್ಣುರುದ್ರಪರ | ಓಂ ಹ್ರಾಂ ಅನರ್ಚಿತಾನರ್ಚಿತ | ಓಂ ಹ್ರಾಂ ಅಸಂಸ್ತುತಾಸಂಸ್ತುತ | ಓಂ ಹ್ರಾಂ ಅಪೂರ್ವಸ್ಥಿತಾಪೂರ್ವಸ್ಥಿತ | ಓಂ ಹ್ರಾಂ ಸಾಕ್ಷಿಸಾಕ್ಷಿ ಓಂ ಹ್ರಾಂ ತರುತರು | ಓಂ ಹ್ರಾಂ ಪತಂಗಪತಂಗ | ಓಂ ಹ್ರಾಂ ಪಿಂಗಪಿಂಗ | ಓಂ ಹ್ರಾಂ ಜ್ಞಾನಜ್ಞಾನ | ಓಂ ಹ್ರಾಂ ಶಬ್ದಶಬ್ದ | ಓಂ ಹ್ರಾಂ ಸೂಕ್ಷ್ಮಸೂಕ್ಷ್ಮ ಓಂ ಹ್ರಾಂ ಶಿವಶಿವ | ಓಂ ಹ್ರಾಂ ಸರ್ವಸರ್ವ | ಓಂ ಹ್ರಾಂ ಓಂ ನಮೋನಮಃ| ಓಂ ಹ್ರಾಂ ಓಂ ಶಿವಾಯ | ಓಂ ಹ್ರಾಂ ನಮೋನಮಃ | ಓಂ ಹ್ರಾಂ ಓಂ |

ಇತಿ ಪದಾಧ್ವನ್ಯಾಸ ಸಮಾಪ್ತಿ ||೮೧||

## ವರ್ಣಾಧ್ವನ್ಯಾಸ

ಓಂ ಹ್ರಾಂ ಅಂ ನಮಃ | ಓಂ ಹ್ರಾಂ ಆಂ ನಮಃ | ಓಂ ಹ್ರಾಂ ಇಂ ನಮಃ ಓಂ ಹ್ರಾಂ ಈಂ ನಮಃ | ಓಂ ಹ್ರಾಂ ಉಂ ನಮಃ | ಓಂ ಹ್ರಾಂ ಊಂ ನಮಃ| ಓಂ ಹ್ರಾಂ ಋಂ ನಮಃ | ಓಂ ಹ್ರಾಂ ೠಂ ನಮಃ | ಓಂ ಹ್ರಾಂ ಒಂ| ನಮಃ ಓಂ ಹ್ರಾಂ ಓಂ ನಮಃ | ಓಂ ಹ್ರಾಂ ಏಂ ನಮಃ | ಓಂ ಹ್ರಾಂ ಐಂ ನಮಃ | ಓಂ ಹ್ರಾಂ ಓಂ ನಮಃ | ಓಂ ಹ್ರಾಂ ಔಂ ನಮಃ | ಓಂ ಹ್ರಾಂ ಅಂ ನಮಃ | ಓಂ ಹ್ರಾಂ ಅಃ ನಮಃ | ಓಂ ಹ್ರಾಂ ಕಂ ನಮಃ | ಓಂ ಹ್ರಾಂ ಖಂ ನಮಃ | ಓಂ ಹ್ರಾಂ ಗಂ ನಮಃ | ಓಂ ಹ್ರಾಂ ಘಂ ನಮಃ | ಓಂ ಹ್ರಾಂ ಙಂ ನಮಃ | ಓಂ ಹ್ರಾಂ ಚಂ ನಮಃ | ಓಂ ಹ್ರಾಂ ಛಂ ನಮಃ | ಓಂ ಹ್ರಾಂ ಜಂ ನಮಃ | ಓಂ ಹ್ರಾಂ ಝಂ ನಮಃ | ಓಂ ಹ್ರಾಂ ಞಂ ನಮಃ | ಓಂ ಹ್ರಾಂ ಟಂ ನಮಃ | ಓಂ ಹ್ರಾಂ ಠಂ ನಮಃ | ಓಂ ಹ್ರಾಂ ಡಂ ನಮಃ | ಓಂ ಹ್ರಾಂ ಢಂ ನಮಃ | ಓಂ ಹ್ರಾಂ ಣಂ ನಮಃ | ಓಂ ಹ್ರಾಂ ತಂ ನಮಃ | ಓಂ ಹ್ರಾಂ ಥಂ ನಮಃ | ಓಂ ಹ್ರಾಂ ದಂ ನಮಃ | ಓಂ ಹ್ರಾಂ ಧಂ ನಮಃ | ಓಂ ಹ್ರಾಂ ನಂ ನಮಃ | ಓಂ ಹ್ರಾಂ ಪಂ ನಮಃ | ಓಂ ಹ್ರಾಂ ಫಂ ನಮಃ | ಓಂ ಹ್ರಾಂ ಬಂ ನಮಃ | ಓಂ ಹ್ರಾಂ ಭಂ ನಮಃ | ಓಂ ಹ್ರಾಂ ಮಂ ನಮಃ | ಓಂ ಹ್ರಾಂ ಯಂ ನಮಃ |

ಓಂ ಹ್ರಾಂ ರಂ ನಮಃ | ಓಂ ಹ್ರಾಂ ಲಂ ನಮಃ | ಓಂ ಹ್ರಾಂ ವಂ ನಮಃ | ಓಂ ಹ್ರಾಂ ಶಂ ನಮಃ | ಓಂ ಹ್ರಾಂ ಷಂ ನಮಃ | ಓಂ ಹ್ರಾಂ ಸಂ ನಮಃ | ಓಂ ಹ್ರಾಂ ಹಂ ನಮಃ | ಓಂ ಹ್ರಾಂ ಕ್ಷಂ ನಮಃ |

**ಇತಿ ವರ್ಣಾಧ್ವನ್ಯಾಸ ಸಮಾಪ್ತಿ** || ೫೦ ||

## ಕಲಾಧ್ವನ್ಯಾಸ

ಓಂ ಹ್ರಾಂ ಶಾಂತ್ಯತೀತಕಲಾಯೈನಮಃ | ಓಂ ಹ್ರಾಂ ಶಾಂತಿಕಲಾಯೈ ನಮಃ | ಓಂ ಹ್ರಾಂ ವಿದ್ಯಾಕಲಾಯೈನಮಃ | ಓಂ ಹ್ರಾಂ ಪ್ರತಿಷ್ಠಾಕಲಾಯೈ ನಮಃ | ಓಂ ಹ್ರಾಂ ನಿವೃತ್ತಿಕಲಾಯೈನಮಃ |

**ಇತಿ ಕಲಾಧ್ವನ್ಯಾಸ ಸಮಾಪ್ತಿ** || ೫ ||

## ತತ್ತ್ವಾಧ್ವನ್ಯಾಸ

ಓಂ ಹ್ರಾಂ ಶಿವತತ್ತ್ವಾಯನಮಃ | ಓಂ ಹ್ರಾಂ ಶಕ್ತಿತತ್ತ್ವಾಯನಮಃ | ಓಂ ಹ್ರಾಂ ಸದಾಶಿವತತ್ತ್ವಾಯನಮಃ | ಓಂ ಹ್ರಾಂ ಈಶ್ವರ ತತ್ತ್ವಾಯನ ಮಃ | ಓಂ ಹ್ರಾಂ ಶುದ್ಧ ವಿದ್ಯಾತತ್ತ್ವಾಯನಮಃ | ಓಂ ಹ್ರಾಂ ಕಾಲತತ್ತ್ವಾಯ ನಮಃ | ಓಂ ಹ್ರಾಂ ನಿಯತಿತತ್ತ್ವಾಯನಮಃ | ಓಂ ಹ್ರಾಂ ಕಲಾತತ್ತ್ವಾಯ ನಮಃ | ಓಂ ಹ್ರಾಂ ವಿದ್ಯಾತತ್ತ್ವಾಯನಮಃ | ಓಂ ಹ್ರಾಂ ರಾಗತತ್ತ್ವಾಯ ನಮಃ | ಓಂ ಹ್ರಾಂ ಪುರುಷತತ್ತ್ವಾಯನಮಃ | ಓಂ ಹ್ರಾಂ ಪ್ರಕೃತಿತತ್ತ್ವಾಯ ನಮಃ | ಓಂ ಹ್ರಾಂ ಗುಣತತ್ತ್ವಾಯನಮಃ | ಓಂ ಹ್ರಾಂ ಬುದ್ಧಿತತ್ತ್ವಾಯ ನಮಃ | ಓಂ ಹ್ರಾಂ ಅಹಂಕಾರತತ್ತ್ವಾಯನಮಃ | ಓಂ ಹ್ರಾಂ ಚಿತ್ತತತ್ತ್ವಾಯ ನಮಃ | ಓಂ ಹ್ರಾಂ ಶ್ರೋತ್ರತತ್ತ್ವಾಯನಮಃ | ಓಂ ಹ್ರಾಂ ತ್ವಕ್‌ತತ್ತ್ವಾಯ ನಮಃ | ಓಂ ಹ್ರಾಂ ನೇತ್ರತತ್ತ್ವಾಯನಮಃ | ಓಂ ಹ್ರಾಂ ಜಿಹ್ವಾತತ್ತ್ವಾಯ ನಮಃ | ಓಂ ಹ್ರಾಂ ಘ್ರಾಣತತ್ತ್ವಾಯನಮಃ | ಓಂ ಹ್ರಾಂ ವಾಕ್‌ತತ್ತ್ವಾಯ ನಮಃ | ಓಂ ಹ್ರಾಂ ಪಾಣಿತತ್ತ್ವಾಯನಮಃ | ಓಂ ಹ್ರಾಂ ಪಾದತತ್ತ್ವಾಯ ನಮಃ | ಓಂ ಹ್ರಾಂ ಪಾಯುತತ್ತ್ವಾಯನಮಃ | ಓಂ ಹ್ರಾಂ ಉಪಸ್ಥತತ್ತ್ವಾಯ ನಮಃ | ಓಂ ಹ್ರಾಂ ಶಬ್ದತತ್ತ್ವಾಯನಮಃ | ಓಂ ಹ್ರಾಂ ಸ್ಪರ್ಶತತ್ತ್ವಾಯ ನಮಃ | ಓಂ ಹ್ರಾಂ ರೂಪತತ್ತ್ವಾಯನಮಃ | ಓಂ ಹ್ರಾಂ ರಸತತ್ತ್ವಾಯ ನಮಃ | ಓಂ ಹ್ರಾಂ ಗಂಧತತ್ತ್ವಾಯನಮಃ | ಓಂ ಹ್ರಾಂ ಆಕಾಶತತ್ತ್ವಾಯ ನಮಃ | ಓಂ ಹ್ರಾಂ ವಾಯುತತ್ತ್ವಾಯನಮಃ | ಓಂ ಹ್ರಾಂ ಅಗ್ನಿತತ್ತ್ವಾಯ ನಮಃ | ಓಂ ಹ್ರಾಂ ಜಲತತ್ತ್ವಾಯನಮಃ|ಓಂ ಹ್ರಾಂ ಪೃಥ್ವೀತತ್ತ್ವಾಯನಮಃ|

**ಇತಿ ತತ್ತ್ವಾಧ್ವನ್ಯಾಸ ಸಮಾಪ್ತಿ** || ೩೬ ||

# ಮಂತ್ರಾಧ್ವನ್ಯಾಸ

ಓಂ ಹ್ರಾಂ ಹೃದಯಾಯನಮಃ | ಓಂ ಹ್ರೀಂ ಶಿರಸೇಸ್ವಾಹಾ | ಓಂ ಹ್ರೂಂ ಶಿಖಾಯೈವಷಟ್ | ಓಂ ಹ್ರೈಂ ಕವಚಾಯಹುಂ | ಓಂ ಹ್ರೌಂ ನೇತ್ರತ್ರಯಾಯವೌಷಟ್ | ಓಂ ಹ್ರಃ ಅಸ್ತ್ರಾಯಫಟ್ | ಓಂ ಹ್ರಾಂ ಸದ್ಯೋಜಾತಾಯನಮಃ | ಓಂ ಹ್ರೀಂ ವಾಮದೇವಾಯನಮಃ | ಓಂ ಹ್ರೂಂ ಅಘೋರಾಯನಮಃ ಓಂ ಹ್ರೈಂತತ್ಪುರುಷಾಯನಮಃ | ಓಂ ಹ್ರೌಂ ಈಶಾನಾಯನಮಃ |

ಇತಿ ಮಂತ್ರಾಧ್ವನ್ಯಾಸ ಸಮಾಪ್ತಿ ॥ ೧೧ ॥

# ದೀಕ್ಷೆಯ ದಿವಸದ ಕಾರ್ಯ ವಿಧಾನ

ಎರಡನೆಯ ದಿವಸ ತನ್ನ ನಿತ್ಯ ಕ್ರಿಯೆಗಳನ್ನೆಲ್ಲ ಮುಗಿಸಿಕೊಂಡು ವಟುವಿನನ್ನು ಮಗ್ಗುಲದಲ್ಲಿ ಪೂರ್ವಾಭಿಮುಖವಾಗಿ ಕುಳ್ಳಿರಿಸಿಕೊಂಡು ಆಚಮನ ಪ್ರಾಣಾಯಾಮಗಳನ್ನು ಮಾಡಿ ದೇಶ ಕಾಲಾದಿಗಳನ್ನು ಹೇಳಿ—

"ಏವಂ ಗುಣ ಗಣ ವಿಶೇಷಣ ವಿಶಿಷ್ಟಾಯಾಂ ಅಸ್ಯಾಂ ಶುಭಪುಣ್ಯತಿಥೌ ಅಸ್ಯ ಕುಮಾರಸ್ಯ ದೀಕ್ಷಾಂ ಕರ್ತುಂ ತತ್ಪ್ರಾಚ್ಯಾಂಗ ಭೂತಂ ಪಾಪನಾದಿ

ಹೀಗೆಂದು ಸಂಕಲ್ಪ ಮಾಡಿ ಚೌಲ ವಿಧಾನಗಳಲ್ಲಿ ಹೇಳಿದ ಪ್ರಕಾರ ಕೂದಲಕನ್ನು ತೆಗೆಯಿಸಿ, ಅವುಗಳನ್ನು ಅತ್ತಿಯ ಮರದ ಅಡಿಯಲ್ಲಾಗಲೀ ಅಥವಾ ದರ್ಭೆಯ ಸ್ಥಾನದಲ್ಲಾಗಲೀ ಹಾಕಿ ಬಿಡಬೇಕು. ತದನಂತರ ವಟುವಿನನ್ನು ಸ್ನಾನ ಮಾಡಿಸಿ, ಯಜಮಾನನು ದೀಕ್ಷೆ ಮಾಡುವದಕ್ಕೆ ನೆರೆದ ಸಭಿಕರ ಅಪ್ಪಣೆಯನ್ನು ಪಡೆದು ಮಾಹೇಶ್ವರರೊಂದಿಗೆ ಕೈಯಲ್ಲಿ ಅರ್ಘ್ಯವನ್ನು ತೆಗೆದುಕೊಂಡು ದೀಕ್ಷಾ ಮಂಟಪಕ್ಕೆ ಸುತ್ತಲೂ ಪ್ರೋಕ್ಷಣೆ ಮಾಡಬೇಕು. ತದನಂತರ ಮಂಗಳ ವಾದ್ಯದೊಡನೆ ಬಲಗಾಲ ಮುಂದಾಗಿ ದೀಕ್ಷಾ ವೇದಿಕೆಯಲ್ಲಿ ಕಲಶ ಸ್ಥಾಪನದ ಸಮ್ಮುಖದಲ್ಲಿ ಪೂರ್ವಾಭಿಮುಖವಾಗಿ ಗುರುಗಳಿಗೆ ನಮಸ್ಕರಿಸಿ ಆಸನದ ಮೇಲೆ ಕುಳಿತು ವಟುವನ್ನು ತನ್ನ ಬಲಭಾಗದಲ್ಲಿ ಕುಳ್ಳಿರಿಸಿಕೊಂಡು ಮುಖವನ್ನು ಚನ್ನಾಗಿ ಅವಲೋಕಿಸಿ ತರುವಾಯ ಗಣ ಸಂತತಿಯನ್ನು ಧ್ಯಾನ ಮಾಡಬೇಕು.

(ಪಂಚಕಲಶ ಸ್ಥಾಪನವನ್ನು ಹಿಂದೆ ಸರ್ಪಪೂಜಾ ಪ್ರಕರಣದಲ್ಲಿ ಹೇಳಿದಂತೆ ಸ್ಥಾಪನೆ ಮಾಡಬೇಕು.)

# ದೀಕ್ಷಾ ವಿಧಾನ

## ಕೌಪೀನ ಕಂಥಾ ಧಾರಣ ವಿಧಿ

ಆಚಾರ್ಯನು ಆಗ್ನೇಯ ದಿಕ್ಕಿನ ಪಶ್ಚಿಮಭಾಗದಲ್ಲಿ ಮಂಟಪದೊಳಗೆಕುಳಿತು ವಟುವಿನನ್ನು ಪೂರ್ವಾಭಿಮುಖವಾಗಿ ನಿಲ್ಲಿಸಿಕೊಂಡು ನಡುವಿಗೆ ಮೂರು ಸುತ್ತು ದಾರವನ್ನು ಸುತ್ತಿ ಕೌಪೀನವನ್ನು ಹಾಕಿ "ಓಂ ಯುವಂ ವಸ್ತ್ರಾಣಿ ಪೀವಸಾ" ಎಂಬ ಮಂತ್ರದಿಂದ ವಟುವಿನ ಗೋತ್ರಾನುಸಾರವಾಗಿ ಆಯಾಯ ಬಣ್ಣದ ವಸ್ತ್ರವನ್ನು ಹೊದಿಸಿ, ಹಾಗೂ ಬೇರೆ ಮತ್ತೊಂದು ಪಂಜಿಯನ್ನು ಹೊದಿಸಿ, ದರ್ಭೆಯ ಉಂಗುರವನ್ನು ಅನಾಮಿಕ ಬೆರಳಿನಲ್ಲಿಡಬೇಕು. ತದನಂತರ ಆಚಾರ್ಯನು ತನ್ನ ಮತ್ತು ಆಗ್ನೇಯ ದಿಕ್ಕಿನ ಮಧ್ಯ ಭಾಗದಿಂದ ವಟುವಿನನ್ನು ಕಳುಹಿಸಿ, ಯಜ್ಞ ಪಾತ್ರೆಗಳ ಉತ್ತರ ಭಾಗದಲ್ಲಿ ಕುಕ್ಕುರಾಸನದಿಂದ (ತೋಳುಗಳನ್ನು ತೊಡೆಗಳ ಮಧ್ಯಭಾಗದಲ್ಲಿ ಮಾಡಿ) ಕೂಡ್ರಿಸಬೇಕು. ಆ ಬಳಿಕ ಆಚಮನವನ್ನು ಮಾಡಿಸಿ ಪುನಃ ಹೋದ ಮಾರ್ಗದಿಂದಲೇ ಕರೆತಂದು ತನ್ನ ಬಲಭಾಗಕ್ಕೆ ಕುಳ್ಳಿರಿಸಿ ಕೊಂಡು ಆಚಾರ್ಯನು ಆಸನದ ಮೇಲೆ ಎದ್ದು ನಿಂತು—

"ವಂ ವರುಣ ಮಂಡಲಾಯನಮಃ | ಹ್ರಾಂಃ ಅಸ್ತ್ರಾಯಫಟ್"

ಎಂದು ಉಚ್ಚರಿಸಿ ಮುಖವನ್ನು ಮೇಲೆ ಮಾಡಿ ಜಲವನ್ನು ಪ್ರೋಕ್ಷಿಸಿ "ಯಂ" ಎಂಬ ವಾಯು ಬೀಜಾಕ್ಷರವನ್ನು ಹೇಳಿ "ಹ್ರೀಂ"ಎಂಬ ಮಾಯಾ ಬೀಜಾಕ್ಷರದ ಉಚ್ಚಾರದಿಂದ ಆಸನದ ಮೇಲೆ ವಿರಾಜಮಾನನಾಗಿ—

"ಪೃಥಿವಿತ್ವಯಾಧೃತಾ ಲೋಕಾದೇವತ್ವಂ ವಿಷ್ಣು ನಾಧೃತಾ ।
ತ್ವಂಚ ಧಾರಯಮಾಂದೇವಿ ಪವಿತ್ರಂ ಕುರುಚಾಸನಂ" ಎಂದು ಹೇಳಿ—

ಕೂರ್ಮಾಸನಾಯ ನಮಃ । ಅನಂತಾಸನಾಯ ನಮಃ । ಯೋಗಾಸನಾಯನಮಃ । ವಿಮಲಾಸನಾಯ ನಮಃ । ಮಧ್ಯೆ ಪರಮಸುಖಾಸನಾಯ ನಮಃ। ಅಪಸರ್ಪಂತುಯೇ ಭೂತಾಃ ಯೇ ಭೂತಾಭುವಿ ಸುಸ್ಥಿತಾ । ಯೇ ಭೂತಾ ವಿಘ್ನಕರ್ತಾರಸ್ತೇ ನಶ್ಯಂತು ಶಿವಜ್ಞಯಾ"

ಎಂದು ಉಚ್ಚರಿಸಿ ಎಡಪಾದದ ಹಿಮ್ಮಡದಿಂದ ಭೂಮಿಯನ್ನು ೩ ಸಾರೆ ಒದ್ದು-

"ಊರ್ಧ್ವಕೇಶೀ ವಿರೂಪಾಕ್ಷಿ ಮಾಂಸಶೋಣಿತ ಭಕ್ಷಣೇ ।
ತಿಷ್ಠದೇವಿ ಶಿಖಾಬಂಧೇ ಚಾಮುಂಡೇಹ್ಯ ಪರಾಜಿತೇ ॥
ಅಪಕ್ರಾಮಂತು ಭೂತಾನಿ ಪಿಶಾಚಾಸ್ಸರ್ವತೋ ದಿಶಃ ।
ಸರ್ವೇಷಾಮ ವಿರೋಧೇನ ಪೂಜಾಕರ್ಮ ಸಮಾರಭೇತ್ ॥

ಎಂಬ ಮಂತ್ರದಿಂದ ಆಸನ ಶುದ್ಧಮಾಡಿ ಗುರುವರ್ಯರಿಗೆ ನಮಸ್ಕಾರಮಾಡಿ ಷಡಕ್ಷರೀ ಮಂತ್ರನ್ಯಾಸವನ್ನು ವಿಧಿಯುಕ್ತಮಾಡಿ–

"ಪ್ರಸೀದ ದೇವದೇವೇಶ ದೇಹಮಾಶ್ರೀತ್ಯಮಾಮಕಂ ।
ವಿಮೋಚುಯ್ಯೆನಂ ವಿಶ್ವೇಶಪ್ರೆಯ್ಯೆವ ಘೃಣಾನಿಧೇ ॥

ಎಂದು ಶಿವನನ್ನು ಪ್ರಾರ್ಥನೆ ಮಾಡಿ, ಗುರುಮಂತ್ರಸ್ವರೂಪವಾದ ಸಕಲೇಶ್ವರನಾದ ಸತ್ಯ ಜ್ಞಾನಾನಂದ ಲಕ್ಷಣಯುತನಾದ, ದೇವತಾಸ್ವರೂಪನಾದ ಆ ಪರಬ್ರಹ್ಮನೇ ನಾನಿರುವೆನೆಂದು ದೀರ್ಘ ಕಾಲ ಧ್ಯಾನ ಮಾಡಿ ಧ್ಯಾನಿಸಿ ಗುರುಸ್ವರೂಪನಾದ ಆ ಪರಬ್ರಹ್ಮನೇ ತನ್ನನ್ನು ಅನುಗ್ರಹಿಸುವದಕ್ಕಾಗಿ ಲೀಲೆಯಿಂದ ಪರಮ ಮಂಗಲಾತ್ಮಕವಾದ ಸಕಲ ಅವಯವ ಪರಪೂರ್ಣನಾದ, ಸಮಸ್ತಾಭರಣಭೂಷಿತನಾದ, ಸಕಲ ಪರಿವಾರವೂ ಸಹಿತ ಕೂಡಿಕೊಂಡು ಚತುರ್ವಿಧ ಪುರುಷಾರ್ಥಗಳನ್ನು ಕೊಡುವಂಥ ಸರ್ವ ತೇಜ ಸ್ವರೂಪವಾದ ಆ ಪರಶಿವ ದಿವ್ಯಮೂರ್ತಿಯನ್ನು ತನ್ನ ಹೃದಯದಲ್ಲಿ ವಾಸವಾಗಿರುವನೆಂದು ಭಾವಿಸಿ ಆ ದೇವತೆಗಳನ್ನು ಅಂತರಂಗದ ಉಪಚಾರಗಳಿಂದಲೇ ಧ್ಯಾನಿಸಿ, ಆ ಪರಶಿವ ಮೂರ್ತಿಯೇ ವಾಸಮಾಡಿಕೊಂಡಿರುವನೆಂದು ಭಾವಿಸಿ ಗುರುವರ್ಯರಿಗೆ ನಮಸ್ಕರಿಸಿ, ಅವರಪ್ಪಣೆಯನ್ನು ಪಡೆದು ದೀಕ್ಷೆಯನ್ನು ಮಾಡಬೇಕು. ಆಜ್ಞಾ ದೀಕ್ಷಾ ತದನಂತರ ಪ್ರಾಣಾಯಾಮವನ್ನು ಮಾಡಿ:—

"ಅಸ್ಯಕುಮಾರಸ್ಯ ಪಾಶೋ ಪಾಕ್ಷಯಾರ್ಥಂ ಶಾಂಭವೀನಾಮ
ಕಾಜ್ಞಾದೀಕ್ಷಾಂ ಉಪಮಾದೀಕ್ಷಂಚ ಕರಿಷ್ಯೇ"
ಎಂದು ಸಂಕಲ್ಪ ಮಾಡಿ ವಟುವಿನನ್ನು ಚನ್ನಾಗಿ ನಿರೀಕ್ಷಿಸಿ:—

## ಆಜ್ಞಾ ದೀಕ್ಷಾ

"ಎಲೈ ಶಿಷ್ಯನೇ ಸದಾಚಾರಗಳನ್ನು ಬಿಟ್ಟು ನಡೆಯಬೇಡ"
ಹೀಗೆಂದು ಆಜ್ಞೆಯಿಂದಲೂ–

## ಉಪಮಾ ದೀಕ್ಷೆ

"ಎಲೈ ವಟುವೇ? ಪ್ರಾಚೀನರ ಸಮಾನವಾಗಿ ಆಚರಿಸು"
ಎಂದು ಉಪಮೆ ದೀಕ್ಷೆಯಿಂದಲೂ ಸಂಸ್ಕರಿಸಬೇಕು.

## ಪಂಚಗವ್ಯ ಪ್ರಾಶನ ವಿಧಿ

ತದನಂತರ ಆಚಾರ್ಯನು ಪ್ರಾಣಾಯಾಮವನ್ನು ಮಾಡಿ ದೇಶ ಕಾಲಾದಿಗಳನ್ನು ಹೇಳಿ—

"ಶಿಷ್ಯಸ್ಯ ದೇಹಾತ್ಮಶುದ್ಧ್ಯರ್ಥಂ ಪಂಚಗವ್ಯ ಪ್ರಾಶನಂ
ಕಾರಂಬತುಂ ಪಂಚಗವ್ಯ ಸಂಯೋಜನಂ ಕರಿಷ್ಯೇ"

ಎಂದು ಸಂಕಲ್ಪ ಮಾಡಿ ಗೋಮಯದಿಂದ ಸಾರಿಸಿದ ಶುದ್ಧ ಜಾಗೆಯಲ್ಲಿ ಅಕ್ಕಿಯನ್ನು ಹರಡಿ ಅದರ ಮೇಲೆ ಪೂರ್ವ—ಪಶ್ಚಿಮ ಹಾಗೂ ಉತ್ತರ-ದಕ್ಷಿಣ ವಾಗಿ ನಾಲ್ಕು ಗೆರೆಗಳನ್ನು ಹಾಕಲು ೯ ಖಾನೆಗಳಾಗುತ್ತವೆ. ಮಧ್ಯದಲ್ಲಿ ಹಾಲಿನ ಥಾಲಿಯನ್ನೂ, ಪೂರ್ವದ ಮನೆಯಲ್ಲಿ ಮಸರಿನ ಥಾಲಿಯನ್ನೂ, ದಕ್ಷಿಣದ ಮನೆಯಲ್ಲಿ ತುಪ್ಪವನ್ನೂ, ಪಶ್ಚಿಮದಲ್ಲಿ ಗೋಮಯದ ಥಾಲಿಯನ್ನೂ ಉತ್ತರದಲ್ಲಿ ಗೋಮೂತ್ರದ ಥಾಲಿಯನ್ನೂ, ಈಶಾನ್ಯದಲ್ಲಿ ದರ್ಭೋದಕ ಥಾಲಿಯನ್ನೂ ಇಟ್ಟು—

''ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ।
ಧೀಯೋ ಯೋನಃ ಪ್ರಚೋದಯಾತ್ ॥''

ಎಂಬ ಗಾಯತ್ರೀ ಮಂತ್ರದಿಂದ ಗೋಮೂತ್ರವನ್ನೂ ತದನಂತರ-

''ಗಂಧದ್ವಾರಾಂ........ಕ್ರಿಯಂ''ಎಂಬ ಮಂತ್ರದಿಂದ ಗೋಮಯವನ್ನೂ ಕ್ಷೀರ ಮಂತ್ರದಿಂದ ಕ್ಷೀರವನ್ನೂ, ದಧಿ ಮಂತ್ರದಿಂದ ಮೊಸರನ್ನೂ ಘೃತ ಮಂತ್ರ ದಿಂದ ತುಪ್ಪವನ್ನೂ—

ದೇವಸ್ಯತ್ವಾ ಪ್ರಸವೇಶ್ವಿನೋ ರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಮಾ ದದೇ'' ಏಂಬ ಮಂತ್ರದಿಂದ ದರ್ಭೋದಕವನ್ನೂ ಅಭಿಮಂತ್ರಿಸಿ ಪಂಚೋಪಚಾ ರಗಳಿಂದ ಪೂಜಿಸಿ ಧೇನು ಮುದ್ರೆಯನ್ನು ತೋರಿಸಿ, ಮತ್ತೊಂದು ಥಾಲಿಯಲ್ಲಿ ದರ್ಭೆಯ ಅರ್ಧ ಭಾಗವನ್ನು ಮುರಿದು ಹಾಕಿ, ಪ್ರಣವ ಮಂತ್ರವನ್ನು ಉಚ್ಚರಿ ಸುತ್ತ ಇಟ್ಟುಕೊಳ್ಳಬೇಕು. ತದನಂತರ ಗಾಯತ್ರಿ ಮಂತ್ರದಿಂದ ೪ ತೊಲಿ ಗೋಮೂತ್ರವನ್ನೂ ''ಗಂಧದ್ವಾರಾಂ'' ಎಂಬ ಮಂತ್ರದಿಂದ ಹೆಬ್ಬೆರಳಿನ ಅರ್ಧ ದಷ್ಟು ಗೋಮಯವನ್ನೂ, ಕ್ಷೀರ ಮಂತ್ರದಿಂದ ೨೮ ತೊಲಿ ಹಾಲನ್ನೂ, ದಧಿ ಮಂತ್ರದಿಂದ ತಕ್ಕಷ್ಟು ಮೊಸರನ್ನೂ, ಘೃತ ಮಂತ್ರದಿಂದ ತುಪ್ಪವನ್ನೂ, "ದೇವ ಸ್ಯತ್ವಾ ಮಂತ್ರದಿಂದ ದರ್ಭೋದಕವನ್ನೂ ಹಾಕಿ ಪ್ರಣವಾಕ್ಷರ ''ಓಂ''ಕಾರದ ಉಚ್ಚಾರಣೆ ಮಾಡುತ್ತ ಅವುಗಳನ್ನೆಲ್ಲ ಸಂಮಿಶ್ರ ಮಾಡಬೇಕು. ತದನಂತರ ಪುನಃ ಪ್ರಾಣಾಯಾಮವನ್ನು ಮಾಡಿ—

''ಪಂಚಗವ್ಯೇನಾಂ ತಶ್ಯೋದನಂ ಕರೋಮಿ"

ಎಂದು ಸಂಕಲ್ಪ ಮಾಡಿ—

''ಯತ್ವಗಸ್ಥಿಗತಂ ಪಾಚಂದೇಹೇ ತಿಷ್ಠತಿ ಮಾಮಕೇ ।
ಪ್ರಾಶಿತಂ ಪಂಚಗವ್ಯಂತು ದಹತ್ವಗ್ನಿರಿವೇಂಧನಂ ॥''

ಹೀಗೆಂದು ವಟುವಿನಿಂದಅನ್ನಿಸಿ ಪಂಚಗವ್ಯ ಪ್ರಾಶನವನ್ನು ಮಾಡಿಸಬೇಕು

  

# ಮಾಂಸಪಿಂಡತ್ವವನ್ನಳಿದು ಮಂತ್ರಪಿಂಡತ್ವವನ್ನು ಮಾಡುವ ವಿಧಾನ

ಪಂಚಗವ್ಯ ಪ್ರಾಶನದ ತರುವಾಯ ಆಚಾರ್ಯನು ಪ್ರಾಣಾಯಾಮವನ್ನು ಮಾಡಿ, ದರ್ಭಾಸನದಲ್ಲಿ ಉತ್ತರಕ್ಕೆ ಮುಖ ಮಾಡಿಸಿ ವಟುವಿನನ್ನು ಕೂಡ್ರಿಸಿ ದೇಹ ಹಾಗೂ ಆತ್ಮ ಶುದ್ಧಿಗಳನ್ನು ಮಾಡಿ, ಕಾಲಾವಾಹನೆ ಮಾಡುವದರ ಸಲುವಾಗಿ ಮಾಂಸ ಪಿಂಡತ್ವವನ್ನಳಿದು ಮಂತ್ರ ಪಿಂಡತ್ವವನ್ನು ಮಾಡಬೇಕು. ಹೇಗೆಂದರೆ—

ಆಚಾರ್ಯನು ದಿವ್ಯ ದೃಷ್ಟಿಯಿಂದ ವಟುವಿನನ್ನೂ ಚನ್ನಾಗಿ ನೋಡಿ ಅವನ ಹೃದಯ ಕಮಲದ ಮೂಲವಾಗಿ ಚೈತನ್ಯವನ್ನು ತನ್ನ ಆತ್ಮದಲ್ಲಿ ಭಾವನಾತ್ಪರವಾಗಿ ಕೇಂದ್ರೀಕರಿಸಿ ಪ್ರಾಣಾಯಾಮವನ್ನು ಮಾಡಿ ಕಿಲ್ಮಿಷವಿಲ್ಲದ ಸ್ವಚ್ಛ ಹೃದಯದಿಂದ ಭೂತ ಶುದ್ಧಿಯನ್ನು ಮಾಡಬೇಕು

### ಭೂತ ಶುದ್ಧಿ (ಸ್ಥೂಲ ಶರೀರ ಶುದ್ಧೀಕರಣ)

ಪಾದದಾರಭ್ಯ ಮೊಣಕಾಲಿನ ವರೆಗೆ—

"ಚತುರಶ್ರಂ ಪೀತವರ್ಣಂ ಕಠಿಣಸ್ವಭಾವಂ ವಜ್ರಲಾಂಛಿತಂ ಹ್ರಾಮಿತಿ ಹೃದಯಬಿಜೇನ ಪಾರ್ಥಿವ ಬಿ ಜ ಸಹಿತೇನ ಅಧಿನಾಯಕೇನ ಸದ್ಯೋಜಾತೇನಾಧಿಷ್ಠಿತಂ ಬ್ರಹ್ಮಣಾಕಾರಣೇಶ್ವರೇಣಯುಕ್ತಂ ನಿವೃತ್ತಿ ಕಲಾ ರೂಪಂ ಪಾರ್ಥಿವ ಮಂಡಲಂ ಭಾವ ಯಾಮಿ" ಹೀಗೆಂದು ಭಾವಿಸಿ—

"ಹ್ರಾಂ ನಿವೃತ್ತಿಕಲಾ ವೈ ಹುಂ ಫಟ್" ಎಂಬ ಮಂತ್ರದಿಂದ ಪೂರಕ ಮಾಡಿ ಸೂಕ್ಷ್ಮನ್ನು ನಾಡೀ ಮೂಲಕವಾಗಿ ಬ್ರಹ್ಮರಂಧ್ರ ಸ್ಥಾನದ ವರೆಗೆ ಪ್ರಾಣ ವಾಯುವನ್ನು ಏರಿಸಿ, ಅಲ್ಲಿ ಕುಂಭವನ್ನು ಮಾಡಿ, ಪುನಃ ದಕ್ಷಿಣ ನಾಡಿಯಿಂದ ರೇಚಕವನ್ನು ಮಾಡಬೇಕು. ಹೀಗೆ ೫ ನಾರೆ ಉದ್ಘಾತಗಳನ್ನು ಮಾಡಿ, ಪೃಥ್ವಿಯ ಗಂಧ, ರಸ, ರೂಪ, ಶಬ್ದ–ಸರ್ಶವೆಂಬ ಐದು ಗುಣಗಳನ್ನು ಹೊರಗೆ ಹಾಕಿ ತನಗೆ ವಿರುದ್ಧವಾದ ವಾಯುವಿನಿಂದ ತಿರಸ್ಕೃತವಾಗಿ ಭಾವಿಸಬೇಕು.

(ಸೂಚನೆ:-- ಉದ್ಘಾತವೆಂದರೆ ೧೨ ಮಾತ್ರಾ ಅವಧಿಯುಷ್ಟು ಪೂರಕ, ಕುಂಭಕ ರೇಚಕಗಳನ್ನು ಒಂದಾವರ್ತಿಯಂತೆ ಮೂರು ನಾರೆ ಮಾಡುವ ಪ್ರಾಣಾಯಾಮಕ್ಕೆ ಒಂದು ಉದ್ಘಾತವೆಂಬ ಹೆಸರು)

ತರುವಾಯ ಮೊಣಕಾಲಿನಿಂದ ಹೊಕ್ಕಳದ ವರೆಗೆ ಜಲ ಮಂಡಲವನ್ನು ಕುರಿತು—

"ಅರ್ಧಚಂದ್ರಾಕಾರಂ ಶ್ವೇತವರ್ಣಂ ಅಭ್ರಾಂ ಬೋಜಲಾಂಛಿತಂ।
ದ್ರವಸ್ವಭಾವಂ ಹ್ರೀಮತಿ ಶಿರೋಬೀಜೇನಾಪ್ಯ ಬೀಜೇನಾಧಿ
ನಾಯಕೇನ ವಾಮದೇವನಾಧಿಷ್ಠಿತಂ ವಿಷ್ಣುನಾಕಾರಣೇಶ್ವರೇಣ
ಯುಕ್ತಂ ಪ್ರತಿಷ್ಠಾ ಕಲಾರೂಪಂ ಅಪ್ಯಮಂಡಲಂ ಭಾವಯಾಮಿ॥"

ಹೀಗೆಂದು ಭಾವಿಸಿ "ಹ್ರೀಂ ಪ್ರತಿಷ್ಠಾಕಲಾಯೈ ಹುಂ ಫಟ್"

ಎಂಬ ಮಂತ್ರದಿಂದ ಮೊದಲಿನಂತೆ ಪೂರಕ-ಕುಂಭಕ ರೇಚಕವನ್ನು ನಾಲ್ಕುಸಾರೆ ಉದ್ಘಾತವನ್ನು, ಜಲದರಸ, ರೂಪ, ಸ್ಪರ್ಶ, ಶಬ್ದಗಳನ್ನು ಹೊರಡಿಸಿ ಜಲವನ್ನು ಅದಕ್ಕೆ ವಿರುದ್ಧವಾದ ಅಗ್ನಿ ಮೂಲಕ ತಿರಸ್ಕೃತ ಮಾಡಿ ಭಾವಿಸಬೇಕು. ಆ ಬಳಿಕ ನಾಭಿಯಿಂದ-ಕತ್ತಿನ ವರೆಗೆ ಅಗ್ನಿ ಮಂಡಲವನ್ನು ಕುರಿತು:—

"ತ್ರ್ಯಶಂ ರಕ್ತವರ್ಣಂ ಪಚನಸ್ವಭಾವಂ ಸ್ವಸ್ತಿಕಲಾಂಛಿತಂ ಹ್ರೂಮಿತಿ ಶಿಖಾಮಂತ್ರೇಣ ಅಗ್ನಿ ಬೀಜ ಸಹಿತೇನ ಅಧಿನಾಯಕೇನ ಅಘೋರೇಣಾಧಿಷ್ಠಿತಂ ರುದ್ರೇಣ ಕಾರಣೇಶ್ವರೇಣಯುಕ್ತಂ ವಿದ್ಯಾಕಲಾರೂಪಂ ಅಗ್ನಿಮಂಡಲಂ ಭಾವಯಾಮಿ" ಎಂದು ಭಾವಿಸಿ, ಹ್ರೂಂ ವಿದ್ಯಾಕಲಾಯೈ ಹುಂ ಫಟ್"

ಎಂಬ ಮಂತ್ರದಿಂದ ಮೊದಲಿನಂತೆ ಪ್ರಾಣಾಯಾಮವನ್ನು ೩ ಸಾರೆಉದ್ಘಾತಮಾಡಿ ಅಗ್ನಿಯರೂಪ, ಸ್ಪರ್ಶ, ಶಬ್ದಗಳನ್ನು ಹೊರಡಿಸಿ ಅದಕ್ಕೆ ವಿರುದ್ಧವಾದ ಜಲದ ಮೂಲಕ ತಿರಸ್ಕೃತವಾಗಿ ಭಾವಿಸಬೇಕು.

ತರುವಾಯ ಕತ್ತಿನಿಂದ ಮಧ್ಯ ಹುಬ್ಬಿನ ತನಕ ವಾಯು ಮಂಡಲವನ್ನು ಕುರಿತು:—

"ಷಡಶ್ರಂ ಕೃಷ್ಣವರ್ಣಂ ಚಲಸ್ವಭಾವಂ ಷಡ್ಬಿಂಧು ಲಾಂಛಿತಂ ಹ್ರೈಮಿತಿ ಕವಚ ಮಂತ್ರೇಣ ವಾಯು ಬೀಜೇನ ಅಧಿನಾಯಕೇನ ತತ್ಪುರುಷೇಣಾಧಿಷ್ಠಿತಂ ಮಹೇಶ್ವರೇಣ ಕಾರಣ ಪುರುಷೇಣಾನ್ವಿತಂ ಶಾಂತಿ ಕಲಾರೂಪಂ ವಾಯು ಮಂಡಲಂ ಭಾವಯಾಮಿ" ಎಂದು ಭಾವಿಸಿ— "ಹ್ರೈಂ ಶಾಂತಿ ಕಲಾಯೈ ಹುಂ ಫಟ್" ಎಂಬ ಮಂತ್ರದಿಂದ ಪ್ರಾಣಾಯಾಮದ ೩ ಉದ್ಘಾತಗಳನ್ನು ಮಾಡಿ ವಾಯುವಿನ ಸ್ಪರ್ಶ-ಶಬ್ದಗಳನ್ನು ಹೊರಡಿಸಿ, ಅದನ್ನು ವಿರುದ್ಧ ಪೃಥಿವಿಯಿಂದ ತಿರಸ್ಕೃತವಾಗಿ ಭಾವಿಸಬೇಕು.

ಆ ಮೇಲೆ ನಡುಹುಬ್ಬಿನಿಂದ ಬ್ರಹ್ಮರಂಧ್ರದ ವರೆಗೆ ಆಕಾಶ ಮಂಡಲವನ್ನು ಕುರಿತು— ವೃತ್ತಾಕಾರಂ ಧೂಮ್ರ ವರ್ಣಂ ಆಕಾಶ ಸ್ವಭಾವಂ ಬಿಂದು ಶಕ್ತಿ ಲಾಂಛಿತಂ ಹ್ರೌ ಮಿತಿ ಅಸ್ತ್ರ ಮಂತ್ರೇಣ ಸಂಯುಕ್ತಂ ನಭೋ ಬೀಜೇನ ಅಧಿನಾಯಕೇನ ಈಶಾನೇನಾಧಿಷ್ಠಿತಂ ಸದಾಶಿವೇನ ಕಾರಣೇಶ್ವರೇಣಾನ್ವಿತಂ ಶಾಂತ್ಯತೀತಂ ಕಲಾಮಯಂ ಆಕಾಶಮಂಡಲಂ ಭಾವಯಾಮಿ" ಎಂದು ಭಾವಿಸಿ— "ಹ್ರೌಂ ಶ್ಯಾಂತ್ಯಾತೀತ ಕಲಾಯೈ ಹಂ ಫಟ್" ಎಂಬ ಮಂತ್ರದಿಂದ ಪ್ರಾಣಾಯಾಮದ ಓಂದು ಉದ್ಘಾತವನ್ನು ಮಾಡಿ ಆಕಾಶ ಶಬ್ದವನ್ನು ಹೊರಡಿಸಿ ಅನಿಮಿತ ಹಾಗೂ ಅಶುದ್ಧಿಯಾದ ತನ್ನ ಸ್ವರೂಪವನ್ನು ತ್ಯಾಜ್ಯ ಮಾಡಿ ವ್ಯಾಪಕ ಸಚ್ಛಿತ ಪರಮಾಕಾಶದಿಂದ ತಿರಸ್ಕೃತವಾಗಿ ಭಾವಿಸಬೇಕು.

# ಸೂಕ್ಷ್ಮಶರೀರ ಶುದ್ಧೀಕರಣ

ಮೇಲಿನಂತೆ ಸ್ಥೂಲ ಶರೀರವನ್ನು ಶುದ್ಧಗೊಳಿಸಿದ ನಂತರ ಶಬ್ದ, ರೂಪ, ರಸಗಂಧ, ಸ್ಪರ್ಶ, ಮನಸ್ಸು, ಅಹಂಕಾರ, ಬುದ್ಧಿ ಎಂಬ ಈ ಪುರ್ಯಷ್ಟಾಕಗಳ ಸ್ವರೂಪವಾದ ಸೂಕ್ಷ್ಮ ಶರೀರವನ್ನು ಶುದ್ಧಿಗೊಳಿಸಬೇಕು. ಇದಕ್ಕೆ ಹೃದಯ ನಡು, ದವಡೆ, ಕತ್ತು, ಹುಬ್ಬು, ಬ್ರಹ್ಮರಂಧ್ರ ಈ ಐದು ಸ್ಥಳಗಳಲ್ಲಿರುವ ಬ್ರಹ್ಮ ವಿಷ್ಣು, ರುದ್ರ, ಈಶ್ವರ, ಸದಾಶಿವರೆಂಬ ಕಾರಣ ಪುರುಷರಲ್ಲಿ—

"ಬ್ರಹ್ಮಾಣಿ ಶಬ್ದ ಸ್ಪರ್ಶೌಪ್ರವಿಲಾಪಯಾಮಿ"

ಹೀಗೆಂದು ಉಚ್ಚರಿಸಿ ಬ್ರಹ್ಮನಲ್ಲಿ ಶಬ್ದಸ್ಪರ್ಶಗಳನ್ನೂ ಹೀಗೆ ಸೂಕ್ಷ್ಮ ಶರೀರಾಂಶಗಳನ್ನೂ ಯೋಜಿಸಿ ಲಯಗೊಳಿಸಬೇಕಾಗುವದು. ಇದರಂತೆ

"ರಸಂ ವಿಷ್ಣಾ ಪ್ರವಿಲಾಪಯಾಮಿ"

ಎಂದು ವಿಷ್ಣುವಿನಲ್ಲಿ ರಸವನ್ನೂ--

"ರೂಪಂ ರುದ್ರೇಪ್ರಲಾಪಯಾಮಿ" ಹೀಗೆಂದು ರುದ್ರನಲ್ಲಿ ರೂಪವನ್ನೂ-

"ಬುದ್ಧ್ಯ ಹಂಕಾರಮೀಶ್ವರೇ ಪ್ರಲಾಪಯಾಮಿ" ಹೀಗೆಂದು ಈಶ್ವರನಲ್ಲಿ ಬುಧ್ಯಹಂಕಾರಗಳೆರಡನ್ನೂ-

"ಮನೋಗಂಧೌ ಸದಾಶಿವೇ ಪ್ರಲಾಪಯಾಮಿ" ಹೀಗೆಂದು ಸದಾಶಿವನಲ್ಲಿ ಮನಸ್ಸು, ಗಂಧಗಳನ್ನು ಸೂಕ್ಷ್ಮ ಶರೀರದ ಅಂಶಗಳೆನಿಸಿದ ಶಬ್ದರೂಪ ಮೊದಲಾದವುಗಳನ್ನು ಯೋಜಿಸಿ ಲಯಮಾಡಬೇಕು.

ಆ ಬಳಿಕ ತನ್ನ ದೇಹದೊಳಗಿನ ಪಾದಗಳ ಮೊದಲ್ಗೊಂಡು ಶಿರಸ್ಸಿನ ವರೆಗೂ ಆಯಾಯ ಸ್ಥಾನಗಳಲ್ಲಿ ಮೇಲೆ ಹೇಳಿದಂತೆ ರೂಪಾದಿಯಾಗಿರತಕ್ಕ ಪೃಥವ್ಯಾದಿ ಭೂತಗಳನ್ನು ಧ್ಯಾನಮಾಡಬೇಕು. ತದನಂತರ—

೧) ಪೃಥಿವೀಂ ಅಪ್ಸು ಪ್ರವಿಲಾಪಯಾಮಿ। ೨) ಅಪೋ ಗ್ನೌಪ್ರ ವಿಲಾಪಯಾಮಿ। ೩) ಅಗ್ನಿಂ ವಾಯೌ ಪ್ರವಿಲಾಪಯಾಮಿ। ೪) ವಾಯುಮಾಕಾಶೇ ಪ್ರವಿಲಾಪಯಾಮಿ। ೫) ಆಕಾಶಂ ಅಹಂಕಾರೇ ಪ್ರವಿಲಾಪಯಾಮಿ। ೬) ತಮಹಂಕಾರೆ ಮಹತ್ತತ್ವೇ ಪ್ರವಿಲಾಪಯಾಮಿ। ೭) ಮಹತ್ತತ್ವಂ ಪ್ರಕೃತಿ ಸ್ವರೂಪ ಮಾಯಾಯಾಂ ಪ್ರವಿಲಾಪಯಾಮಿ। ೮) ತಥಾ ವಿಧಾಂಚ ಮಾಯಾಯಂ ನಿತ್ಯ ಶುದ್ಧ ಬುದ್ಧ ಮುಕ್ತಸ್ವರೂಪೇನಾತ್ಮ ಪ್ರಕಾಶೇ ಸತ್ಯ ಜ್ಞಾನಾನಂದಲಕ್ಷಣೇ ಪರಮ ಕಾರಿಣೇ ಬ್ರಹ್ಮಿಣೇ ಪ್ರವಿಲಾಪಯಾಮಿ"

ಈ ಪ್ರಕಾರವಾಗಿ ಒಂದನ್ನು-ಒಂದರಲ್ಲಿ ಕೂಡಿಸಿ ಲಯಗೊಳಿಸಿದ ನಂತರ ದಿವ್ಯ ದೃಷ್ಟಿಯಿಂದ ವಟುವಿನನ್ನು ನೋಡಿ ತನ್ನೊಳಗೆ ಇರತಕ್ಕ ಚೈತನ್ಯವನ್ನೂ ಶಿರುಗ ವಟುವಿನಲ್ಲಿ ಸಂಯೋಗಗೊಳಿಸಬೇಕು. ಆ ಮೇಲೆ ವಟುವು ಅಥವಾ

ಶಿಷ್ಯನು ತಾನು ಪರಿಶುದ್ಧನಾದೆನೆಂದೂ, ಮುಕ್ತನಾದೆನೆಂದೂ, ಸಚ್ಚಿದಾನಂದ ಸ್ವರೂಪನಾದೆನೆಂದೂ ತಿಳಿಯಬೇಕು.

ಇಷ್ಟಾದ ತರುವಾಯ ಪುರೋಹಿತನು ವಟುವಿನ ಬ್ರಹ್ಮರಂಧ್ರ ಸ್ಥಾನದಲ್ಲಿರುವ ಸಹಸ್ರದಳ ಕಮಲದಲ್ಲಿರುವ ಪರಶಿವನೊಡನೆ ಸೇರಿದ್ದ ಜೀವಾತ್ಮನನ್ನು "ಸೋಹಂ"ಎಂಬ ಅಂಕುಶ ಮುದ್ರೆಯಿಂದ ಸುಷುಮ್ನನಾಡೀ ಮಾರ್ಗದಿಂದ ತಂದು ಶಿಷ್ಯ ಹೃದಯದಲ್ಲಿ ಸ್ಥಾಪಿಸಬೇಕು.

## ಶಿಷ್ಯನ ದೇಹದಲ್ಲಿ ಜೀವಾತ್ಮನನ್ನು ಸ್ಥಾಪಿಸುವದು

### ( ನ್ಯಾಸಗೊಳಿಸುವ ಕ್ರಮ )

"ಓಂ ಅಸ್ಯಶ್ರೀ ಪ್ರಾಣ ಪ್ರತಿಷ್ಠಾಪನ ಮಂತ್ರಸ್ಯ ಬ್ರಹ್ಮ ವಿಷ್ಣು ಮಹೇಶ್ವರಾಋಷಯಃ । 'ಎಂದು ಶಿರಸ್ಸಿನಲ್ಲಿಯೂ—

"ಋಗ್ಯಜುಸ್ಸಾಮಾಥರ್ವಣ ಶ್ಛಂದಾಂಶಿ" ಎಂದು ಮುಖದಲ್ಲಿಯೂ—

"ಸಕಲ ಜಗತ್ಸೃಷ್ಟಿಸ್ಥಿತಿ ಸಂಹಾರಕಾರಿಣೀ ಪ್ರಾಣ ಶಕ್ತಿರ್ದೇವತಾ" ಎಂದು ಹೃದಯದಲ್ಲೂ-

"ಆಂ ಬೀಜಂ"ಎಂದು ಗುಹ್ಯ ಸ್ಥಾನದಲ್ಲಿಯೂ-

"ಹ್ರೀಂ ಶಕ್ತಿಃ"ಎಂದು ಪಾದಗಳಲ್ಲಿಯೂ-

"ಹ್ರೂಂ ಕೀಲಕಂ ಸರ್ವಾಂಗೇ ಪ್ರಾಣಪ್ರತಿಷ್ಠಾನ್ಯಾಸೇ ವಿನಿಯೋಗಃ" ಹೀಗೆಂದು ಸರ್ವ ದೇಹದಲ್ಲಿ ನ್ಯಾಸ ಮಾಡಬೇಕು. ತದನಂತರ-

"ಓಂ ಪೃಥಿವ್ಯಪ್ತೇಜೋ ವಾಯ್ವಾಕಾಶಾತ್ಮನೇ ಅಂಗುಷ್ಠಾಭ್ಯಾಂ ನಮಃ।
ನಂ ಶಬ್ದಸ್ಪರ್ಶರೂಪ ರಸ ಗಂಧಾತ್ಮನೇ ತರ್ಜನೀಭ್ಯಾಂ ನಮಃ ।
ಮಂ ಶ್ರೋತ್ರತ್ವಕ್ಚಕ್ಷುರ್ಜಿಹ್ವಾ ಘ್ರಾಣಾತ್ಮನೇ ಮಧ್ಯಮಾಭ್ಯಾಂನಮಃ ।
ಶಿಂ ವಾಕ್ಪಾಣಿ ಪಾದಪಾಯೂಪ ಸ್ಥಾತ್ಮನೇ-ಅನಾಮಿಕಾಭ್ಯಾಂನಮಃ।
ವಾಂ ಮನೋಬುದ್ಧಿ ಚಿತ್ತಾಹಂಕಾರ ಜ್ಞಾನಾತ್ಮನೇ-ಕನಿಷ್ಠಿಕಾಭ್ಯಾಂ ನಮಃ ।

ಯಂ ಪ್ರಾಣಪಾನ ವ್ಯಾನೋದಾನ ಸಮಾನ ವ್ಯಕ್ತದಾನ ಗಮನ—
ನಿಸರ್ಗನಂದಾತ್ಮನೇ-ಕರತಲ ಪೃಷ್ಠಾಭ್ಯಾಂ ನಮಃ ।

ಈ ಪ್ರಕಾರವಾಗಿ ಕರನ್ಯಾಸವನ್ನು ಮಾಡಿದ ನಂತರ ಇದೇ ಪ್ರಕಾರವಾಗಿ ಹೃದಯಾದಿ ಷಡಂಗ ನ್ಯಾಸವನ್ನು ಮಾಡಬೇಕು. ಆ ಬಳಿಕ ಧ್ಯಾನವನ್ನು ಮಾಡಬೇಕು.

## ಪ್ರಾಣಶಕ್ತಿ ಧ್ಯಾನ

ರಕ್ತಾಂಭೋದಿಸ್ಥಪೋತೋಲ್ಲ ಸದರುಣ ಸರೋಜಾಧಿರೂಢಾಕ ರಾಜ್ಜೈಃ ।
ಪಾಶಂ ಕೋದಂಡಮಿಕ್ಷೋದ್ಭವ ಮಲಗುಣಮಪ್ಯಂಕುಶಂ ಪಂಚಬಾಣಾನ್ ॥
ಬಿಭ್ರಾಣಾಽಸೃಕ್ಕಪಾಲಂ ತ್ರಿನಯರ್ನಲನಿತಾ ತೀನವ ಕ್ಷೋರುಹಾಢ್ಯಾ ।
ದೇವೀ ಬಾಲಾರ್ಕವರ್ಣಾ ಭವತು ಸುಖಕರೀ ಪ್ರಾಣಶಕ್ತಿಃ ಪರಾನಃ ॥

ಹೀಗೆಂದು ಧ್ಯಾನ ಮಾಡಿದ ತರುವಾಯ–

## ಪ್ರಾಣ ಪ್ರತಿಷ್ಠಾಪನೆ

"ಶಿಷ್ಯಸ್ಯ ಪ್ರಾಣಾ ಇಹ ಪ್ರಾಣಾಃ ಶಿಷ್ಯಸ್ಯ ಜೀವ ಇಹಸ್ಥಿತಂ ಶಿಷ್ಯಸ್ಯ ಸರ್ವೇಂದ್ರಿಯಾಣಿ ಕಾಯ ವಾಙ್ಮನಶ್ಚಕ್ಷು ಜಿಹ್ವಾಘ್ರಾಣ ಪ್ರಾ ಇಹೈ ವಾಗತ್ಯ ಸ್ವಸ್ತಯೇ ಸುಖಂ ಚಿರಂ ತಿಷ್ಠಂತು ಸ್ವಹಾ" ಹೀಗೆಂದು ಪ್ರಾಣ ಪ್ರತಿಷ್ಠೆಯನ್ನು ಮಾಡಬೇಕು. ತದನಂತರ ಆಚಾರ್ಯನು ಶಿಷ್ಯನ ಅವಯವಗ ಳಲ್ಲಿ ದಂಡ ಭಂಗಿನ್ಯಾಸವನ್ನೂ, ಷಡಧ್ವನ್ಯಾಸನ್ನೂ ಮತ್ತು ಅಶ್ಯತ್ರಿಂಶತ್ಕಲಾನ್ಯಾ ಸವನ್ನೂ ಮಾಡಬೇಕು. (೩೮ ಕಲಾನ್ಯಾಸ ಮುಂದೆ ಬರುವದು.)

## ಶಿಷ್ಯಾಂಗ ದಂಡಭಂಗಿನ್ಯಾಸ ಕ್ರಮ

ಆಚಾರ್ಯನು ಮುಷ್ಟಿಯನ್ನು ಕಟ್ಟಿ ಹೆಬ್ಬೆರಳಿನ ತುದಿಯನ್ನು ಶಿಷ್ಯನ ಶಿರ ಸ್ಸಿಗೆ ಮುಟ್ಟಿಸಿ "ಈಶಾನಃ ಸರ್ವವಿದ್ಯಾನಾಂ" ಎಂಬ ಈಶಾನ್ಯ ಮಂತ್ರವನ್ನು ಅನ್ನಬೇಕು. ಇದರಂತೆ "ತತ್ಪುರುಷಾಯ ವಿದ್ಮಹೇ" ಎಂಬ ತತ್ಪುರುಷ ಮಂತ್ರ ದಿಂದ ತರ್ಜನೀ ಅಂಗುಷ್ಠಗಳನ್ನು ಕೂಡಿಸಿ ಮುಖವನ್ನು ಮುಟ್ಟಬೇಕು. "ಅಘೋರಭ್ಯ" ಎಂಬ ಮಂತ್ರದಿಂದ ಮಧ್ಯ ಹಾಗೂ ಅಂಗುಷ್ಠ ಬೆರಳೆರಡನ್ನೂ ಕೂಡಿಸಿ ಹೃದಯುವನ್ನು ಮುಟ್ಟಬೇಕು. "ವಾಮದೇವಾಯ ನಮಃ" ಎಂಬ ವಾಮದೇವ ಮಂತ್ರದಿಂದ ಅನಾಮಿಕ ಹಾಗೂ ಅಂಗುಷ್ಠ ಬೆರಳನ್ನು ಕೂಡಿಸಿ ಗುಹ್ಯ ಪ್ರದೇಶವನ್ನು ಮುಟ್ಟಬೇಕು. "ಸದ್ಯೋಜಾತಂ ಪ್ರಪದ್ಯಾಮಿ" ಎಂಬ ಸದ್ಯೋಜಾತ ಮಂತ್ರದಿಂದ ಕನಿಷ್ಟ ಹಾಗೂ ಅಂಗುಷ್ಟ ಬೆರಳುಗಳಿಂದ ಪಾದಗ ಳನ್ನು ಮುಟ್ಟಬೇಕು.

## ಶಿಷ್ಯಾಂಗ ಷಡಧ್ವನ್ಯಾಸ ಕ್ರಮ

ಆಚಾರ್ಯನು ಸರ್ವ ಬೆರಳಿನಿಂದ "ಓಂ ಅಂ ಆತ್ಮತತ್ವಾಯ ನಮಃ" ಎಂದು ಹೃದಯದಲ್ಲಿಯೂ, "ಓಂ ಉಂ ಅಂತರಾತ್ಮತತ್ವಾಯ ನಮಃ" ಎಂದು ಮುಖದ ಲ್ಲಿಯೂ, "ಓಂ ಮಂ ಪರಮಾತ್ಮ ತತ್ವಾಯ ನಮಃ"ಎಂದು ಶಿರಸ್ಸಿನಲ್ಲಿಯೂ, ನ್ಯಾಸವನ್ನು ಮಾಡಬೇಕು. ಅಷ್ಟತ್ರಿಂಶತ್ಕಾಲಾ ನ್ಯಾಸವನ್ನು ಮುಂದೆ ಹೇಳಿದೆ ಆದರಂತೆ ಮಾಡಬೇಕು.

## ಕಲಶಾಭಿಷೇಕ ದೀಕ್ಷಾ

ಆಚಾರ್ಯನು ಪ್ರಾಣಾಯಾಮವನ್ನು ಮಾಡಿ-

"ಏವಂ ಗುಣ ವಿಶಿಷ್ಟಾಯಾಂ ಶುಭ ಪುಣ್ಯ ತಿಥೌ ಅಸ್ಯ ಕುಮಾರಸ್ಯ ಕಲಶಾಭಿಷೇಕಾಖ್ಯ ದೀಕ್ಷಾಂ ಕರಿಷ್ಯೇ"ಎಂದು ಸಂಕಲ್ಪ ಮಾಡಿ-

ನಾಲ್ವರು ಋತ್ವಿಜರು ಮತ್ತು ತಾನು ಸಹ ಮೊದಲು ಪೂಜಿಸಿದ ಅವರವರ ಕಲಶಗಳನ್ನು ತೆಗೆದುಕೊಂಡು ಅದರಲ್ಲಿರತಕ್ಕ ತೀರ್ಥೋದಕದಿಂದ ಶಿಷ್ಯನ ಮಸ್ತಕ, ಮುಖ, ಹೃದಯ, ಗುಹ್ಯ, ಪಾದ ಈ ಐದೂ ಸ್ಥಾನಗಳಲ್ಲಿ ಈಶಾನ್ಯ ಮೊದಲಾದ ಪಂಚಬ್ರಹ್ಮ ಮಂತ್ರದಿಂದ ಅನುಕ್ರಮವಾಗಿ ಸಂಪ್ರೋಕ್ಷಿಸಬೇಕು. ತದನಂತರ ಅವುಗಳನ್ನು ಮೊದಲ ಜಾಗೆಯಲ್ಲಿಡಬೇಕು. ಪುನಃ ಹಾಗೆಯೇ ತೆಗೆದುಕೊಂಡು ಮತ್ತೆರಡು ಸಾರೆ ಪ್ರೋಕ್ಷಣೆ ಮಾಡುವದು. ತದ ನಂತರ ವಿಭೂತಿ ಧಾರಣ ಮಾಡಬೇಕು.

## ಭೂತಿಪಟ್ಟ ದೀಕ್ಷಾ

ಆಚಾರ್ಯನು ಪ್ರಾಣಾಯಾಮವನ್ನು ಮಾಡಿ ದೇಶ ಕಾಲಾದಿಗಳನ್ನುಚ್ಚರಿಸಿ-

"ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭ ಪುಣ್ಯ ತಿಥೌ ಅಸ್ಯ ಕುಮಾರಸ್ಯ ಅನಾದಿ ಮಲಸಂಹರಣಾರ್ಥಂ ಭೂತಿಪಟ್ಟಾಖ್ಯ ದೀಕ್ಷಾಂ ಕರಿಷ್ಯೇ"

ಹೀಗೆಂದು ಸಂಕಲ್ಪ ಮಾಡಿ ಕಾಲಾವಕಾಶವನ್ನು ನೋಡಿಕೊಂಡು ಭಸ್ಮವನ್ನು ವಿಧಿಯುಕ್ತವಾಗಿ ಪೂಜೆಯನ್ನು ಮಾಡಬೇಕು. ಆ ಮೇಲೆ-

"ಓಂ ಹ್ರಃ ಯಂ ಈಶಾನಾಯನಮಃ" ಎಂಬ ಈಶಾನ್ಯ ಮಂತ್ರದಿಂದ ೫ ಸಾರೆ ಶಿರಸ್ಸಿನಲ್ಲಿಯೂ ಹಾಗೂ ಇದರಂತೆ "ಓಂ ಹ್ರೌಂ ವಾಂ ತತ್ಪುರುಷಾಯನಮಃ" ಎಂಬ ತತ್ಪುರುಷ ಮಂತ್ರದಿಂದ ೪ ಸಾರೆ ಮುಖದಲ್ಲಿಯೂ, "ಓಂ ಹ್ರೈಂ ಶಿಂ ಅಘೋರಾಯನಮಃ" ಎಂಬ ಅಘೋರ ಮಂತ್ರದಿಂಗ ೮ ಸಾರೆ ಹೃದಯದಲ್ಲೂ, "ಓಂ ಹ್ರುಂ ಮಂ ವಾಮದೇವಾಯನಮಃ" ಎಂಬ ವಾಮದೇವ ಮಂತ್ರದಿಂದ ೧೩ ಸಾರೆ ಗುಹ್ಯ ಪ್ರದೇಶದಲ್ಲೂ, "ಓಂ ಹ್ರೀಂ ನಂ ಸದ್ಯೋಜಾತಾಯ ನಮಃ" ಎಂಬ ಸದ್ಯೋಜಾತ ಮಂತ್ರದಿಂದ ೮ ಸಾರೆ ತೊಡೆಯಿಂದ ಪಾದದ ವರೆಗೂ, "ಓಂ" ಎಂಬ ಪ್ರಣವಾಕ್ಷರದಿಂದ ಸರ್ವಾಂಗದಲ್ಲಿಯೂ, ಭಸ್ಮದಿಂದ ಸ್ನಾನ ಉದ್ಧೂಳನವನ್ನು ಮಾಡಬೇಕು. ತದನಂತರ ಭಸ್ಮವನ್ನು ಜಲದಿಂದ ಮಿಶ್ರ ಮಾಡಿ—

"ತ್ರ್ಯಾಯುಷಂ ಜಮದಗ್ನೇಃ ಕಶ್ಯಪಸ್ಯತ್ರ್ಯಾಯುಷಂ ।<br>
ಅಗಸ್ತ್ಯಸ್ಯತ್ರ್ಯಾಯುಷಂ ಯದ್ದೇವಾನಾಂ ತ್ರ್ಯಾಯುಷಂ<br>
ತನ್ಮೇ ಅಸ್ತುತ್ರ್ಯಾಯುಷಂ"

ಎಂಬ ಮಂತ್ರವನ್ನು ಹೇಳಿ ಮುಂದೆ ಬರೆದಿರುವ ಹದಿನೈದು ಸ್ಥಾನಗಳಲ್ಲಿ ತ್ರಿಪುಂಡಧಾರಣವನ್ನು ಮಾಡಬೇಕು.

ಓಂ ಶಿವಾಯನಮಃ (ಶಿರಸ್ಸಿನಲ್ಲಿ ಧರಿಸುವದು)
ಓಂ ಮಹೇಶ್ವರಾಯನಮಃ (ಹಣೆಯಲ್ಲಿ ಧರಿಸುವದು)
ಓಂ ರುದ್ರಾಯನಮಃ (ಎರಡೂ ಕಿವಿಗಳಲ್ಲಿ ಧರಿಸುವದು)
ಓಂ ಶ್ರೀಕಂಠಾಯನಮಃ (ಕಂಠದಲ್ಲಿ ಧರಿಸುವದು)
ಓಂ ಶಂಭುವೇನಮಃ (ಎರಡು ಭುಜಗಳಲ್ಲಿ ಧರಿಸುವದು)
ಓಂ ಈಶ್ವರಾಯನಮಃ (ಹೃದಯದಲ್ಲಿ ಧರಿಸುವದು)
ಓಂ ಪಶುಪತೇಯನಮಃ (ಬೆನ್ನಿನಲ್ಲಿ ಧರಿಸುವದು)
ಓಂ ಶಂಕರಾಯನಮಃ (ಎರಡೂ ಮೊಳಕೈಯಲ್ಲಿ ಧರಿಸುವದು)
ಓಂ ವೃಷಧ್ವಜಾಯನಮಃ (ಹೆಗಲಿನಲ್ಲಿ ಧರಿಸುವದು)
ಓಂ ಪರಮಾತ್ಮನೇನಮಃ (ಎರಡೂ ಮುಂಗೈಗಳಲ್ಲಿ ಧರಿಸುವದು)

ಹೀಗೆ ಭಸ್ಮಧಾರಣ ಮಾಡಿದ ತರುವಾಯ ಶಿಷ್ಯನಿಗೆ ಪರಿಪೂತವಾದ ಘಟ್ಟಿಬನ್ನು ಕೊಡಬೇಕು.

## ರುದ್ರಾಕ್ಷ ಧಾರಣ

ವಿಭೂತಿ ಧಾರಣದ ತರುವಾಯ ಆಚಾರ್ಯನು ರುದ್ರಾಕ್ಷಿಗಳನ್ನು ತೆಗೆದು ಕೊಂಡು ಪೂಜೆ ಮಾಡಿ—

"ರುದ್ರಾಕ್ಷ ವೃಕ್ಷ ಬೀಜಾಯ ಭೂತಿಸಂಭೂತಿಹೇತುವೆ । ನೇತ್ರಾತ್ರ ಯಾಯ ರುದ್ರಾಯ ನಮೋ ಲೋಕಹಿತಾರ್ಥನೇ"

ಎಂಬ ಮಂತ್ರದಿಂದ ನಮಸ್ಕಾರ ಮಾಡಿ ಮುಂದೆ ಹೇಳಿದ ಸ್ಥಾನಗಳಲ್ಲಿ ರುದ್ರಾಕ್ಷಿಗಳನ್ನು ಧರಿಸಬೇಕು.

| ರುದ್ರಾಕ್ಷಿ ಸಂಖ್ಯೆ | ಸ್ಥಾನಗಳು | ಮಂತ್ರಗಳು |
|---|---|---|
| ೧ | ಶಿಖೆಯಲ್ಲಿ | ಓಂ ಶ್ರೀಸದಾಶಿವಾಯನಮಃ |
| ೩ | ಶಿರಸ್ಸಿನಲ್ಲಿ | ಓಂ ವಹ್ನಿ ಸೂರ್ಯಸೋಮಾಧಿಪಾಯನಮಃ |
| ೩೬ | ಮಸ್ತಕದಲ್ಲಿ | ಓಂ ಷಟ್ತ್ರಿಂಶತತ್ತ್ವಾತ್ಮನೇನಮಃ |
| ೬ | ಬಲಗಿವಿಯಲ್ಲಿ | ಓಂ ಷಡ್ಬ್ರಹ್ಮಣೇನಮಃ |
| ೬ | ಎಡಗಿವಿಯಲ್ಲಿ | ಓಂ ಅಷ್ಟಮೂರ್ತ್ಯಾತ್ಮನೇನಮಃ |
| ೩೨ | ಕಂಠದಲ್ಲಿ | ಓಂ ತ್ರಿಯಂಬಕ ಕಲಾತ್ಮನೇನಮಃ |
| ೫೦ | ಎದೆಯ ಮೇಲೆ | ಓಂ ಶ್ರೀಕಂಠಾದಿಮೂರ್ತ್ಯಾತ್ಮನೇನಮಃ |

| | | |
|---|---|---|
| ೧೬ | ಬಲತೋಳಿನಲ್ಲಿ | ಓಂ ಸುಖಾಸನಾದಿ ಷೋಡಶಮೂರ್ತ್ಯಾತ್ಮಕಾಯ ಶ್ರೀಕಂಠಾಯನಮಃ |
| ೧೬ | ಎಡತೋಳಿನಲ್ಲಿ | ಓಂ ಸೋಮಕಲಾತ್ಮಕಾಯ ಶ್ರೀ ಸೋಮನಾಥಾಯನಮಃ |
| ೧೭ | ಬಲಮುಂಗೈಯಲ್ಲಿ | ಓಂ ದ್ವಾದಶಾದಿತ್ಯಾತ್ಮನೇ ಶ್ರೀ ಮಹಾದೇವಾಯನಮಃ |
| ೧೭ | ಎಡಮುಂಗೈಯಲ್ಲಿ | ಓಂ ಕೇಶವಾದಿ ಮೂರ್ತ್ಯಧಿಪಾಯ ಶ್ರೀಮದುಮಾಪತಯೇನಮಃ |
| ೧೦೮ | ಯಜ್ಞೋಪವೀತ | ಓಂ ಶತರುದ್ರವಿದ್ಯೇಶ್ವರಾತ್ಮನೇ ಶ್ರೀ ವಿಶ್ವೇಶಾಯನಮಃ |

ಈ ಪ್ರಕಾರವಾಗಿ ರುದ್ರಾಕ್ಷಿ ಧಾರಣ ಮಾಡಬೇಕು. ವೀರಶೈವರು ಮಾತ್ರ ಹೋಮ ಹವನಾದಿಗಳನ್ನು ಮಾಡಕೂಡದು.

## ಆಯುತ್ತ ದೀಕ್ಷಾ

ಆಚಾರ್ಯನು ತನ್ನ ಬಲಭಾಗದಲ್ಲಿ ವಟುವನ್ನು ಉತ್ತರಕ್ಕೆ ಮುಖ ಮಾಡಿ ಕೂಡ್ರಿಸಿಕೊಂಡು ಪ್ರಾಣಾಯಾಮವನ್ನು ಮಾಡಿ ದೇಶ ಕಾಲಾದಿಗಳನ್ನುಚ್ಚರಿಸಿ-

"ಏವಂ ಗುಣ ವಿಶೇಷಣ ವಿಶಿಷ್ಟಾಯಾಂ ಅಸ್ಯಾಂ ಶುಭ ತಿಥೌ ಅಸ್ಯ ಕುಮಾರಸ್ಯ ಆಯುತ್ತಾಖ್ಯ ದೀಕ್ಷಾಂ ಕರಿಷ್ಯೇ"ಎಂದು ಸಂಕಲ್ಪ ಮಾಡಿ ಪಾತ್ರೆಯಲ್ಲಿರಿಸಿದ ಸರ್ವ ಮಂತ್ರನ್ಯಾಸದಿಂದ ಪೂರಿತವಾದ ಶಿವಲಿಂಗವನ್ನು ತೆಗೆದುಕೊಂಡು, ಅದನ್ನು ಎಡಹಸ್ತದೊಳಿರಿಸಿ ಪೂಜೆಯನ್ನು ಮಾಡಿ, ಹೊಸ ವಸ್ತ್ರವನ್ನು ಧರಿಸಿ, ಅನಂತರ ವಟುವಿನ ಬದ್ಧಾಂಜಲಿಯನ್ನೂ(ಹಸ್ತಗಳನ್ನೂ)ಹಾಗೂ ಮಸ್ತಕವನ್ನೂ ಪೂಜಿಸಿ ಗಾಯತ್ರೀ ಮಂತ್ರದಿಂದ ಮೂರು ಸಲ ಅಭಿಮಂತ್ರಿಸಿ ಆ ಸ್ಥಾನದಲ್ಲಿ-

"ನೀಲತೋಯದ ಮಧ್ಯಸ್ಥಾ ವಿದ್ಯುಲ್ಲೇಖೇವ ಭಾಸ್ವರಾ ।
ನೀವಾರ ಶೂಕ ವತ್ತನ್ವೀ ಪೀತಾಭಾಸ್ವತ್ಯಣೂಪಮಾ ॥
ತಸ್ಯಶಿಖಾಯಾಮಧ್ಯೇ ಪರಮಾತ್ಮಾ ವ್ಯವಸ್ಥಿತಃ ।
ಸಬ್ರಹ್ಮಾ ಸಶಿವಃ ಸಹರಿಃ ಸೇಂದ್ರಃ ಸೋಕ್ಷರಃ ಪರಮಃಸ್ವರಾಟ್॥

ಹೀಗೆಂದು ಜ್ಯೋತಿ ಸ್ವರೂಪವಾದಂಥ ಚಿತ್ಕಲೆಯನ್ನು ಧ್ಯಾನ ಮಾಡಿ ಅದನ್ನು ಮಾನಸಿಕ ಉಪಚಾರಗಳಿಂದ ಪೂಜಿಸಿ—

"ಭಗವಾನ್ ಆವಾಹಿತೋಭವ, ಸ್ಥಾಪಿತೋಭವ, ಸನ್ನಿಹಿತೋ ಭವ ।
ಸನ್ನಿರುದ್ಧೋಭವ, ಸಮ್ಮುಖೋಭವ, ಪಾರ್ಥಿವೋಭವ ॥

ಹೀಗೆಂದು ಷಣ್ಮುದ್ರೆಗಳನ್ನು ತೋರಿಸಬೇಕು. ತದನಂತರ ಬಲಹಸ್ತದಲ್ಲಿ ಗಂಧದಿಂದ ಮಂಡಲವನ್ನು ಬರೆದು, ಅಂಗುಷ್ಠ ಮೊದಲ್ಗೊಂಡು ಐದೂ ಬೆರಳುಗಳಲ್ಲಿ ನಕಾರಾದಿಯಾದಿ ಪಂಚಾಕ್ಷರಗಳನ್ನೂ ಮಧ್ಯದಲ್ಲಿ ಓಂಕಾರವನ್ನು ಬರೆದುಕೊಂಡು ಅಲ್ಲಿ ಸದ್ಯೋಜಾತಾದಿಪಂಚಬ್ರಹ್ಮ ಮೂರ್ತಿಳಗಳನ್ನು ಆವ್ಹಾನಮಾಡಿ ಪೂಜಿಸಿ—

"ಯೋ ವೇದಾದೌಸ್ವರಃ ಪ್ರೋಕ್ತೋ ವೇದಾಂತೇಚ ಪ್ರತಿಷ್ಠಿತಃ |
ತಸ್ಯ ಪ್ರಕೃತಿ ಲೀನಸ್ಯಯಃ ಪರಸ್ಯ ಮಹೇಶ್ವರಃ ||

ಈ ಪ್ರಕಾರವಾಗಿ "ಓಂ"ಕಾರ ಪ್ರಣಮವನ್ನು ಧ್ಯಾನಮಾಡಬೇಕು. ತದನಂತರ—

"ಅಯಂ ಮೇಹಸ್ತೋ ಭಗವಾನ ಯಮ್ಮೋ ಭಗವತ್ತರಃ |
ಅಯಮ್ಮೋ ವಿಶ್ವಭೇಷಜೋಽಯಂ ಶಿವಾಭಿಮಾರ್ಶನಃ ||

ಎಂಬ ಮಂತ್ರವನ್ನು ಹೇಳಿ ಈ ಹಸ್ತವು ಮಾಯಾಪಾಶ ನಿವೃತ್ತಕವಾಗಿ ಶುಭವನ್ನುಂಟುಮಾಡಬೇಕೆಂದು ಆ ಹಸ್ತವನ್ನು ಶಿವನಂತೆ ತೇಜೋಮಯವಾದುದೆಂದು ಭಾವಿಸಿಶಿವಮಂತ್ರವನ್ನು ಪಠಿಸುತ್ತಾ ಶಿಷ್ಯನಮಸ್ತಕದ ಮೇಲೆ ದರ್ಭೆ ಸಹಿತವಾಗಿ ಪುಷ್ಪಾದಿಗಳಿಂದ ಆ ಹಸ್ತವನ್ನಿಟ್ಟು, ಆ ಶಿರಸ್ಸು ಶಿವಾಸನವೆಂದು ತಿಳಿದು ಅಲ್ಲಿ ನಾದಬಿಂದು ಯುಕ್ತವಾದ ಚಿತ್ಪೀಠವನ್ನು ಭಾವಿಸಬೇಕು. ತದನಂತರ ಆ ಚಿತ್ಪೀಠದಲ್ಲಿ—

"ಜ್ವಲತ್ಕಾಲಾನಲಾಭಾಸಾತ ಟಿತ್ಕೋಟಿ ಸಮಪ್ರಭಾಃ |
ತಸ್ಯೋರ್ಧ್ವಂಚ ಶಿಖಾಸೂಕ್ಷ್ಮಾ ಚಿದ್ರೂಪಾಪರಮಾಕಲಾ ||
ಯಥಾಕಲಾ ತಥಾ ಭಾವೋ ಯಥಾ ಭಾವಸ್ತಥಾ ಮನಃ |
ಯಥಾಮನ ಸ್ತಥಾ ದೃಷ್ಟಿರ್ಯಥಾ ದೃಷ್ಟಿಸ್ತಥಾ ಸ್ಥಲಂ ||
ಸಕಲಾಪರಮಾ ಸೂಕ್ಷ್ಮಾ ತತ್ವಾನಾಂ ಬೋಧಿನೀಪರಾ |"

ಈ ಮಂತ್ರದಿಂದ ಶಿವನನ್ನು ಧ್ಯಾನಮಾಡಿ ಮಾನಸಿಕೋಪಚಾರಗಳಿಂದ ಪೂಜಿಸಿ ಶಿವ ತೇಜೋಮಯವಾದ ಆ ಹಸ್ತದಿಂದ ವಟುವಿನ ಸರ್ವ ದೇಹದಲ್ಲಿ ಸವರಬೇಕು. ತದನಂತರ ವಟುವಿನ ಮಸ್ತಕದಲ್ಲಿದ್ದಂಥ ಶಿವ ಕಲೆಯನ್ನು ಶಿವಲಿಂಗದಲ್ಲಿ ತುಂಬಬೇಕು.

## ಶಿವಲಿಂಗದಲ್ಲಿ ಶಿವಕಲೆಯನ್ನು ತುಂಬುವ ಕ್ರಮ

ಆಚಾರ್ಯನು ತನ್ನ ಬೊಗಸೆಯಲ್ಲಿ ಪುಷ್ಪಾಕ್ಷತೆಗಳನ್ನಿಟ್ಟುಕೊಂಡು—

"ಸಓಂಕಾರೋಯ ಓಂಕಾರಸ್ಸ ಪ್ರಣವೋಯಃ ಪ್ರಣವಸ್ಸ ಸರ್ವವ್ಯಾಪೀ ಸೋನಂತೋಯೋನಂತಃ | ತತ್ತಾರಂ ಯತ್ತಾರಂ ತತ್ಸೂಕ್ಷ್ಮಂ ತಚ್ಛುಕ್ಲಂ

ಯಚ್ಛುಕ್ಲಂ ತದ್ವೈದ್ಯುತಂ ತತ್ಪರಬ್ರಹ್ಮಸ್ಸ ಏವಸ್ಸ ಏಕೋ, ರುದ್ರಸ್ಸ ಈಶ್ವರಸ್ಸ ಭಗವಾಂತ್ಸ ಮಹೇಶ್ವರಸ್ಸ ಮಹಾದೇವಃ॥''

ಎಂಬ ಮಂತ್ರವನ್ನು ಹೇಳುತ್ತಾ ವಟುವಿನ ಬ್ರಹ್ಮರಂಧ್ರದಲ್ಲಿದ್ದ ಸಹಸ್ರದಲ ಕಮಲದಲ್ಲಿ ವಿಹರಿಸುತ್ತಿರುವ, ಕೋಟಿ ಸೂರ್ಯ ಪ್ರಕಾಶ ಸಮಾನವಾಗಿರುವ ಒಳ್ಳೇ ತೇಜಃಪುಂಜವಾದ ಅತಿ ಸೂಕ್ಷ್ಮವಾದ ಚಿತ್ಕಲೆಯನ್ನೂ ಭಾವ ಮನೋದೃಷ್ಟಿ ಮೂಲಕವಾಗಿ ಪ್ರತ್ಯಕ್ಷ ಮಾಡಿ—

ನೀಲತೋಯದ ಮಧ್ಯಸ್ಥಾ ವಿದ್ಯುಲ್ಲೇಖೇವ ಭಾಸ್ವದಾ ।
ನೀ ವಾರಶೂಕವತ್ತನ್ವೀ ಪೀತಾಭಾಸ್ವತ್ಯಣೂಪಮಾ ॥
ತಸ್ಯಾಃ ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ ।
ಸಬ್ರಹ್ಮಾ ಸಶಿವಃ ಸಹರಿಃ ಸೇಂದ್ರಃ ಸೋಕ್ಷರಃ ಪರಮ ಸ್ವರಾಟ್ ॥

ಎಂಬ ಮಂತ್ರವನ್ನುಚ್ಚರಿಸುತ್ತ ದಿವ್ಯ ಪರಶಿವ ಮೂರ್ತಿಯನ್ನು ಸುಷುಮ್ನಾನಾಡೀ ಮಾರ್ಗವಾಗಿ ಹೊರಗೆ ಹೊರಡಿಸಿ ಪುಷ್ಪಾಕ್ಷತೆಗಳಿಂದ ಕೂಡಿದ ತನ್ನ ಬೊಗಸೆಯಲ್ಲಿ ತಂದು ಪಂಚಾಕ್ಷರೀ ಮಂತ್ರದಿಂದ—

''ಸರ್ವಾಂತರ್ಯಾಮಿಣಂ ಲೋಕಸನುಗ್ರಹಾಯ ಗೃಹೀತವಿಗ್ರಹಂ
ಜ್ಯೋತಿರ್ಮಯಂ ಸರ್ವ ಮಂಗಳಾತ್ಮಕಂ ಭಗವಂತಮಾವಾಹಯಾಮಿ''

ಎಂದು ಶಿವಕಲೆಯನ್ನು ''ಕ್ರೌಂ'' ಎಂಬ ಅಂಕುಶ ಮುದ್ರೆಯಿಂದ ಆಕರ್ಷಣೆ ಮಾಡಿ ಆವ್ಹಾನ ಮೂಲಕ ಶಿವಲಿಂಗದಲ್ಲಿ ಸ್ಥಾಪಿಸಬೇಕು. ತದನಂತರ ಲಿಂಗದ ಶಿವಕಲೆಯನ್ನು ಶಿಷ್ಯನ ಜೀವಕಲಾಸ್ವರೂಪವಾದ ಪ್ರಾಣದಲ್ಲಿ ಪ್ರಸ್ಥಾಪಿಸಿ ಸಾಮರಸ್ಯಗೊಳಿಸುವದಕ್ಕೋಸ್ಕರವಾಗಿ ''ಆವಾಹಿಲೋಭವ........ಪ್ರಾರ್ಥಿತೋಭವ'' ಎಂದು ಆವ್ಹಾನ ಮಾಡಿ, ಷಣ್ಮುದ್ರೆಗಳನ್ನು ತೋರಿಸಿ, ಆ ಶಿವಲಿಂಗವನ್ನು ಮುಟ್ಟಿ ೧೦೮ ಸಾರೆ ಮೂಲ ಪಂಚಾಕ್ಷರೀ ಮಂತ್ರವನ್ನು ಜಪಿಸಿ ಹಸ್ತವನ್ನು ಚಾಚಿ ''ಭಗವಾನ್ ಪರಶಿವ ನಿತ್ಯ ಮತ್ರಸ್ಥಿತೋಭವ'' ಎಂದು ಪೂಜಿಸಬೇಕು. ಆ ಬಳಿಕ ಶಿವಲಿಂಗಕ್ಕೂ ವಟುವಿಗೂ ಮಧ್ಯದಲ್ಲಿ ಒಂದು ಪಟವನ್ನು ಹಿಡಿಸಿ ಮಂಗಳಾಷ್ಟಕವನ್ನು ಹೇಳುತ್ತ ಶುಭ ಮುಹೂರ್ತವನ್ನು ನೋಡಿಕೊಂಡು:—

''ತದೇವಲಗ್ನಂ ಸುದಿನಂತದೇವ...........ಯುಗಂಸ್ಮರಾಮಿ''

ಎಂಬ ಮಂತ್ರವನ್ನು ಹೇಳಿ ಪಟವನ್ನು ಉತ್ತರ ದಿಕ್ಕಿಗೆ ಸೆಳೆದುಕೊಂಡು ವಟುವಿನನ್ನು ಕುರಿತು ''ಎಲೈ ವಟುವೇ? ಪೂಜಿಸಿದ ಈ ಶಿವಲಿಂಗವನ್ನು ನೋಡು'' ಎಂದು ಹೇಳಿ ಶಿಷ್ಯನ ಮಸ್ತಕದ ಮೇಲೆ ಮಂತ್ರಾಕ್ಷತೆಗಳನ್ನು ಹಾಕಬೇಕು.



# ಸ್ವಾಯತ್ತ-ದೀಕ್ಷಾ

ಶಿಷ್ಯನ ಮಸ್ತಕದ ಮೇಲೆ ಮಂತ್ರಾಕ್ಷತೆಗಳನ್ನು ಹಾಕಿದ ತರುವಾಯ— ಆಚಾರ್ಯನು ಪ್ರಾಣಾಯಾಮುವನ್ನು ಮಾಡಿ ದೇಶಕಾಲಾದಿಗಳನ್ನು ಹೇಳಿ--

''ಅಸ್ಯಾಂ ಶುಭ ತಿಥೌವಸ್ಯ ಕುಮಾರಸ್ಯ ಸ್ವಾಯತಾಭಿದಾನ ದೀಕ್ಷಾಂ ಕರಿಷ್ಯೇ''

ಎಂದು ಸಂಕಲ್ಪ ಮಾಡಿ ತನ್ನ ಎಡಹಸ್ತದಲ್ಲಿ ಶಿವಲಿಂಗವನ್ನಿಟ್ಟುಕೊಂಡು ಪುಷ್ಪಾಂಜಲಿಯನ್ನು ಕೊಟ್ಟು ಮಂಗಳಾಷ್ಟಕವನ್ನು ಹೇಳಿ—

''ತದೇವಲಗ್ನಂ ಸುದಿನಂತದೇವ...........ಯುಗ್ಮಂಸ್ಮರಾಮಿ''

ಎಂಬ ಮಂತವನ್ನು ಪಠಿಸಿದ ತರುವಾಯ ಶಿಷ್ಯನು

''ಓಂ ನಮೋ ಬ್ರಹ್ಮಣಿ ಧಾರಣಂ ಮೆ ಅಸ್ತ್ವನಿರಾಕರಣಂ ಧಾರಯಿತಾ ಭೂಯಾಸಂ ಕರ್ಣಯೇಶೃತಂ ಮಾಚ್ಯೋಢ್ವಂ ಮಮಾಯುಷ್ಯ ಓಂ''

ಹೀಗೆಂದು ಗುರುವಿನನ್ನು ಪ್ರಾರ್ಥಿಸಿದ ನಂತರ ಆಚಾರ್ಯನು—

''ಓಂ ಊರ್ಧ್ವಾಯನಮಃ। ಊರ್ಧ್ವಲಿಂಯನಮಃ। ಓಂ ಹಿರಣ್ಯಾಯ ನಮಃ। ಹಿರಣ್ಯಲಿಂಗಾಯನಮಃ। ಓಂ ಸುವರ್ಣಾಯನಮಃ। ಸುವರ್ಣಲಿಂಗಾಯನಮಃ। ಓಂ ದಿವ್ಯಾಯನಮಃ। ದಿವ್ಯಲಿಂಗಾಯನಮಃ। ಓಂ ಭವಾಯ ನಮಃ। ಭವಲಿಂಗಾಯನಮಃ। ಓಂ ಶರ್ವಾಯನಮಃ। ಶರ್ವಲಿಂಗಾಯನಮಃ ಓಂ ಶಿವಾಯನಮಃ। ಶಿವಲಿಂಗಾಯನಮಃ। ಓಂ ಜ್ವಲಾಯನಮಃ। ಜ್ವಲ ಲಿಂಗಾಯನಮಃ। ಓಂ ಆತ್ಮಾಯನಮಃ। ಆತ್ಮಲಿಂಗಾಯನಮಃ। ಏತತ್ಸೋಮಸ್ಯ ಸೂರ್ಯಸ್ಯ ಸರ್ವಲಿಂಗಾಂಗ್ಂ ಸ್ಥಾಪಯಾಮಿ ಪಾಣಿಮಂತಂ ಪವಿತ್ರಂ''

ಎಂಬ ಮಂತ್ರವನ್ನು ಪಠಿಸಿ ಶಿಷ್ಯನ ಎಡಹಸ್ತದಲ್ಲಿ ಶಿವಲಿಂಗವನ್ನು ಉತ್ತರಗೋಮುಖವನ್ನಾಗಿಡಬೇಕು. ಆ ಬಳಿಕ ಶಿಷ್ಯನಿಗೆ ಮುಂದೆ ಬರೆದ ಪ್ರಕಾರ ಬೋಧ ಮಾಡಬೇಕು.

ಎಲೌ ಶಿಷ್ಯನೇ? ಈ ಶಿವಲಿಂಗವು ನಿನ್ನ ಪ್ರಾಣಲಿಂಗವೆಂದು ನಿಶ್ಚಯವಾಗಿ ತಿಳಿಯಬೇಕು. ಹಾಗೂ ಈ ಲಿಂಗವೇ ಸರ್ವ ತತ್ವಾತೀತವಾದ ಪರಶಿವ ಸ್ವರೂಪ ವಸ್ತುವೆಂದು ಭಾವಿಸಬೇಕು. ಮತ್ತು ಇದು ಬ್ರಹ್ಮ ವಿಷ್ಣು ಮೊದಲಾದವರಿಗೂ ದೊರೆಯದಿದ್ದದ್ದೆಂದು ತಿಳಿ. ಈ ಶಿವಲಿಂಗವನ್ನು ನಿನ್ನ ದೇಹದಿಂದ ದುರ್ಲಕ್ಷ ಮಾಡಿ ನಿಮಿಷಾರ್ಧವಾದರೂ ಅಗಲದೆ ಧರಿಸಬೇಕು. ಲಿಂಗಪೂಜೆಯನ್ನು ತ್ರಿಕಾಲದಲ್ಲಿ ತಪ್ಪದೇ ನಿಯಮಿತತನದಿಂದ ಪೂಜಿಸಬೇಕು. ಯಾವದೇ ಪದಾರ್ಥವನ್ನು ಲಿಂಗಕ್ಕೆ ಅರ್ಪಿಸದಲೆ ಸ್ವೀಕರಿಸಬೇಡ. ಈ ಲಿಂಗದಿಂದಲೇ ಭೋಗ ಮೋಕ್ಷಾದಿ ಯಾವತ್ತೂ ಪುರುಷಾರ್ಥಗಳು ಕರತಲಗತವೆಂದು ತಿಳಿ. ಸರ್ವ ಕ್ಲೇಶಗಳಿಂದ ಬಿಡುಗಡೆಯಾಗಿ ಸದಾಸುಖಿಯಾಗುವಿ. ಇದು ಸತ್ಯವೆಂದು ತಿಳಿ.

ಸೂಚನೆ:— ಶಿವಲಿಂಗಕ್ಕೆ ಭುವನಾಧ್ವನ್ಯಾಸಾದಿ ಆರು ನ್ಯಾಸಗಳನ್ನು ಮಾಡಿದ ನಂತರ ಗಂಧ, ಪುಷ್ಪ-ದೀಪಾದಿಗಳಿಂದ ಪೂಜಿಸಿ ೩೮ ಕಲಾನ್ಯಾಸವನ್ನು ಮಾಡಿ ಶಿವಲಿಂಗ ಧಾರಣವನ್ನು ಮಾಡಬೇಕು. ಮತ್ತು ಯಜಮಾನನು ಗಣ ಸಂತತಿ ಪ್ರಮಥರ ಧ್ಯಾನವನ್ನು ಮಾಡಬೇಕು. ಇದನ್ನು ೨೩೨ ನೇ ಪೇಜಿನ ವಿಷಯಕ್ಕೆ ಜೋಡಿಸಿಕೊಂಡು ಕಾರ್ಯವನ್ನು ಸಾಂಗಗೊಳಿಸಬೇಕು.

## ೩೮ ಕಲಾನ್ಯಾಸ-ಕ್ರಮ

ಪುರೋಹಿತನು ತನ್ನ ಬಲಗೈಯ ಹೆಬ್ಬೆರಳು ಹಾಗೂ ಅದರ ಮಗ್ಗುಲಿನ ತರ್ಜನೀ ಬೆರಳುಗಳ ಮಧ್ಯದಲ್ಲಿ ದರ್ಭೆಕೂರ್ಚವನ್ನು ಹಿಡಿದು—

"ಈಶಾನಃ ಸರ್ವವಿದ್ಯಾನಾಂ ಓಂ ಹ್ರಾಂ ಶಶನ್ಯೈ ನಮಃ"

ಹೀಗೆಂದು ಲಿಂಗದ ಮಧ್ಯ-ಮಸ್ತಕದಲ್ಲಿಯೂ—

"ಈಶ್ವರಃ ಸರ್ವ ಭೂತಾನಾಂ ಓಂ ಹ್ರಾಂ ಅಂಗದಕಲಾಯಿನ್ಯೈನಮಃ"

ಹೀಗೆಂದು ಲಿಂಗದ ಪೂರ್ವ ಮಸ್ತಕದಲ್ಲಿಯೂ—

"ಬ್ರಹ್ಮಾಧಿಪತಿ ಬ್ರಹ್ಮಣೋಧಿಪತಿ ಬ್ರಹ್ಮಾಯನಮಃ

ಓಂ ಹ್ರಾಂ ಇಷ್ಟ ದಾಕಲಾಯೈ ನಮಃ"

ಎಂದು ಲಿಂಗದ ದಕ್ಷಿಣ ಮಸ್ತಕದಲ್ಲಿಯೂ –

"ಶಿವೋಮೇ ಅಸ್ತು ನಮಃ- ಓಂ ಹ್ರಾಂ ಮರೀಚಿಕಲಾಯೈ ನಮಃ"

ಎಂದು ಉತ್ತರ ಮಸ್ತಕದಲ್ಲಿಯೂ—

"ಸದಾಶಿವೋಂ ನಮಃ ಓಂ ಹ್ರಾಂ ಜ್ವಾಲಿನೀಕಲಾಯೈ ನಮಃ"

ಎಂದು ಹಿಂಗಡೆಯ ಮಸ್ತಕದಲ್ಲಿ ನ್ಯಾಸವನ್ನು ಮಾಡಬೇಕು. ತದ ನಂತರ ದರ್ಭೆ ಕೂರ್ಚವನ್ನು ಮಧ್ಯ ಬೆರಳು ಹಾಗೂ ಹೆಬ್ಬೆರಳುಗಳಿಂದ ಹಿಡಿದು—

"ತತ್ಪುರುಷಾಯ ವಿದ್ಮಹೇ ನಮಃ ಓಂ ದ್ರಾಂ ಶಾಂತಿಕಲಾಯೈ ನಮಃ"

ಎಂದು ಪೂರ್ವ ಮುಖದಲ್ಲಿಯೂ—

"ಮಹಾದೇವಾಯ ಧೀಮಹಿ ನಮಃ ಓಂ ಹ್ರಾಂ ವಿದ್ಯಾಕಲಾಯೈನಮಃ"

ಎಂದು ದಕ್ಷಿಣ (ಬಲ)ಭಾಗದ ಮುಖದಲ್ಲಿಯೂ—

"ತನ್ನೋರುದ್ರೋನಾಮಃ ಓಂ ಹ್ರಾಂ ನಿವೃತ್ತಿ ಕಲಾಯೈನಮಃ"

ಎಂದು ಉತ್ತರ (ಎಡಗಡೆ) ಭಾಗದ ಮುಖದಲ್ಲಿಯೂ—

"ಪ್ರಚೋದಯಾನ್ನಮಃ ಓಂ ಹ್ರಾಂ ನಿವೃತ್ತಿಕಲಾಯೈ ನಮಃ"

ಎಂದು ಪಶ್ಚಿಮ(ಹಿಂಗಡೆಯ) ಭಾಗದ ಮುಖದಲ್ಲಿಯೂ ನ್ಯಾಸ ಮಾಡಬೇಕು. ತದ ನಂತರ ಹೆಬ್ಬೆರಳು, ಅನಾಮಿಕ ಬೆರಳಗಳಿಂದ ದರ್ಭೆ ಕೂರ್ಚವನ್ನು ಹಿದಿದು—

"ಅಘೋರೇಭ್ಯೋ ನಮಃ ಓಂ ಹ್ರಾಂ ತಾಮಸೀ ಕಲಾಯೈ ನಮಃ"

ಎಂದು ಹೃದಯದಲ್ಲಿಯೂ—

''ಅಘೋರೇಭ್ಯೋ ನಮಃ ಓಂ ಹ್ರಾಂ ಮೋಹಾಕಲಾಯೈ ನಮಃ''
ಎಂದು ಕಂಠ (ಕೊರಳ) ದಲ್ಲಿಯೂ--
''ಘೋರ ನಮಃ ಓಂ ಹ್ರಾಂ ಜಯಾಕಲಾಯೈ ನಮಃ''
ಎಂದು ಬಲ ಭುಜದಲ್ಲಿಯೂ—
''ಘೋರತರೇಭ್ಯೋ ನಮಃ ಓಂ ಹ್ರಾಂ ಕಲಾಯೈ ನಮಃ''
ಎಂದು ಎಡ ಭುಜದಲ್ಲಿಯೂ—
''ಸರ್ವತ್ಸರ್ವ ನಮಃ ಓಂ ಹ್ರಾಂ ಮೃತ್ಯುಕಲಾಯೈ ನಮಃ''
ಎಂದು ನಾಭಿ(ಹೊಕ್ಕಳ)ಯಲ್ಲಿಯೂ—
''ಸರ್ವೇಭ್ಯೋ ನಮಃ ಓಂ ಹ್ರಾಂ ಮಾಯಾ ಕಲಾಯೈ ನಮಃ''
ಎಂದು ಉದರ(ಹೊಟ್ಟೆ)ಯಲ್ಲಿಯೂ--
''ನಮಸ್ತೇ ಅಸ್ತು ನಮಃ ಓಂ ಹ್ರಾಂ ಅಭಯಾ ಕಲಾಯೈ ನಮಃ''
ಎಂದು ಬೆನ್ನಿನಲ್ಲಿಯೂ—
''ರುದ್ರರೂಪೇಭ್ಯೋ ಶಿವೇಭ್ಯೋನಮಃ ಓಂ ಹ್ರಾಂ ಜರಾಕಲಾಯೈನಮಃ''
ಎಂದು ಎದೆಯಲ್ಲಿಯೂ ನ್ಯಾಸವನ್ನು ಮಾಡಬೇಕು. ಆ ಬಳಿಕ—
ಹೆಬ್ಬೆರಳು ಕಿರಿಬೆರಳುಗಳಿಂದ ದರ್ಭೆಕೂರ್ಚವನ್ನು ಹಿಡಿದು–
''ವಾಮದೇವಾಯನಮಃ ಓಂ ಹ್ರಾಂ ವಿರಜಾಕಲಾಯೈ ನಮಃ''
ಎಂದು ಗುಹ್ಯ ಸ್ಥಾನದಲ್ಲಿಯೂ—
''ಜ್ಯೇಷ್ಠಾಯನಮಃ ಓಂ ಹ್ರಾಂ ರಕ್ಷಕಲಾಯೈನಮಃ''
ಎಂದು ಶಿಶ್ನ (ಲಿಂಗ) ದಲ್ಲಿಯೂ—
''ಶ್ರೇಷ್ಠಾಯನಮಃ ಓಂ ಹ್ರಾಂ ರತಿಕಲಾಯೈನಮಃ''
ಎಂದು ಬಲದೊಡೆಯಲ್ಲಿಯೂ—
''ರುದ್ರಾಯನಮಃ ಓಂ ಹ್ರಾಂ ಪಾಲಿನೀಕಲಾಯೈನಮಃ''
ಎಂದು ಎಡಗಡೆಯ ತೊಡೆಯಲ್ಲಿಯೂ—
''ಕಾಲಾಯನಮಃ ಓಂ ಹ್ರಾಂ ಸಂಜ್ಞಾಕಲಾಯೈ ನಮಃ''
ಎಂದು ಬಲ ಮೊಣಕಾಲಿನಲ್ಲಿಯೂ—
''ಕಲನಮಃ ಓಂ ಹ್ರಾಂ ಕಾಮಾಕಲಾಯೈ ನಮಃ''
ಎಂದು ಎಡಗಡೆ ಮೊಣಕಾಲಿನಲ್ಲಿಯೂ—
''ವಿಕರಣಾಯನಮಃ ಓಂ ಹ್ರಾಂ ಕ್ರಿಯಾಕಲಾಯೈ ನಮಃ''
ಎಂದು ಬಲಗಡೆಯ ಕಣಕಾಲಿನಲ್ಲಿಯೂ—
''ಬಲನಮಃ ಓಂ ಹ್ರಾಂ ಬುದ್ಧಿ ಕಲಾಯೈನಮಃ''
ಎಂದು ಎಡಗಡೆಯ ಕಣಕಾಲಿನಲ್ಲಿಯೂ—

"ವಿಕರಣಾಯನಮಃ ಓಂ ಹ್ರಾಂ ಜ್ಞಾನಕಲಾಯೈನಮಃ'' ಎಂದು ಬಲ ಪಾದ ಹರಡಿನಲ್ಲೂ—

''ಬಲಾಯನಮಃ ಓಂ ಧಾತ್ರೀ ಕಲಾಯೈನಮಃ" ಎಂದು ಎಡಪಾದ ಹರಡಿನಲ್ಲೂ—

''ಬಲಪ್ರಮಥಾಯನಮಃ ಓಂ ಹ್ರಾಂ ಬ್ರಾಹ್ಮಣೀ ಕಲ್ಯಾಯೈನಮಃ'' ಎಂದು ಟೊಂಕ (ನಡ) ದಲ್ಲಿಯೂ—

"ಸರ್ವಭೂತದಮನಾಯನಮಃ ಓಂ ಹ್ರಾಂ ಮೋಹಿನೀ ಕಲಾಯೈನಮಃ" ಎಂದು ಬಲಗಡೆಯ ಪಕ್ಕದಲ್ಲಿಯೂ—

'' ಮನೋನ್ಮನಾಯನಮಃ ಓಂ ಹ್ರಾಂ ಅಭಯಕಲಾಯೈನಮಃ'' ಎಂದು ಎಡಗಡೆಯ ಪಕ್ಕದಲ್ಲಿಯೂ ನ್ಯಾಸ ಮಾಡುವದು ತದನಂತರ ಐದೂ ಬೆರಳುಗಳಿಂದ ದರ್ಭೆಕೂರ್ಚನವನ್ನು ಹಿಡಿದು—

"ಸದ್ಯೋಜಾತಂ ಪ್ರಪದ್ಯಾಮಿ ನಮಃ ಓಂ ಹ್ರಾಂ ಸಿದ್ಧಿ ಕಲಾಯೈನಮಃ" ಎಂದು ಬಲಗಡೆಯ ಪಾದದಲ್ಲೂ—

''ಸದ್ಯೋಜಾತಾಯನಮಃ ಓಂ ಹ್ರಾಂ ಬುದ್ಧಿಕಲಾಯೈನಮಃ ಎಂದು ಎಡಗಡೆಯ ಪಾದದಲ್ಲೂ—

''ಭವೇನಮಃ ಓಂ ಹ್ರಾಂ ದ್ಯುತಿಕಲಾಯೈನಮಃ'' ಎಂದು ಬಲ ಗೈಯಲ್ಲಿಯೂ –

''ಅಭವೇನಮಃ ಓಂ ಹ್ರಾಂ ಲಕ್ಷ್ಮೀಕಲಾಯೈನಮಃ'' ಎಂದು ಎಡ ಗೈಯಲ್ಲಿಯೂ—

''ನಾತಿಭವೇನಮಾಃ ಓಂ ಹ್ರಾಂ ಮೇಧಾಕಲಾಯೈನಮಃ'' ಎಂದು ನಾಶಿಕ (ಮೂಗು) ದಲ್ಲಿಯೂ—

''ಭವಸ್ವಮಾಂನಮಃ ಓಂ ಹ್ರಾಂ ಕಾಂತಿಕಲಾಯೈನಮಃ" ಮಸ್ತಕದಲ್ಲಿ (ಶಿರಸ್ಸಿನಲ್ಲಿ) ಯೂ—

''ಭವ ನಮಃ ಓಂ ಹ್ರಾಂ ಶ್ರದ್ಧಾ ಕಲಾಯೈನಮಃ" ಎಂದು ಬಲಗಡೆಯ ತೋಳಿನಲ್ಲಿಯು—

''ಉದ್ಭವಾಯನಮಃ ಓಂ ಹ್ರಾಂ ಧೃತಿಕಲಾಯೈನಮಃ" ಎಂದು ಎಡ ಗಡೆಯ ತೋಳಿನಲ್ಲಿಯೂ—

ಈ ಪ್ರಕಾರವಾಗಿ ಕಲಾನ್ಯಾಸವನ್ನು ಲಿಂಗಮೂರ್ತಿಯಲ್ಲಿ ಆಯಾಯ ಅವಯವಗಳನ್ನು ಆಯಾಯ ಸ್ಥಾನಗಳಲ್ಲಿ ಭಾವಿಸಿಕೊಂಡು ಮಾಡಬೇಕು.

  

## ಗಣಸಂತತಿ (ಪ್ರಮಥರ) ಧ್ಯಾನ

“ವೃಷರಾಜೋ ಮಹಾತೇಜಾ ಮಹಾವೇಘಸಮಸ್ವನಃ।
ಮೇರುಮಂದಾರ ಕೈಲಾಸ ಹಿಮಾದ್ರಿ ಶಿಖರೋಪಮಃ” ॥
ಸಿತಾಭ್ರಶಿಖರಾಕಾರ ಕಕುದಾಪರಿಶೋಭಿತಃ ।
ಮಹಾಭೋಗಿಂದ್ರ ಕಲ್ಪೇನ ವಾಲೇನಚವಿರಾಜಿತಃ ॥
ರಕ್ತಾಸ್ಯಶೃಂಗರಣೋ ರಕ್ತಪ್ರಾಯ ವಿಲೋಚನಃ ।
ಪೀವರೋನ್ನತಸರ್ವಾಂಗ ಸುಚಾರುಗಮನೋಜ್ವಲಃ ॥
ಪ್ರಶಸ್ತ ಲಕ್ಷಣ ಶ್ರೀಮಾನ್ ಪ್ರಜ್ವಲನ್ಮಣಿ ಭೂಷಣಃ ।
ಶಿವಪ್ರಿಯಶ್ಶಿವಾಸಕ್ತ ಶಿವಯೋರ್ಧ್ವಜವಾಹನಃ ।
ತಥಾತಚ್ಚರಣನ್ಯಾಸ ಪ್ರಪಿತಾಪರವಿಗ್ರಹಃ ॥
ಗೋರಾಜ ಪುರುಷಶ್ಶ್ರೀಮಾನ್ ಶ್ರೀಮಚ್ಛೂಲವರಾಯುಧಃ
ತಯೋರಾಜ್ಞಾ ಪುರಸ್ಕೃತ್ಯ ಸಮೇಕಾಮಂಪ್ರಯಚ್ಛತು ॥
ನಂದೀಶ್ವರೋ ಮಹಾತೇಜಾ ನಗೇಂದ್ರ ತನಯಾತ್ಮಜಃ।
ಸನಾರಾಯಣ ಕೈರ್ದೇವೈರ್ನಿತ್ಯ ಮಭ್ಯರ್ಚವಂದಿತಃ ॥
ಸರ್ವಸ್ಯಾಂತಃ ಪುರದ್ವಾರೇ ಸಾರ್ಧಂಪರಿಜನೈಸ್ಥಿತಃ ।
ಸರ್ವೇಶ್ವರ ಸಮಪ್ರಖ್ಯಸ್ಸರ್ವಾ ಸುರವಿಮರ್ದನಃ ।
ಸರ್ವೇಷಾಂ ಶಿವಧರ್ಮಾಣಾಮಧ್ಯಕ್ಷತ್ವೇಽಭಿಷೇಜಿತಃ ।
ಶಿವಪ್ರಿಯಶ್ಶಿವಾಸಕ್ತ ಶ್ರೀಮಚ್ಛೂಲವರಾಯುಧಃ ।
ಶಿವಾಶ್ರಿತೇಷು ಸಂಸಕ್ತಸ್ತ್ವನುರಕ್ತ ಸ್ತುತೈರವಿ ।
ಸತ್ಕೃತ್ಯ ಶಿವಯೋರಾಜ್ಞಾಂ ಸಮೇಕಾಮಂಪ್ರಯಚ್ಛತು ॥
ಭೃಂಗೀಶೋ ನಾಮಗಣಪಶ್ಶಿವಾರಾಧನ ತತ್ಪರಃ ।
ಪ್ರಯಚ್ಛತು ಸಮೇಕಾಮಂ ಭರ್ತುರಾಜ್ಞಾ ಪುರಸ್ಸರಂ ॥
ವೀರಭದ್ರೋ ಮಹಾತೇಜಾ ಹಿಮಕುಂದೇಂದು ಸನ್ನಿಭಃ ॥
ಭದ್ರಕಾಳೀ ಪ್ರಿಯೋನಿತ್ಯಂ ಮಾತೄಣಾಂಚಾಭಿರಕ್ಷಕಃ ।
ಯಜ್ಞಸ್ಯಚ ಶಿರೋಹರ್ತಾ ದಿಕ್ಷಸ್ಯಚ ದುರಾತ್ಮನಃ ।
ಉಪೇಂದ್ರೇಂದ್ರ ಯಮಾವೀನಾಂ ದೇವನಾಮಂಗತಕ್ಷಃ ।
ಶಿವಸ್ಯಾನು ಚರಶ್ಶ್ರೀಮಾನ್ ಶಿವಶಾಸನ ಪಾಲಕಃ।
ಶಿವಯೋಶ್ಶಾಸನಾದೇವ ಸಮೇ ದಿರತು ವಾಂಛಿತಂ ॥
ರುದ್ರಾರುದ್ರ ಸಮಪ್ರಖ್ಯಾಃ ಪ್ರಮಥಾಃ ಪ್ರಥಿತೌಜಸಃ ।
ಭೂತಾಖ್ಯಾಶ್ಚ ಮಹಾವೀರ್ಯಾ ಮಹದೇವ ಸಮಪ್ರಭಾಃ
ನಿತ್ಯಮುಕ್ತಾ ನಿರುಪಮಾ ನಿರ್ದ್ವಂದ್ವಾ ನಿರುಪಪ್ಲವಾಃ ।

ಸಶಕ್ತಯಸ್ಸಾನುಚರಾತ್ಸರ್ವಲೋಕ ನಮಸ್ಕೃತಾಃ ।
ಶಿವಪ್ರಿಯತಮಾನಿತ್ಯಂ ಶಿವಲಕ್ಷಣ ಲಕ್ಷಿತಾಃ ।
ವಿರೂಪಾಶ್ಚ ಸೂರೂಪಾಶ್ಚ ನಾನಾವೇಶ ಧರಾಸ್ತಥಾ ।
ಸತ್ಕೃತ್ಯಶಿವಯೋರಾಜ್ಞಾಂ ಮೇಪ್ರಯಚ್ಛಂತು ವಾಂಛಿತಂ ॥೫॥

# ಶಿವಲಿಂಗ ಧಾರಣ ವಿಧಿ

"ಯಜ್ಞೋಪವೀತ ಮಿತ್ಯಸ್ಯ ಪರಬ್ರಹ್ಮ ತ್ರಿಷ್ಟುಪ್ ।
ಶಿವಲಿಂಗಧಾರಣೇ ವಿನಿಯೋಗಃ"

"ಯಜ್ಞೋಪವೀತಂ ಪರಮಂ ಪವಿತ್ರಂ ಪ್ರಜಾಪತೇರ್ಯತ್ಸಹ ಜಂಪುರಸ್ತಾತ್।
ಆಯುಷ್ಯಮಗ್ರ್ಯಂ ಪ್ರತಿಮುಂಚ ಶುಭ್ರಂ ಯಜ್ಞೋಪವೀತಂ
ಬಲಮಸ್ತುತೇಜಃ ॥

ಎಂಬ ಮಂತ್ರವನ್ನು ಹೇಳಿ ರೇಷ್ಮೆಯ ವಸ್ತ್ರದಲ್ಲಾಗಲೀ ಅಥವಾ ಕರಡಿಗೆ ಯಲ್ಲಾಗಲೀ ಶಿವಲಿಂಗವನ್ನಿಟ್ಟು ಶಿಷ್ಯನ ಹೃದಯಸ್ಥಾನದಲ್ಲಿ ಧರಿಸಬೇಕು. ಆ ಬಳಿಕ—

# ಸೂಕ್ಷ್ಮಾಂಗದಲ್ಲಿ ಲಿಂಗಧಾರಣ ವಿಧಿ

"ಸೂಕ್ಷ್ಮಾಂಗೇ ಪ್ರಾಣಲಿಂಗಂ ಕಾರಣಾಂಗೇ ಭಾವಲಿಂಗಂಚ ಸ್ಥಾಪಯಾಮಿ"

ಎಂದು ಹೇಳಿ ಸೂಕ್ಷ್ಮಾಂಗದಲ್ಲಿ ಪ್ರಾಣಲಿಂಗ ಭಾವಲಿಂಗಗಳನ್ನು ಸ್ಥಾಪಿಸಿ ತದನಂತರ—

"ನಕಾರಮಂತ್ರಾತ್ಮನೆ ಆಚಾರಲಿಂಗಾಯನಮಃ । ಘ್ರಾಣೇಂದ್ರಿಯೇ ಆಚಾರಲಿಂಗಂ ಸ್ಥಾಪಯಾಮಿ" "ಮಕಾರ ಮಂತ್ರಾತ್ಮನೆ ಗುರುಲಿಂಗಾಯ ನಮಃ । ಜಿಹ್ವೇಂದ್ರಿಯ ಗುರುಲಿಂಗಂ ಸ್ಥಾಪಯಾಮಿ" "ಶಿಕಾರ ಮಂತ್ರಾತ್ಮನೇ ಶಿವಲಿಂಗಾಯನಮಃ । ನೇತ್ರಯೋಃಶ್ಶಿವಲಿಂಗಂ ಸಾಪಯಾಮಿ" "ವಕಾರ ಮಂತ್ರಾತ್ಮನೇ ಜಂಗಮಲಿಂಗಾಯನಮಃ । ತ್ವಚೇ ಚರಲಿಂಗಂ ಸ್ಥಾಪಯಾಮಿ" "ಯಕಾರ ಮಂತ್ರಾತ್ಮನೇ ಪ್ರಸಾದಲಿಂಗಾಯನಮಃ ।

ಹೀಗೆಂದು ಆಯಾಯ ಸ್ಥಾನಗಳಲ್ಲಿ ಆಯಾಯ ಲಿಂಗವನ್ನು ಸ್ಥಾಪಿಸಿ ಪೂಜಿಸಬೇಕು. ತದನಂತರ—

# ಶಿಷ್ಯನ ನಮಸ್ಕಾರ ಕ್ರಮ

ಶಿಷ್ಯನು ಪಶ್ಚಿಮದಿಕ್ಕಿಗೆ ಮುಖ ಮಾಡಿಕೊಂಡು ಗುರುಗಳ ಸಮ್ಮುಖದಲ್ಲಿ ಬಲಮಂಡಿಯನ್ನು ಭೂಮಿಯಮೇಲೆ ಊರಿ ಎಡ ಹಸ್ತದಿಂದ ತನ್ನ ಬಲಗಿವಿ

ಯನ್ನು ಹಿಡಿದುಕೊಂಡು ಬಾಗಿ, ಗುರುಗಳ ಬಲಪಾದವನ್ನು ಬಲಹಸ್ತದಿಂದಲೂ ಎಡಪಾದವನ್ನು ಎಡಹಸ್ತದಿಂದಲೂ, ಹಿಡಕೊಂಡು ಮೊಣಕಾಲಿನಿಂದ ಪಾದದ ವರೆಗೆ ಮುಟ್ಟಿ—

"ಅಮುಕ ಗೊತ್ರೋತ್ಪನ್ನಃ ಅಮುಕ ಶರ್ಮಾಹಂ ಅಭಿವಾದಯೇ" ಎಂದು ಅನ್ನುತ್ತಾ ಮಸ್ತಕವನ್ನು ಬಾಗಿಸಿ ನಮಸ್ಕಿಸಿಸಬೇಕು. ಆ ಬಳಿಕ ಆಚಾರ್ಯನು— "ಆಯುಷ್ಮಾನ್ ಭವ ಸೌಮ್ಯದೇವದತ್ತ" ಎಂದು ನಮಸ್ಕರಿಸಿದೆ ಶಿಷ್ಯನಿಗೆ ಆಶೀರ್ವಾದ ಮಾಡಬೇಕು ತರುವಾಯ—

# ಮೂರನೆ ಇಲ್ಲನೆ ಮಂತ್ರ ದೀಕ್ಷೆ

## (ಮಂತ್ರೋಪದೇಶ ವಿಧಿ)

ಶಿಷ್ಯನು ವಿನಯಪೂರ್ವಕವಾಗಿ ಬಾಗಿ—

"ಶಿವ ಷಡಕ್ಷರ್ಯುಪದೇಶಂ ವಾಂಛನ್ನಧೀಹಿ ಭೋ ಶಿವಷಡಕ್ಷರೀಂ ಅನುಬ್ರೂಹಿ" ಹೀಗೆಂದು ಆಚಾರ್ಯನನ್ನು ಬೇಡಿಕೊಂಡು ತನ್ನ ಎರಡೂ ಅಂಗೈಗಳನ್ನು ಪರಸ್ಪರ ಕೂಡಿಸಿ ಬೆರಳಿನಿಂದ ಮೇಲಿನ ಹಸ್ತವನ್ನು ಎತ್ತಿಹಿಡಿದು ಬ್ರಹ್ಮಾಂಜಲಿಯನ್ನು ಮಾಡಿ ತನ್ನ ಬಲದೊಡೆಯ ಮೇಲಿಟ್ಟು ಉತ್ತರ ದಿಕ್ಕಿಗೆ ಮುಖಮಾಡಿ ಗುರುಗಳ ಸಮೀಪದಲ್ಲಿಯೇ ಕುಳಿತುಕೊಳ್ಳಬೇಕು. ತದನಂತರ ಆಚಾರ್ಯನು ಪ್ರಾಣಾಯಾಮವನ್ನು ಮಾಡಿ ದೇಶಕಲಾದಿಗಳನ್ನುಚ್ಚರಿಸಿ—

"ಅಸ್ಯಾಂ ಶುಭ ತಿಥೌ ವಸ್ಯ ಕುಮಾರಸ್ಯ ಸರ್ವಾರ್ಥ ಸಿದ್ಧಿಪ್ರದಮನು ದೀಕ್ಷಾಂ ಕರಿಷ್ಯೇ" ಹೀಗೆಂದು ಸಂಕಲ್ಪವನ್ನು ಮಾಡಿ ಶಿಷ್ಯನ ಬ್ರಹ್ಮಾಂಜಲಿಯನ್ನು ತಾನು ಹೊದ್ದಿರುವ ವಸ್ತ್ರದಿಂದ ಮುಚ್ಚಿ ತನ್ನ ಎರಡೂ ಹಸ್ತಗಳಿಂದ ಶಿಷ್ಯನ ಅಂಜಲಿಯನ್ನು ಹಿಡಿದುಕೊಂಡು- "ಓಂ ಅಸ್ಯಾ ಶ್ರೀ ಶಿವಷಡಕ್ಷರೀ ಮಹಾ ಮಂತ್ರಸ್ಯ ಮಮದೇವ ಋಷಿಃ। ಪಂಕ್ತಿಶ್ಛಂಧಃ। ಶ್ರೀ ಸದಾಶಿವೋ ದೇವತಾ। ಓಂ ಬೀಜಂ। ಉಮಾಶಕ್ತಿಃ। ಶಿವ ಇತಿ ಕೀಲಕಂ। ಶ್ರೀ ಸದಾಶಿವ ಪ್ರೀತ್ಯರ್ಥೇ ಜಪೇವಿನಿಯೋಗಃ॥" ಎಂದು ಹೇಳಿ-

## ಕರನ್ಯಾಸವು

ಓಂ ಯಂ ಸರ್ವ ಶಕ್ತಿಧಾಮ್ನೇ ಅಂಗುಷ್ಠಾಭ್ಯಾಂನಮಃ। ಓಂ ವಾಂ ಓಂ ನಿತ್ಯ ತೃಪ್ತಿ ಶಕ್ತಿ ಧಾಮ್ನೆ ತರ್ಜನೀಭ್ಯಾಂನಮಃ। ಓಂ ಶಿಂ ಓಂ ಅನಾದಿ ಬೋಧ ಶಕ್ತಿಧಾಮ್ನೇ ಮಧ್ಯಮಾಭ್ಯಾಂನಮಃ। ಓಂ ಮಂ ಓಂ ಸ್ವತಂತ್ರ ಶಕ್ತಿಧಾಮ್ನೇ ಅನಾಮಿಕಾಭಾಂನಮಃ। ಓಂ ನಂ ಓಂ ಅಲುಪ್ತ ಶಕ್ತಿಧಾಮ್ನೇ ಕನಿಷ್ಠಕಾಭ್ಯಾಂನಮಃ। ಓಂ ಓಂ ಓಂ ಅನಂತ ಶಕ್ತಿಧಾಮ್ನೇ ಕರತಲಕರಪೃಷ್ಠಾಭ್ಯಾಂನಮಃ।

## ದೇಹನ್ಯಾಸವು

ಓಂ ಸರ್ವಶಕ್ತಿಧಾಮ್ನೇ ಶಿರಸೇಸ್ವಾಹಾಃ। ಓಂ ನಂ ಓಂ ನಿತ್ಯತೃಪ್ತಿ ಶಕ್ತಿ ಧಾಮ್ನೇ ಶಿರಸೇ ಸ್ವಾಹಾಃ। ಓಂ ಮಂ ಓಂ ಅನಾದಿಬೋಧ ಶಕ್ತಿಧಾಮ್ನೇ ಶಿಖಾಯೈ ವಷಟ್। ಓಂ ಶಿಂ ಓಂ ಸ್ವತಂತ್ರ ಶಕ್ತಿಧಾಮ್ನೇ ಕವಚಾಯಹುಂ। ಓಂ ವಾಂ ಓಂ ಅಲಿಪ್ತ ಶಕ್ತಿಧಾಮ್ನೇ ನೇತ್ರತ್ರಯಾಯ ವೌಷಟ್। ಓಂ ಮಂ ಓಂ ಅನಂತ ಶಕ್ತಿಧಾಮ್ನೇ ಅಸ್ತ್ರಾಯ ಫಟ್। ಭೂರ್ಭುವಃ ಸ್ವರೋಮಿತಿದಿಗ್ಬಂಧಃ॥

## ಧ್ಯಾನ

ಧ್ಯಾಯೇನ್ನಿತ್ಯಂ ಮಹೇಶಂ ರಜತಗಿರಿ ನಿಭಂ ಚಾರು ಚಂದ್ರಾವತಂಸಂ।
ರತ್ನಾ ಕಲ್ಪೋಜ್ಜ್ವಲಾಂಗಂ ಪರಶುಮೃಗವರಾಭೀತಿ ಹಸ್ತಂಪ್ರಸನ್ನಂ॥
ಪದ್ಮಾಶೀನಂ ಸಮಂತಾತ್ಸ್ತುತ ಮಮರ ಗಣೈರ್ವ್ಯಾಘ್ರ ಕೃತ್ತಿಂವಸಾನಂ।
ವಿಶ್ವಾದ್ಯಂ ವಿಶ್ವವಂದ್ಯಂ ನಿಖಿಲ ಭಯಹರಂಪಂಚವಕ್ತ್ರಂತ್ರಿಣೇತ್ರಂ॥

ಹೀಗೆ ಧ್ಯಾನವನ್ನು ಮಾಡಿ, ಶಿಷ್ಯನಿಂದಲೂ ಮಾಡಿಸಿ, ಶಿಷ್ಯನ ಬಲಗಿವಿಯಲ್ಲಿ ಪ್ರಣವಸಹಿತವಾಗಿ ಪಂಚಾಕ್ಷರೀ ಮಹಾಮಂತ್ರ ಋಷಿ, ಛಂದಸ್ಸು, ದೇವತಾ, ಬೀಜ, ಶಕ್ತಿ, ಕೀಲಕಾದಿಗಳನ್ನು ಅರಿತು ೫ ಸಾರೆ ಗುಪ್ತವಾಗಿ ಉಪದೇಶಿಸಬೇಕು. ಹಾಗೂ ಶಿಷ್ಯನಿಂದಲೂ ಹೇಳಿಸಬೇಕು.

## ಉಪದೇಶಹೊಂದುವ ಮಂತ್ರ-ಲಕ್ಷಣವು

೧) ರೇವಣಾರಾಧ್ಯರ (ಬಾಳೇಹಳ್ಳಿ ಸಿಂಹಾಸನದ)ಮಹಾಮಂತ್ರ—

''ಓಂ ಹ್ರಾಂ, ಹ್ರೀಂ, ಹ್ರೂಂ, ಹ್ರೈಂ, ಹ್ರೌಂ ನಮಃ ಶಿವಾಯ ಎಂಬ ದಶಾಕ್ಷರ ಪ್ರಸಾದ ಪಂಚಾಕ್ಷರೀ ಮಹಾಮಂತ್ರವನ್ನು ಗೌಪ್ಯವಾಗಿ ಗುರುವಿನಿಂದ ಭಕ್ತಿಪೂರ್ವಕವಾಗಿ ಉಪದೇಶವನ್ನು ಹೊಂದಬೇಕು.

೨) ಮರುಳಾರಾಧ್ಯರ ( ಉಜ್ಜಯನಿ ಸಿಂಹಾಸನದ ) ಮಹಾಮಂತ್ರ:-

"ಓಂ ಹ್ರಾಂ, ಹ್ರೀಂ, ಹ್ರೂಂ, ಹ್ರೈಂ ನಮಃ ಶಿವಾಯ"ಎಂಬ ನವಾಕ್ಷರದ ಮಾಯಾ ಪಂಚಾಕ್ಷರೀ ಮಹಾಮಂತ್ರವನ್ನು ಉಪದೇಶ ಹೊಂದಬೇಕು.

೩) ಏಕೋರಾಮಾರಾಧ್ಯರ (ಕೇದಾರ ಸಿಂಹಾಸನದ) ಮಹಾಮಂತ್ರ—

''ಓಂ ಹ್ರಾಂ, ಹ್ರೀಂ, ಹ್ರೂಂ, ನಮಃ ಶಿವಾಯ" ಎಂಬ ಅಷ್ಟಾಕ್ಷರದ ಮಹಾಮಂತ್ರವನ್ನು ಉಪದೇಶ ಹೊಂದಬೇಕು.

೪) ಪಂಡಿತಾರಾಧ್ಯರ ( ಶ್ರೀಶೈಲ ಸಿಂಹಾಸನದ ) ಮಹಾಮಂತ್ರವು:—

''ಓಂ ಹ್ರಾಂ, ಹ್ರುಂ, ನಮಃ ಶಿವಾಯ'' ಎಂಬ ಸಪ್ತಾಕ್ಷರದ ಸ್ಥೂಲ ಪಂಚಾಕ್ಷರೀ ಮಹಾಮಂತ್ರವನ್ನು ಉಪದೇಶ ಹೊಂದಬೇಕು.

೫) ವಿಶ್ವಾರಾಧ್ಯರ (ಕಾಶೀ ಸಿಂಹಾಸನದ) ಮಹಾಮಂತ್ರವು:—

"ಓಂ ನಮಃ ಶಿವಾಯ"ಎಂಬ ಮೂಲ ಪಂಚಾಕ್ಷರೀ ಮಹಾಮಂತ್ರವನ್ನು ಉಪದೇಶ ಹೊಂದಬೇಕು.

ಈ ಪಂಚಾಕ್ಷರೀ ಮಹಾ ಮಂತ್ರವನ್ನು ಬಹಿರಂಗವಾಗಿ ಪಠಿಸಿದರೆ ಮಹಾದೋಷ ತಪ್ಪುವದು. ಕಾರಣ ಇದನ್ನು ಶುದ್ಧವಾಗಿಯೂ ಗೌಪ್ಯವಾಗಿಯೂ ಭಕ್ತಿಯಿಂದಲೂ, ಏಕಾಗ್ರಚಿತ್ತದಿಂದಲೂ ಅಂತರಂಗದಲ್ಲಿ ಪಠಿಸಬೇಕು. ಸಿಕ್ಕ ಸಿಕ್ಕ ಹಾಗೆ ಪಠಿಸಿದರೆ ಮಹಾ ದೋಷಕ್ಕೆ ಪಾತ್ರರಾಗದೇ ಇರಲಾರರು. ಆದರೆ ಈ ದೀಕ್ಷೆಯನ್ನು ಸ್ತ್ರೀಪುರುಷರೆಲ್ಲರೂ ಹೊಂದಬೇಕು. ಕನಿಷ್ಟ ವಿವಾಹಕ್ಕಂತೂ ಪೂರ್ವದ ಮೊದಲನೆಯ ದಿನ ದೀಕ್ಷೆಯನ್ನು ಹೊಂದಲೇಬೇಕಾಗುವದು. "ಡೀಕ್ಷೆಯಿಲ್ಲದೆ ಮೋಕ್ಷವಿಲ್ಲೆಂಬ" ಮಾತನ್ನು ನೆನಪಿನಲ್ಲಿಡಬೇಕು.

## ಊರ್ಧ್ವಾಂಗುಲೀ ಪಾಣಿ ನಿಧಾನ

ಆ ಮೇಲೆ ಆಚಾರ್ಯನು "ಮಮವ್ರತ ಇತ್ಯಸ್ಯ ಪ್ರಜಾಪತಿ ಋಷಿಃ ಬೃಹಸ್ಪತಿರ್ದೇವತಾ। ತ್ರಿಷ್ಟುಪ್ ಛಂದಃ ಏತೋ ಹೃದಯೇ ಉರ್ಧ್ವಾಂಗುಲೀ ಪಾಣಿ ನಿಧಾನೇ ವಿನಿಯೋಗಃ."

"ಓಂ ಮಮವ್ರತೆ ಹೃದಯಂತೆ ದದಾಮಿ। ಮಮಚಿತ್ತ ಮನುಚಿತ್ತಂತೆ ಅಸ್ತು। ಮಮವಾಚ ಮೇಕವ್ರತೋಜುಸ್ವ। ಬೃಹಸ್ಪತಿ ಸ್ತ್ವಾನಿಯುನಕ್ತುಮಹ್ಯಂ" ಎಂಬ ಮಂತ್ರದಿಂದ ತನ್ನ ಹಸ್ತವನ್ನು ಮೇಲ್ಮುಖವಾದ ಬೆರಳುಳ್ಳದ್ದನ್ನಾಗಿ ಮಾಡಿ ಶಿಷ್ಯನ ಹೃದಯಸ್ಥಾನದಲ್ಲಿಡಬೇಕು.

## ಮೇಖಲಾ ಬಂಧನವು

ಆ ಬಳಿಕ ಆಚಾರ್ಯನು "ಇಮಂದುರುಕ್ತಾದಿತಿದ್ವಯೋರ್ವಾಮದೇವೋ ಮೇಖಲಾ ತ್ರಿಷ್ಟುಪ್। ಮೇಖಲಾಭಂದನೇ ವಿನಿಯೋಗಃ॥"

"ಇಮಂದುರುಕ್ತಾತ್ಪರಿಭಾದಮಾನಾ ಶರ್ಮ ವರೂಥ ಪುನತೀನ ಆಗಾತ್। ಪ್ರಾಣಾಪಾನಾಭ್ಯಾಂ ಬಲಮಾಭರಂತಿ ಪ್ರಿಯಾದೇವಾನಾಂ ಸುಭಗಾಮೇಖಲೇಯಂ॥ ಋತಸ್ಯ ಗೋಪ್ತ್ರೀ ತಪಸಃ ಪರಸ್ಪಿಘ್ನತೀ ರಕ್ಷಃ ಸಹಮಾನಾ ಅರಾತೀಃ। ಸಾನಃ ಸಮಂತಮನುಪರೇಹಿಭದ್ರಯಾ। ಭರ್ತಾರಸ್ತೇಮೇಖಲೇ ಮಾರಿಷಾಮ॥

ಎಂಬ ಮಂತ್ರವನ್ನು ಶಿಷ್ಯನಿಂದ ಹೇಳಿಸಿ ಆಶ್ರಮ ಧರ್ಮದ ರಕ್ಷಣಾರ್ಥವಾಗಿಯೂ, ಶುದ್ಧಿಗಾಗಿಯೂ, ದಾರವನ್ನು ನಡುವಿಗೆ ಮೂರು ಸುತ್ತು ಸುತ್ತಿ

ಹೊಕ್ಕಳ ಸ್ಥಾನದಲ್ಲಿ ಮೂರು ಗಂಟನ್ನು ಹಾಕಬೇಕು. ಆಗ ವಟುವು ಗುಪ್ತವಾದ ಶರೀರವುಳ್ಳ ವೇದತ್ರಯಗಳಿಂದ ತಾನು ಸುತ್ತಲ್ಪಟ್ಟಿರುವೆನೆಂದು ಭಾವಿಸಬೇಕು.

## ದಂಡ ಧಾರಣ

ಆ ಬಳಿಕ ಆಚಾರ್ಯನು "ಸ್ವಸ್ತಿನ ಇತ್ಯಸ್ಯ ಸ್ವಸ್ತ್ಯಾತ್ರ್ಯ । ತ್ರಯೋವಿಶ್ವ ದೇವಾಸ್ತ್ರಿಷ್ಟುತ್ ದಂಡದಾನೇ ವಿನಿಯೋಗಃ —

"ಸ್ವಸ್ತಿನೋ ಮಿಮೀತಾಮಶ್ವಿನಾ ಭಗಃ। ಸ್ವಸ್ತ್ಯದೇವ್ಯದಿತಿರ ನರ್ವಣಃ ।
ಸ್ವಸ್ತಿ ಪೂಷಾ ಅಸುರೋ ದಧಾತುನಃ। ಸ್ವಸ್ತಿದ್ಯಾವಾ ಪೃಥಿವೀಸುಚೇತುನಾ॥"

ಎಂಬ ಮಂತ್ರದಿಂದ ಗುರುವು ಅವರವರ ಗೋತ್ರಾನುಸಾರವಾಗಿ, ಧರ್ಮ ರಕ್ಷಣಾರ್ಥವಾಗಿಯೂ ಅಧರ್ಮ ನಿವೃತ್ತಿಗಾಗಿಯೂ, ಶಿಷ್ಯನ ಹಸ್ತದಲ್ಲಿ ಕೊಡಬೇಕು. ತದ ನಂತರ ಶಿಷ್ಯನು —

"ಅದಾಂತಂ ದಮಯಿತ್ವಾಮಾಂ ಮಾರ್ಗೇ ಸಂಸ್ಥಾಪಯನ್ ಸ್ವಯಂ ।
ದಂಡಂ ಕರೇಸ್ಥಿತೋ ಯಸ್ಮಾತ್ ತಸ್ಮಾ ಹ್ರಕ್ಷಯತೋಭಯಂ"

ಈ ಪ್ರಕಾರವಾಗಿ ಅಂದು ತೆಗೆದುಕೊಳ್ಳಬೇಕು. ತದ ನಂತರ—

## ಕಮಂಡಲು ಭಿಕ್ಷಾಪಾತ್ರ ಧಾರಣ

ಆಚಾರ್ಯನು "ಅಕಲಶೇಷುಧಾವತಿಶ್ಯೇನೋ ವರ್ಮವಿದಾಹತೇ । ಅಭಿದ್ರೋಣಾಕನಿಕ್ರದತ್॥" ಎಂಬ ಮಂತ್ರವನ್ನು ಹೇಳಿ ಭಿಕ್ಷಾ ಪಾತ್ರೆಯನ್ನು (ಜೋಳಿಗೆಯನ್ನು)ವಟುವಿನ ಹಸ್ತದಲ್ಲಿ ಕೊಡುವದು.

## ಶಿಷ್ಯನಿಗೆ ಸದ್ಧರ್ಮ ಬೋಧೆಯು

ಎಲೌ ಶಿಷ್ಯನೇ? ನೀನು ಬ್ರಹ್ಮಚಾರಿಯಿರುತ್ತೀ; ಮೂತ್ರ ಪುರೀಷಾದಿಗಳಲ್ಲಿ ಶುದ್ಧಿಗಾಗಿ ಆಚಮನ ಮಾಡು. ಹಾಗೂ ಶಿವಪೂಜಾದಿ ಕರ್ಮಗಳನ್ನು ಮಾಡು. ಹಗಲು ನಿದ್ರಿಸಬೇಡ, ಆಚಾರ್ಯರ ಅಧೀನತ್ವದಲ್ಲಿ ವೇದಾಧ್ಯಾಯನವನ್ನು ಮಾಡು; ಸತ್ಯವನ್ನೇ ಮಾತಾಡು ಧರ್ಮದಂತೆಯೇ ವರ್ತಿಸು. ವೇದಾಧ್ಯಾಯನವನ್ನು ತಪ್ಪಿಸಬೇಡ. ಪ್ರಜಾತಂತುವನ್ನು ಛೇದಿಸಕೂಡದು. ಸತ್ಯವನ್ನು ಎಂದೂ ಬಿಡಬೇಡ. ಧರ್ಮದಿಂದಲೂ ಸಹ ಚ್ಯುತನಾಗಬೇಡ. ಸದಾ ಕುಶಲನಾಗಿ ಸಂತೋಷಚಿತ್ತದಿಂದಿರು. ಭೂತದಯೆಯುಳ್ಳವನಾಗು. ತಂದೆ-ತಾಯಿಗಳು ಮತ್ತು ಅತಿಥಿಗಳೂ ಸಹ ದೇವರ ಸಮಾನವೆಂದು ಮನ್ನಿಸು. ಈ ಪ್ರಕಾರವಾಗಿ ಗುರುಗಳು ಶಿಷ್ಯನಿಗೆ ಬೋಧೆಯನ್ನು ಮಾಡಬೇಕು. ತರುವಾಯ ಹಿಂದೆ ಹೇಳಿದಂತೆ ಪಂಚ ಕಲಶವನ್ನು ವಿಧಿ ಪ್ರಕಾರವಾಗಿ ವಿಸರ್ಜನಗೊಳಿಸಿ ವಟುವಿನಿಂದ ಭಿಕ್ಷಾಟನವನ್ನು ಮಾಡಿಸಬೇಕು.

# ಭಿಕ್ಷಾಟನ ವಿಧಾನ

ಶಿಷ್ಯನು ಭಿಕ್ಷಾಪಾತ್ರೆ(ಜೋಳಿಗೆ)ಯನ್ನೂ ಮತ್ತು ದಂಡಾದಿಗಳನ್ನೂ ತೆಗೆದುಕೊಂಡು ಮೊದಲು ತನ್ನ ತಾಯಿಯ ಹತ್ತಿರ ಹೋಗಿ "ಭವತೀ ಭಿಕ್ಷಾಂದೇಹಿ" ಎಂದು ಹೇಳಿ ಯಾಚಿಸಿ, ತದ ನಂತರ ತಂದೆಯ ಹತ್ತರ ಹೋಗಿ "ಭವಾನ್ ಭಿಕ್ಷಾಂ ದೇಹಿ"ಎಂದು ಬೇಡಿಕೊಂಡು ಹಾಗೆಯೇ "ಭವತೀ ಭಿಕ್ಷಾಂ ದೇಹಿ" ಎಂದು ಅನ್ನುತ್ತ ತನ್ನ ಸಕಲ ಬಂಧುಗಳಲ್ಲಿ ಯಾಚಿಸಿ, ಬಂದ ಭಿಕ್ಷೆಯನ್ನು ಗುರುವಿಗೆ ಸಮರ್ಪಿಸಬೇಕು. ತದ ನಂತರ ಗುರುಗಳೂ ಮಾಹೇಶ್ವರರೆಲ್ಲರೂ ವಟುವಿಗೆ ಆಶೀರ್ವಾದ ಮಾಡುವದು. ಮುತ್ತೈದೆಯರು ಆರತಿಯನ್ನು ಮಾಡುವದು, ಬಳಿಕ ಗುರುಪೂಜೆಯನ್ನು ಮಾಡಿ ವಟುವು ಪಾದೋದಕ-ತೀರ್ಥ-ಪ್ರಸಾದವನ್ನೂ ಸ್ವೀಕರಿಸಿ ಭಕ್ತ ಮಹೇಶ್ವರರನ್ನು ಶಕ್ತ್ಯಾನುಸಾರ ಮೃಷ್ಟಾನ್ನ ಭೋಜನದಿಂದ ತೃಪ್ತಿಪಡಿಸಬೇಕು.

|| ಇತಿ ದೀಕ್ಷಾ ವಿಧಾನ ಸಮಾಪ್ತಿ ||

# ವಿವಾಹ-ವಿಧಾನವು

## ಕನ್ಯಾ ವಾಗ್ದಾನ ವಿಧಿ

ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ನಿರ್ಧಾರ ಮಾಡಲ್ಪಟ್ಟ ಶುಭ ದಿವಸದಲ್ಲಿ ವರನ ಕಡೆಯವರು ತಮ್ಮ ಬಂಧು-ಬಾಂಧವರೊಡನೆ ಮುತ್ತೈದೆಯರನ್ನೂ, ಮಾಹೇಶ್ವರರನ್ನೂ ಕರಕೊಂಡು ಮಂಗಲವಾದ್ಯದೊಡನೆ ಕನ್ಯೆಯ ಮನೆಗೆ ಹೋಗಬೇಕು. ಕನ್ಯೆಯ ಮನೆಯವರು ಕನ್ಯೆಯನ್ನು ಭದ್ರ ಪೀಠದಲ್ಲಿ ಕುಳ್ಳಿರಿಸಿ ಕೈಯಲ್ಲಿ ಫಲ ತಾಂಬೂಲವನ್ನು ಕೊಡಬೇಕು. ತದನಂತರ ವರನ ಕಡೆಯವರೊಬ್ಬರು ಅಲ್ಲಿ ಕೂಡಿದ ಸಭಾ ಮಧ್ಯದಲ್ಲಿ ಎದ್ದು ನಿಂತು ಕೈಯಲ್ಲಿ "ಸಾಕ್ಷೀ ವೀಳ್ಯವನ್ನು"ತೆಗೆದುಕೊಂಡು ಇಂಥ ಗೋತ್ರೋತ್ಪನ್ನರಾದ, ಇಂಥವರ ಮೊಮ್ಮಗಳೂ, ಇಂಥವರ ಮಗಳೂ ಆದ ಇಂಥ ಹೆಸರಿನ ಕನ್ಯೆಯನ್ನು ಇಂಥ ವರನಿಗೆ "ತೆಗೆದುಕೊಳ್ಳುತ್ತೇವೆ" ಎಂದು ಹೇಳಿ ಕನ್ಯೆಯ ಕಡೆಯವರಿಗೆ ಆ ಸಾಕ್ಷಿ ವೀಳ್ಯೆಯನ್ನು ಕೊಡಬೇಕು." ಆಗ ಕನ್ಯೆಯ ಕಡೆಯವರು "ಒಳ್ಳೇದು ಕೊಡುತ್ತೇವೆ ಎಂದು" ಹೇಳಬೇಕು. ಬಳಿಕ ವರನ ಕಡೆಯವರು ತಾವು ತಂದ ನೂತನ ವಸ್ತ್ರಾಭರಣಗಳನ್ನು ಕೊಡಬೇಕು. ಅವುಗಳಿಂದ ಕನ್ಯೆಯನ್ನು ಅಲಂಕಾರಗೊಳಿಸಬೇಕು. ಕನ್ಯೆಯ ಕಡೆಯವರೂ ಮೇಲಿನಂತೆ ಹೇಳಿ ವರನ

ಕಡೆಯುವರಿಗೆ ಸಾಕ್ಷಿ ವೀಳ್ಯೆಯನ್ನು ಕೊಡಬೇಕು. ಆ ಮೇಲೆ ಸುಮಂಗಲೆಯರು ಕನ್ಯೆಯಳ ಬಾಯಲ್ಲಿ ಸ್ವಲ್ಪ ಸಕ್ಕರಿಯನ್ನು ಹಾಕಿ ಫಲ-ಪುಷ್ಪಾದಿಗಳಿಂದ ಉಡಿ ತುಂಬಬೇಕು. ಆ ಮೇಲೆ—

ಕನ್ಯೆಯ ತಂದೆಯು ವರನ ತಂದೆಯನ್ನು ಕುರಿತು—

''ವಾಚದತ್ತಾಮಯಾ ಕನ್ಯಾ ಪುತ್ರಾರ್ಥಂ ಸ್ವೀಕೃತಾಮಯಾ |
ಕನ್ಯಾವಲೋಕನ ವಿಧೌ ನಿಶ್ಚಿತಸ್ತ್ವಂ ಸುಖೀಭವ ||''

ಹೀಗೆಂದು ಹೇಳಬೇಕು. ಇದರಂತೆ—

ವರನ ತಂದೆಯು ಕನ್ಯೆಯ ತಂದೆಯನ್ನು ಕುರಿತು—

''ವಾಚಾದತ್ತಾ ತ್ವಯಾ ಕನ್ಯಾ ಪುತ್ರಾರ್ಥಂ ಸ್ವೀಕೃತಾಮಯಾ |
ವರಾವಲೋಕನ ವಿಧೌ ನಿಶ್ಚಿತಸ್ತ್ವಂ ಸುಖೀಭವ||"

ಹೀಗೆಂದು ಹೇಳುವದು. ಆ ಬಳಿಕ ಮಾಹೇಶ್ವರರೂ—

"ಓಂ ಸ್ವಸ್ತಿಶಿವಾ ಆತಸ್ಸಂತು ಸೌಮನಸ್ಯ ಮಸ್ತು ಅಕ್ಷತಾಂಚರಿಷ್ಟಂಚಾಸ್ತು ದೀರ್ಘಮಾಯುಃ ಶಾಂತಿಃ ಪುಷ್ಟಿಸ್ತುಷ್ಟಿ ಶ್ಚಾಸ್ತು ಏಕದ್ವಚಸ್ಸತ್ಯ ಮಸ್ತು||''
ಹೀಗೆಂದು ಆಶೀರ್ವಾದ ಮಾಡಬೇಕು.

ತರುವಾಯ ಸಮಸ್ತರಿಗೆ ಸಕ್ಕರಿ-ವೀಳ್ಯೆಯನ್ನು ಕೊಟ್ಟು ಮಾಹೇಶ್ವರರಿಗೆ ತಾಂಬೂಲ ದಕ್ಷಿಣೆಗಳನ್ನು ಕೊಡುವದು. ಆ ಮೇಲೆ ಸುಮಂಗಲೆಯರು ಕನ್ಯೆಯಳಿಗೆ ಆರತಿಯನ್ನು ಮಾಡಿ ಮೇಲಕ್ಕೆಬ್ಬಿಸಿ ಅಲ್ಲಿ ನೆರೆದ ಗುರು-ಹಿರಿಯರಿಗೂ ಮಾಹೇಶ್ವರರಿಗೂ, ದೈವದವರಿಗೂ ನಮಸ್ಕಾರ ಮಾಡಿಸಿ ಆಶೀರ್ವಾದ ಪಡೆಯಬೇಕು. || ಇತಿ ಕನ್ಯಾ ವಾಗ್ದಾನ ವಿಧಿ ಸಮಾಪ್ತಿ ||

## ಲಗ್ನಪತ್ರ ಪೂಜಾ ಹಾಗೂ ಹಂದರಸ್ತಂಭ ಸ್ಥಾಪನಾ ಕ್ರಮ

ಕನ್ಯಾ ವಾಗ್ದಾನ ವಿಧಿಯ ನಂತರ ಜ್ಯೋತಿಷ್ಯಶಾಸ್ತ್ರ ರೀತ್ಯಾ ನಿರ್ಧರಿಸಲ್ಪಟ್ಟ ಅಕ್ಷತಾರೋಪಣ ದಿವಸಕ್ಕಿಂತ, ೪-೫-೭-೮-೧೦ ದಿವಸಗಳ ಪೂರ್ವದಲ್ಲಿ ಒಂದು ವೇಳೆ ಅತ್ಯವಶ್ಯವಿದ್ದ ಪಕ್ಷದಲ್ಲಿ ಎರಡು ದಿನಗಳ ಪೂರ್ವದಲ್ಲಿ ಮನೆಯನ್ನು ಸಾರಣಿ ಮಾಡಿ ತೋರಣ-ತಳಿರುಗಳಿಂದ ಅಲಂಕಾರ ಮಾಡಿ ಶಾಸ್ತ್ರ ಬಲ್ಲ ಮಾಹೇಶ್ವರನನ್ನು ಮನೆಗೆ ಕರೆತಂದು ಸ್ನಾನ-ಶಿವಪೂಜಾದಿ ನಿತ್ಯ ಕರ್ಮಗಳನ್ನು ಮುಗಿಸಿಕೊಂಡು ಮಹೇಶ್ವರರಿಂದ ಸಕ್ರಮವಾಗಿ ಲಗ್ನ ಪತ್ರಿಕೆಯನ್ನು ಬರೆಯಿಸಿ ಅದನ್ನು ಷೋಡಷೋಪಚಾರಗಳಿಂದ ಪೂಜಿಸಿ ಗುರು ಹಿರಿಯರಿಂದ ಮಂತ್ರಾಕ್ಷತೆಗಳನ್ನು ಹಾಕಿಸಬೇಕು. ಹಾಗೂ ಇದೇ ಸಮಯಕ್ಕೆ ಮನೆಯ ದ್ವಾರ ಬಾಗಿಲಥ ಬಲಭಾಗಕ್ಕೆ ಮೂರು ಅಥವಾ ಐದು ಅಂಕಣ ಲೆಕ್ಕಕ್ಕೆ ಸರಿಗೊಳಿಸಿ ತೋರಣ-ತಳಿರುಗಳಿಂದ ಅಲಂಕಾರ ಮಾಡಿ ಹಂದರ ಸ್ತಂಭವನ್ನು ಸ್ಥಾಪಿಸಬೇಕು.

ಈ ಹಂದರಸ್ತಂಭ ಸ್ಥಾಪನೆಯ ಕಾಲಕ್ಕೆ ಪಂಚಾಮೃತವನ್ನೂ, ದಕ್ಷಿಣೆ (ಐದು ನಯೇಪೈಸೆ)ಯನ್ನೂ ತಗ್ಗಿನಲ್ಲಿ ಹಾಕಿರಬೇಕು. ನಂತರ ಆ ಕಂಬವನ್ನು ನಿಲ್ಲಿಸಿ ಅಷ್ಟೋಪಚಾರಗಳಿಂದ ಪೂಜೆಮಾಡಿ ಕರ್ಪುರ ಬೆಳಗಿ ಟೆಂಗಿನಕಾಯಿ ಯೊಂದು ಒಡೆಯಬೇಕು.

ತದನಂತರ ದೇವಗಣ ನಕ್ಷತ್ರದ ಹೆಸರಿನ ಬಲವುಳ್ಳ ಮುತ್ತೈದೆಯವರಿಂದ ಲಗ್ನದಕ್ಕಿಯ ಗಂಟು ಕಟ್ಟಿಸಿ, ಅದರಲ್ಲಿ ಒಂದು ಲಗ್ನಪತ್ರವನ್ನಿಟ್ಟು ಎರಡು ಖಣಗಳನ್ನಿಟ್ಟು, ಆ ಗಂಟನ್ನು ಪೂಜಿಸಿ ''ವಿವಾಹ ಕಾರ್ಯಾರಂಭವಾಯಿತೆಂದು'' ತಿಳಿಸುವದಕ್ಕೋಸ್ಕರ ಅದನ್ನು ಕನ್ಯೆಯಳ ಮನೆಗೆ ಕಳಿಸಬೇಕು. (ಲಗ್ನಪತ್ರ ಬರೆಯುವ ಕ್ರಮ ಹಾಗೂ ಈ ಬಗ್ಗೆ ಸಮಸ್ತ ಮುಹೂರ್ತ ವಿಚಾರಾದಿಗಳನ್ನು ನಮ್ಮಿಂದ ನಿರ್ಮಿತವಾದ ''ವಿದ್ಯಾಸಾಗರ''ವೆಂಬ ಪುಸ್ತಕದಲ್ಲಿ ನೋಡಿರಿ.

## ಹರಿದ್ರಾಲೇಪನ ಕಾರ್ಯ

### ( ಎಣ್ಣೆ ಅಥವಾ ಅರಿಷಣ ಹಚ್ಚುವದು )

ವಧೂ-ವರರಿಗೆ ಎಣ್ಣೆ-ಅರಿಷಣ ಹಚ್ಚುವ ಕಾರ್ಯವನ್ನು ಮೂರು ಅಥವಾ ಐದು ದಿನ ಮೊದಲು ಅನಿರ್ವಾಹ ಪಕ್ಷದಲ್ಲಿ ಒಂದು ದಿನ ಮೊದಲು ಪ್ರಾತಃ ಕಾಲಕ್ಕೆ ಶುಭ ವೇಳೆಯಲ್ಲಿ ವಧೂ-ವರರನ್ನು ಪೂರ್ವ ಅಥವಾ ಉತ್ತರಾಭಿಮುಖ ವಾತ ಭದ್ರ ಪೀಠದಲ್ಲಿ ಕುಳ್ಳಿರಿಸಿ ಬಲವುಳ್ಳ ಮುತ್ತೈದೆಯರು ಎಣ್ಣೆ ಮಿಶ್ರಿತ ಮಾಡಿದ ಅರಿಷಣವನ್ನು ಅವರ ಅಂಗಕ್ಕೆ ಲೇಪಿಸಿ ಆರತಿ ಮಾಡಿ ಎರೆಯಬೇಕು. ಆ ಬಳಿಕ ಗುರು ಪಾದೋದಕವನ್ನು ಕೊಡಿಸತಕ್ಕದ್ದು. ಇದೇ ''ಹರಿದ್ರಾ ಲೇಪನಕಾರ್ಯ''ವೆಂದು ಹೇಳಲ್ಪಡುವದು

## ಗುರುದೇವತಾ ಕಾರ್ಯ

ಹರಿದ್ರಾಲೇಪನ ಕಾರ್ಯದ ತರುವಾಯ ಶ್ರೀ ಪಾರ್ವತೀ ಪರಮೇಶ್ವರ ಪ್ರೀತ್ಯರ್ಥವಾಗಿ ಗುರುಗಳನ್ನೂ, ಗಣಾಧೀಶ್ವರರನ್ನೂ ಮನೆಗೆ ಕರೆತಂದು ಅವರಿಗೆ ಭೋಜನದಿಂದ ತೃಪ್ತಿಪಡಿಸಿ ದಕ್ಷಿಣೆ ತಾಂಬೂಲಾದಿಗಳನ್ನು ಕೊಟ್ಟು ಸಂತೋಷಪಡಿಸುವದು. ಮತ್ತು ಕುಲದೇವರ ಪೂಜೆಯನ್ನೂ, ಒಂದು ವೇಳೆ ಶ್ರೀ ಗುಗ್ಗಳ ಕಾರ್ಯವನ್ನೂ ಮಾಡಬೇಕಾದರೂ ಹರಿದ್ರಾಲೇಪನದ ತರುವಾಯ ಅವುಗಳನ್ನು ಸಾಂಗಗೊಳಿಸಬೇಕು. ಇದೇ ಗುರುದೇವತಾಕಾರ್ಯವೆಂದು ಹೇಳಲ್ಪಡುವದು.

# ವಿವಾಹ ದಿವಸ ಮಾಡತಕ್ಕ ಕಾರ್ಯಕ್ರಮ

ಈ ದಿವಸ ಪ್ರಾತಃಕಾಲದಲ್ಲಿ "ಅಂಕುರಾರೋಪಣ" ಕಾರ್ಯವನ್ನು ಹಿಂದೆ ಸರ್ವ ಪೂಜಾ ಪ್ರಕರಣದಲ್ಲಿ ಬರೆದಂತೆ ಸಶಾಸ್ತ್ರೀಯವಾಗಿ ಶಿವಪೂಜಾ ಗೃಹದಲ್ಲಿಯೇ ನೆರವೇರಿಸಬೇಕು. ತದನಂತರ "ವಿವಾಹ-ಮಂಟಪವನ್ನು" ಸ್ಥಾಪಿಸಿ ಅದರ ಮಧ್ಯದಲ್ಲಿ ರಂಗವಲ್ಲಿ ಹಾಕಿ ಹಿಂದೆ ಸರ್ವಪೂಜಾ ಪ್ರಕರಣದಲ್ಲಿ ಹೇಳಿದ ಪ್ರಕಾರ **ಪಂಚಕಲಶ ಸ್ಥಾಪನಾ ಮಾಡಬೇಕು.** ಹಾಗೂ **ಸ್ವಸ್ತಿಪುಣ್ಯಾಹ ವಾಚನ ನಾಂದೀಸಮಾರಂಭ** ಕಾರ್ಯಗಳನ್ನು ಹಿಂದೆ ತಿಳಿಸಿದಂತೆ ಪಂಚ ಕಲಶ ಸ್ಥಾಪನೆಯ ಪೂರ್ವದಲ್ಲಿಯೇ ಮಾಡಬೇಕು. ತದನಂತರ **ಶ್ರೀ ಗಣಪತಿ ಪೂಜಾ, ಗೌರೀಪೂಜಾ, ವಿವಾಹ ಮಂಟಪ ಪೂಜಾ ಪಂಚಕಲಶ ಪೂಜಾದಿಗಳನ್ನು** ಅನುಕ್ರಮವಾಗಿ ಮಾಡಬೇಕು. ಇವುಗಳ ಪೂಜಾ ಕ್ರಮವನ್ನು ಹಿಂದಿನ **ಸರ್ವಪೂಜಾ ಪ್ರಕರಣದಲ್ಲಿಯೇ ಹೇಳಲಾಗಿದೆ.** ಆ ಪ್ರಕಾರ ಮಾಡಬೇಕು. ಹಿಂದೆ ಹೇಳಿದಂತೆ ಸಂಕಲ್ಪವನ್ನು ಮಾಡಿ ವಧೂವರರನ್ನು **ಪಂಚಕಲಶದ ಮುಂದೆ** ಪೂರ್ವ ಅಥವಾ ಉತ್ತರಾಭಿಮುಖವಾಗಿ ಇಲ್ಲವೆ ಗುರುಗಳ ಸಮ್ಮುಖದಲ್ಲಿ (ದಕ್ಷಿಣ ದಿಕ್ಕಿನ ಹೊರ್ತಾಗಿ) ಕೂಡ್ರಿಸಿ ಹತ್ತು ಕಾರ್ಯಗಳನ್ನು ಸಕ್ರಮವಾಗಿ ಶಾಸ್ತ್ರೀಯ ಪದ್ಧತಿಯಂತೆ ಮಾಡಬೇಕಾಗುವದು. ಮೈಸೂರ ಕಡೆಯ ಭಾಗದಲ್ಲಿ ಕಾಂಡಪಟವನ್ನು ಹಿಡಿಯುವ ಪದ್ಧತಿಯಿದೆ. ಆ ಪ್ರಕಾರವಾದರೂ ಮಾಡಬಹುದು. ಮಾತ್ರ ವಧೂವರರಿಗೆ **ಪಂಚಕಲಶದಲ್ಲಿ ಗುರು ಕಲಶದಿಂದ ಸೂತ್ರವನ್ನು ಕೊಡಬೇಕಾಗುವದು.** ನಂತರ ಮುಂದೆ ಬರೆನ ಹತ್ತು ವಿಧಾನಗಳನ್ನು ನಾಂಗಗೊಳಿಸಬೇಕು.

## ದಶ ಕರ್ಮಗಳು

ಕರ್ಮಾದೌ (ಪ್ರಥಮೇ) ಕಂಕಣಂ ಬಧ್ವಾ। ದ್ವಿತಿಯೇ ಗುಡಜೀರಕಂ। ತೃಯೋ ಮಾಂಗಲ್ಯ ತಂತೂನಾಂ। ಚತುರ್ಥಂ ತ್ವಾಜ್ಯಕ್ಷೀರಕಂ। ಪಂಚಮಂ ಪಾದ ಘಟ್ಟಂಚ । ಅಕ್ಷತಾರೋಪಣಂ ಷಟ್ । ಸಪ್ತಮಂ ನಾಶಿಕಾಭೂಷಾ। ಅಷ್ಟಾಮಾನ್ನರಿಕೇಳದಂ। ನವಮಂ ಧಾತುಬದ್ಧಂಚ । ಅರುಂಧತಿ ದರ್ಶನಂ ದಶ। ಏವಂ ದಶವಿಧಪ್ರೋಕ್ತಂ ಲಗ್ನಕರ್ಮಚ ನಿಶ್ಚಯಂ।

೧. ಕಂಕಣಧಾರಣ ಕಾರ್ಯ, ೨. ಗುಡಜೀರಕ ಕಾರ್ಯ, ೩. ಮಾಂಗಲ್ಯಧಾರಣ ಕಾರ್ಯ, ೪. ಅಜ್ಯಕ್ಷೀರಕಕಾರ್ಯ, ೫. ಪಾದಸಂಘಟಿನಕಾರ್ಯ, ೬. ಅಕ್ಷತಾರೋಪಣ ಕಾರ್ಯ, ೭. ನಾಶಿಕಾಭೂಷಣ ಕಾರ್ಯ, ೮. ನಾರೀಕೇಳ (ಫಲದಾನ) ಕಾರ್ಯ, ೯. ಧಾತುಬದ್ಧ ಕಾರ್ಯ, ೧೦. ಅರುಂಧತಿದರ್ಶನಕಾರ್ಯ ಹೀಗೆ ಹತ್ತು ಕಾರ್ಯಗಳಿವೆ.

# ಕಂಕಣಧಾರಣ ಕಾರ್ಯ

ಈ ಕಂಕಣಧಾರಣ ಕಾರ್ಯವನ್ನು ಅಂಕುರಾರ್ಪಣವನ್ನು ಮಾಡಿದ ದೇವರ ಕೋಲೆಯಲ್ಲಿ ವಧೂವರರನ್ನು ಸಮ್ಮುಖದಲ್ಲಿ ಕುಳ್ಳಿರಿಸಿಕೊಂಡು ಪುರೋಹಿತನು ದೇಶಕಾಲಾದಿಗಳನ್ನು ಉಚ್ಚರಿಸಿ:—

"ಏವಂ ಗುಣ...........ಅಸ್ಯಾಂ ಶುಭತಿಥೌ ವಿವಾಹಕರ್ಮ ಕರ್ತುಮಾದೌ ಶ್ರೀ ಪರಮೇಶ್ವರ ಪ್ರೀತ್ಯರ್ಥಂ ಕೌತುಕ ಬಂಧನಂ ಕರಿಷ್ಯಾಮಿ |"

ಹೀಗೆಂದು ಸಂಕಲ್ಪವನ್ನು ಮಾಡಿ, ರಂಗವಲ್ಲಿಯಿಂದ ಅಲಂಕಾರ ಮಾಡಿದ ಶುದ್ಧ ಪ್ರದೇಶದಲ್ಲಿ ಅಕ್ಕಿಯಿಂದ ತುಂಬಿದ ಒಂದು ತಟ್ಟೆಯನ್ನಿಟ್ಟು ಅದರಲ್ಲಿ ಕೈಯಿಂದ ನೂತಂಥ ನೂಲಿನ ಐದು ಎಳೆಯಿಂದ ವೀಳ್ಯೆದೆಲೆ ದರ್ಭೆ ಹಾಗೂ ಅರಿಷಿಣ ಕೊಂಬು (ಮಕ್ಕಳ ಬೇರೊಂದು) ಇವುಗಳನ್ನು ಕಟ್ಟಿ ತಯಾರ ಮಾಡಿದ ಕಂಕಣವನ್ನಿಟ್ಟು ಷೋಡಶೋಪಚಾರಗಳಿಂದ ಪೂಜಿಸಿ ಭಸ್ಮವನ್ನು ಸವರಿ—

ಮಂತ್ರ "ತ್ರ್ಯಂಬಕಂ ಯಜಾಮಹೇಸುಗಂಧಿಂ ಪುಷ್ಟಿವರ್ಧನಂ |
ಉರ್ವಾರುಕಮಿವ ಬಂಧನಾಸ್ಮೃತ್ಯೋರ್ಮುಕ್ಷೀಯ ಮಾಮೃತಾತ್ ||"
ಎಂಬ ಮಂತ್ರದಿಂದ ಅಥವಾ—
"ಸರ್ವಕಾಲೇ ಮಹಾನಾಥಾ | ಭಕ್ತಿರಸ್ತು ಕೃತೋಮಮ |
ತಸ್ಮಾತ್ ಬಧ್ವಾ ಕಂಕಣಶ್ಚ | ನಿಶ್ಚಯಂ ಶಿವಸಾಕ್ಷಿತಃ |
ಕಾಶ್ಮೀರೇ ವಸತೇಕನ್ಯಾ | ಲಂಕಾಯಾಂ ವಸತೇವರಃ |
ಅಕಟೋ ವಿಕಟಶ್ಚೈವ | ಗುರುರ್ಬಧ್ವಾಚ ಕಂಕಣಂ ||

ಎಂಬ ಮಂತ್ರದಿಂದ ವರನ ಬಲ ಮುಂಗೈಯಲ್ಲೂ,ವಧುವಿನ ಎಡ ಮುಂಗೈಯಲ್ಲೂ ಕಂಕಣವನ್ನು (ಧರಿಸುವದು)ಕಟ್ಟುವದು. ತದ ನಂತರ ಪುರೋಹಿತರಿಗೆ ವಂದಿಸಿ ಆಶೀರ್ವಾದ ಪಡೆಯಬೇಕು.

---

# ವಧೂವರರಿಗೆ-ದಂಡಿ-ಬಾಸಿಂಗ-ಧಾರಣೆ ಕ್ರಮವು

ಪಂಚಕಲಶ ಪೂಜಾ ಮುಗಿದ ತರುವಾಯ ಗುರುಮಹೇಶ್ವರ ಸನ್ನಿಧಿಯಲ್ಲಿ ಮಂಗಲವಾದ್ಯವಾಗುತ್ತಿರಲಾಗಿ ದಂಡಿ–ಬಾಸಿಂಗಗಳನ್ನು ಪೂಜಿಸಿ—

"ಶುಭಕೆ ಶಿರ ಆರೋಹ ಶೋಭಯಂತಿ ಮುಖಂ ಮಮ|
ಮುಖಗ್ಂ ಹಿಮಮ ಶೋಭಯಾ ಭೂಯಾಗ್ಂ ಸಂಚ ಭಗಂಕುರು||
ಯಾಮಾಃ ರಜ್ಜುಂ ಜಮದಗ್ನಿ ಶ್ರದ್ಧಾಯೈ ಕಾಮಾ ಯಾನ್ಯೈಇಮಾಂ
ತ್ವಾ ಮಪಿನ ಹ್ಯೆ ಹಂ ಭಗೇನ ಸಹವರ್ಚಸಾ||

ಎಂಬ ಮಂತ್ರದಿಂದ ವಧೂವರರ ಹಣೆಯಲ್ಲಿ ದಂಡಿ ಬಾಸಿಂಗವನ್ನು ಧರಿಸಬೇಕು. ಆ ಮೇಲೆ ವಧೂವರರು ಗುರುಗಳಿಗೂ, ಹಿರಿಯರಿಗೂ, ಇಷ್ಟ

ದೇವರಿಗೂ ನಮಸ್ಕಾರ ಮಾಡಿ, ವಿವಾಹ ಮಂಟಪಕ್ಕೆ ಉತ್ತರಭಾಗದಲ್ಲಿ ದರ್ಭೆಯಿಂದ ಹಾಸಲ್ಪಟ್ಟ ಚೌಕಿಯ ಮಣೆಯಮೇಲೆ ಪೂರ್ವ ದಿಕ್ಕಿಗೆ ಮುಖ ಮಾಡಿ ಬಂದು ಕುಳಿತುಕೊಳ್ಳಬೇಕು.

## ಮಧುಪರ್ಕ-ವಿಧಾನ

ಈ ಮಧುಪರ್ಕ ವಿಧಾನ ಕಾರ್ಯಕ್ಕೇ ರೂಢಿಯಲ್ಲಿ ರೂಪಾಂತರಿಸಿ ಕಾಲು ತೊಳೆಯುವ ನೇಮ'' ಎಂದು ಕರೆಯುವರು. ಈ ಕಾರ್ಯದಲ್ಲಿ ಕನ್ಯೆಯ ತಂದಿ ತಾಯಿಗಳು ವಧುವರರ ಪಾದಗಳನ್ನು ತೊಳೆದು ಪೂಜಿಸುವರು. ಈ ರೂಢಿಯು ನೀತಿಗೆ ವಿರೋಧವಾಗಿದೆ. ಯಾಕಂದರೆ ಹಿರಿಯರು-ಚಿಕ್ಕವರ ಪಾದ ತೊಳೆದು ಪೂಜಿಸುವದೆಂದರೆ ಮಹಾ ಅನ್ಯಾಯ-ಅಧರ್ಮವೆನಿಸುತ್ತದೆ. ಕಾರಣ ಈ ಕಾರ್ಯದಲ್ಲಿ ಕೇವಲ ಪೂಜಾ ಸಾಮಗ್ರಿಗಳನ್ನು ಸಿದ್ಧಪಡಿಸಿಟ್ಟುಕೊಂಡು ಕೆಳಗೆ ಬರೆದ ಕ್ರಮದಂತೆ ವಧೂವರರನ್ನು ಪ್ರೋಕ್ಷಣೆಯ ಮೂಲಕ ಸಂಕ್ಷೇಪವಾಗಿ ಪೂಜಿಸಬೇಕು.

ವರನು ಬಾಸಿಂಗ ಧರಿಸಿಕೊಂಡು ಚೌಕೀ ಮಣೆಯಮೇಲೆ ಬಂದು ಕೂತ ಬಳಿಕ ಕನ್ಯೆಯ ತಂದೆಯು ಪಾದ್ಯ-ಅರ್ಘ್ಯ-ಆಚಮನ-ಮಧುಪರ್ಕ ಹಾಗೂ ಪೂಜಾ ಸಾಮಗ್ರಿಗಗನ್ನು ತೆಗೆದುಕೊಂಡು ವರನ ಮುಂದೆ ಕುಳಿತು ಪ್ರಾಣಾಯಾಮಗಳನ್ನು ಮಾಡಿ ದೇಶ ಕಾಲಾದಿಗಳನ್ನು ಉಚ್ಚರಿಸಿ—

''ಕನ್ಯಾರ್ಥಿನೆ ಗೃಹಮಾಗತಾಯ। ತಸ್ಮೈವರಾಯ ಕನ್ಯಾದಾನಾಂಗ ಭೂತಂ ಮಧುಪರ್ಕಂ ಕರಿಷ್ಯೇ ''

ಹೀಗೆಂದು ಸಂಕಲ್ಪವನ್ನು ಮಾಡಿ, ಕನ್ಯೆದ ತಂದೆಯು ಪಾದ್ಯಾದಿಗಳನ್ನು ಕೈಯಲ್ಲಿ ತೆಗೆದುಕೊಂಡು ಪ್ರತಿಯೊಂದರ ಹೆಸರನ್ನು ೩ ಸಾರೆ ಅಂದು ಕೊನೆಗೆ ''ಪ್ರತಿಗ್ರಹ್ಯತಾಂ'' ಎಂದು ಅಂದು ವರನ ಕೈಯ್ಯಲ್ಲಿ ಕೊಡುವದು. ವರನು ಪ್ರತಿಸಾರೆಗೂ ''ಪ್ರತಿಗೃಹ್ಣಾಮಿ'' ಎಂದು ತೆಗೆದುಕೊಂಡು ದರ್ಭೆಯಿಂದ ತನ್ನ ಪಾದಗಳ ಮೇಲೆ ಪ್ರೋಕ್ಷಣೆ ಮಾಡಿಕೊಳ್ಳಬೇಕು. ಹೀಗೆ ಪಾದ್ಯ-ಅರ್ಘ್ಯ ಆಚಮನ ಮಧುಪರ್ಕಗಳನ್ನು ಮೂರು ಮೂರು ಸಾರೆಯಂತೆ ಮಾಡಬೇಕು ತದನಂತರ ಕನ್ಯೆದ ತಂದೆಯು ವರನಿಗೆ ನವೀನ ವಸ್ತ್ರಾಭರಣಳಿಂದ ಅಲಂಕರಿಸುವದು. ಆ ಬಳಿಕ ಒಂದು ಗಂಧದ ಕಲ್ಲಿನ ಮೇಲೆ ಅರಿಷಣದ ಗೌರಿಯನ್ನು ಮಾಡಿಟ್ಟು ಅದನ್ನು ಕನ್ಯೆಯು ಷೋಡಶೋಪಚಾರಗಳಿಂದ ಪೂಜಿಸಿ—

''ಕಾತ್ಯಾಯನೀ ನಮಸ್ತುಭ್ಯಂ ಶಂಕರ ಪ್ರಿಯಭಾಮಿನೀ।
ವಿವಾಹ ಭಾಗ್ಯಮಾರೋಗ್ಯಂ ಪುತ್ರಲಾಭಂಚ ದೇಹಿಮೇ॥

ಎಂದು ಗೌರಿಯನ್ನು ಪ್ರಾರ್ಥಿಸಿ ನಮಸ್ಕರಿಸಬೇಕು.

"ಇತಿ ಮಧುಪರ್ಕ-ಹಾಗೂ ಶ್ರೀ ಗೌರೀ ಪೂಜಾ ಸಮಾಪ್ತಾ ||

# ಕನ್ಯಾದಾನ-ವಿಧಾನವು

ಮೊದಲು ಪುರೋಹಿತನು ಕನ್ಯಾದಾನಾರ್ಥವಾಗಿ ಜಲಶುದ್ಧಿಯನ್ನು ಮಾಡಿಕೊಂಡಿರಬೇಕು. ಹೇಗೆಂದರೆ-ವಧೂವರರ ಮಧ್ಯದಲ್ಲಿ ಒಂದು ಅಕ್ಕಿ ಗುಡ್ಡೆಯಮೇಲೆ ದರ್ಭೆಯನ್ನು ಹಾಸಿ ಅದರ ಮೇಲೆ ಒಂದು ತುಂಬಿದ ಕಲಶ ವನ್ನಿಟ್ಟು ಅದನ್ನು ಪೂಜಿಸಿ "ಅಪೋಹಿಷ್ಟಾ....ಸ್ವಸ್ತಿಭಿಸ್ಸದಾನಃ" ಎಂಬ ಮಂತ್ರ ದಿಂದ ಅಭಿಮಂತ್ರಿಸಿ ಶುದ್ಧೀಕರಣವನ್ನು ಮಾಡಿಟ್ಟುಕೊಂಡಿರಬೇಕು ತದನಂತರ

ಕನ್ಯೆಯ ತಂದೆ-ತಾಯಿಗಳು ಕರೆತಂದು ಮಧುಪರ್ಕ ವಿಧಿಯು ಮುಗಿದ ತರುವಾಯ ವಧೂವರರು ಪಂಚಕಲಶದ ಸ್ಥಾಪನೆಯ ಸ್ಥಾನದೊಳು ಗುರು ಸಮ್ಮುಖದಲ್ಲಿ ಶಾಶಕ್ಕಿಯಿಂದ ತಯಾರಿಸಿದ ಭದ್ರಾಸನದ ಮೇಲೆ ಕುಳ್ಳಿರಿಸಲು ಪುರೋಹಿತರು ಕಲಶಕ್ಕೆ ಹೊದಿಸಿದ್ದ ವಸ್ತ್ರವನ್ನು ತೆಗೆದು ಸೂತ್ರವನ್ನು ವರನ ಕೈಯಲ್ಲಿ ಕೊಟ್ಟು, ಕನ್ಯೆಯ ಕೈಯನ್ನು ವರನ ಕೈಯೊಳಿರಿಸಬೇಕು. ತದನಂತರ ಹಸ್ತಪೂಜಾ-ಮಸ್ತಕ ಪೂಜಾ ವಗ್ಯೆರೆಗಳನ್ನು ಸಕ್ರಮವಾಗಿ ಷೋಡಶೋಪಚಾರ ಗಳಿಂದ ಪೂಜಿಸಬೇಕು. ಆ ಬಳಿಕ ಕನ್ಯೆಯ ತಂದೆಯು ಪತ್ನೀ ಸಮೇತನಾಗಿ ವಧೂವರರ ಬಲಭಾಗದಲ್ಲಿ ಕುಳಿತುಕೊಂಡು ಆಚಮನ ಪ್ರಾಣಾಯಾಮಗಳನ್ನು ಮಾಡಿ ಕೈಯಲ್ಲಿ ಅಕ್ಷತೆಯನ್ನು ತೆಗೆದುಕೊಂಡು ಗುರುಭಕ್ತ ಮಹೇಶ್ವರರ ಸಾಕ್ಷಿ ಯಾಗಿ ಸಂಕಲ್ಪ ಮಾಡಬೇಕು. ಹೇಗೆಂದರೆ- ದೇಶಕಾಲಾದಿಗಳನ್ನು ಹೇಳಿ—

"ಏವಂಗುಣ....ಶುಭತಿಥೌ ಮಮಾಸ್ಮಾತ್ಕುಲೀನಾಂಚ ನಿರತಿಶಯ ಶಿವ ಪ್ರಸಾದ ರೂಪ ನಿರತಿಶಯಾನಂದಾ ವಾಪ್ತ್ಯರ್ಥಂ ಕನ್ಯಾದಾನಕಲ್ಪೋಕ್ತ ಫಲಾ ವಾಪ್ತಯೇ ಅನೇನ ವರೇಣ ಅಸ್ಯಾಂ ಕನ್ಯಾಯಾಂ ಉತ್ಪಾದಯಿಷ್ಯೆ ಮಾಣ ಸಂತತ್ಯಾ ದ್ವಾದಶ ಪೂರ್ವಾನ್ ದ್ವಾದಶ ಪರಾನ್ ಪುರುಷಾಂಶ್ಚ ಪವಿತ್ರೀಕರ್ತುಂ ಆತ್ಮನಶ್ಚ ಶ್ರೀ ಸಾಂಬ ಸದಾಶಿವ ಪ್ರೀತಯೇ ಬ್ರಾಹ್ಮ್ಯ ವಿವಾಹ ವಿಧಿನಾ ಶ್ರೀ ಮದನಂತ ಕಲ್ಯಾಣ ಗುಣಗಣಾಲಂಕಾರ ಶ್ರೀ ಗುರು ಭಕ್ತ ಮಹೇಶ್ವರ ಪರಶಿವ ಲೀಲಾ ಮಹಾ ಪ್ರಮಥ ಗಣಾನಾಂ ಮಧ್ಯೇ ಷೋಡಶ ಮಹಾದಾನಾಂತರ್ಭೂತ ಕನ್ಯಾದಾನ ಮಹಂ ಕರಿಷ್ಯೇ||"

ಹೀಗೆಂದು ಸಂಕಲ್ಪವನ್ನು ಮಾಡಿ ವರನ ಹಸ್ತದಲ್ಲಿ ಬಂಗಾರವನ್ನು ಕೊಟ್ಟು ಹೆಂಡತಿಯ ಸಹಿತವಾಗಿ ಮೊದಲು ಅಭಿಮಂತ್ರಿಸಲ್ಪಟ್ಟ ಕಲಶೋದಕವನ್ನು ತಕ್ಕೊಂಡು ಮೇಲಕ್ಕೆ ಎದ್ದು ನಿಂತು ತನ್ನ ಮಗಳನ್ನು ಹಸ್ತದಿಂದ ಮುಟ್ಟಿ—

ಮಂತ್ರ "ಕನ್ಯಾಂ ಕನಕ ಸಂಪನ್ನಾಂ ಕನಕಾಭರಣೈರ್ಯುತಾಂ|

ದಾಸ್ಯಾ ಮಿ ಶಂಭವೇ ತುಭ್ಯಂ ಶಿವಲೋಕ ಜಿಗೀಷಯಾ||
ವಿಶ್ವಂಭರಾಃ ಸರ್ವ ಭೂತಾಃ ಸಾಕ್ಷಿಣ್ಯಸ್ಸರ್ವ ದೇವತಾಃ|
ಇಮಾಂ ಕನ್ಯಾಂ ಪ್ರದಾಸ್ಯಾಮಿ ಶಂಭೋಃ ಪ್ರೀತಿಕರಾಯಚ||

ಎಂಬ ಮಂತ್ರದಿಂದ ಒಂದು ಕಂಚಿನ ಪಾತ್ರೆಯಲ್ಲಿ ಅಥವಾ ಒಂದು ಗಂಗಾಳದಲ್ಲಿ ವರನ ಬೊಗಸೆಯನ್ನು ಇಡಿಸಿ, ಆ ಬೊಗಸೆಯ ಮೇಲೆ ಕನ್ಯೆಯಳ ಬೊಗಸೆಯನ್ನಿರಿಸಿ ಆ ಕನ್ಯೆಯಳ ಬೊಗಸೆಯಲ್ಲಿ ಒಂದು ಟೆಂಗಿನಕಾಯಿಯನ್ನು ಇಟ್ಟು ದಂಪತಿಗಳು ಕೂಡಿಯೇ ಅಕ್ಷತೆ ದರ್ಭೆ ಬಂಗಾರ ಸಹಿತವಾದ ಕಲಶೋಧಕವನ್ನು ಸಾವಕಾಶವಾಗಿ ಧಾರೆ ಎರೆಯುತ್ತ:--

"ಇಂಥ ಗೋತ್ರೋತ್ಪನ್ನ ಇಂಥವರ ಮೊಮ್ಮಗಳೂ, ಮಗಳೂ ಆದ ಇಂಥ ಹೆಸರಿನ ಶ್ರೀ ಗೌರೀಸ್ವರೂಪಳಾದ ಕನ್ಯಾರತ್ನವನ್ನು: ಇಂಥ ಗೋತ್ರೋತ್ಪನ್ನ ಇಂಥವರ ಮೊಮ್ಮಗ, ಇಂಥವರ ಮಗನಾದ ಇಂಥ ಹೆಸರಿನ ಶಿವನ ಸ್ವರೂಪನಾದ ವರನಿಗೋಸ್ಕರ ನನ್ನ ಸಮಸ್ತ ಪಿತ್ರಾದಿಗಳಿಗೆ ಶಾಶ್ವತವಾದ ಶಿವಲೋಕ ಪ್ರಾಪ್ತಿಗಾಗಿಯೂ, ಶ್ರೀ ಪಾರ್ವತಿ ಪರಮೇಶ್ವರನ ಪ್ರೀತಿಗಾಗಿಯೂ ನಾನು ಕನ್ಯಾದಾನವನ್ನು ಮಾಡುತ್ತೇನೆ. ಗ್ರಹಿಸಬೇಕು. ಆನಂತರ-ವರನು--

"ಓಂ ಸ್ವಸ್ತಿ" ಎಂದು ಹೇಳಿ ಕನ್ಯೆಯ ಬಲಭಾಗವನ್ನು ಮುಟ್ಟುವದು ಹೀಗೆ ಮೂರುಸಾರೆ ಮಾಡಬೇಕು. ಆ ಮೆಲೆ--

ಕನ್ಯೆಯ ತಂದೆಯು ವರನನ್ನು ಕುರಿತು-- "ದಮೇಚ, ಅರ್ಥೇಚ, ಕಾಮೇಚ ನಾತಿಚರಿತವ್ಯಾತ್ವಯೇಯಂ" ಎಂದು ಅನ್ನಬೇಕು. ಇದಕ್ಕೆ—

(ಅಂದರೆ ಧರ್ಮ-ಧನ-ಇಚ್ಛೆ ಇವುಗಳಲ್ಲಿ ಅತಿಕ್ರಮಿಸಿ ನಡೆಯಕೂಡದೆಂದು ಅರ್ಥ)

ವರನು-- "ನಾತಿಚರಾಮಿ" ಎಂದು (ಅತಿಕ್ರಮಿಸುವದಿಲ್ಲ) ಅನ್ನಬೇಕು.

(ಹೀಗೆ ಅಭಯವಚನವನ್ನು ಕೊಡುವದು) ಇದರಂತೆ ಮೂರುಸಾರೆ ಉಭಯತಾಪಿ ಹೇಳಬೇಕು. ಆ ಬಳಿಕ—

ವಧುವಿನ ತಂದೆಯು-- ತನ್ನ ಶಕ್ತ್ಯಾನುಸಾರವಾಗಿ ಬಂಗಾರ-ಬೆಳ್ಳಿ (ರೂಪಾಯಿ) ಮುಂತಾದವುಗಳನ್ನು ಶುದ್ಧೋದಕ ಸಹಿತವಾಗಿ ಕೈಯಲ್ಲಿ ತೆಗೆದುಕೊಂಡು ದೇಶಕಾಲಾದಿಗಳನ್ನುಚ್ಚರಿಸಿ—

"ಕೃತಸ್ಯ ಕನ್ಯಾದಾನಸ್ಯ ಪ್ರತಿಷ್ಠಾ ಸಿದ್ಧ್ಯರ್ಥಂ ಇಮಾಂ |
ದಕ್ಷಿಣಾಂ ತುಭ್ಯಮಹಂ ಸಂಪ್ರದದೆ ||"

ಹೀಗೆಂದು ಸಂಕಲ್ಪವನ್ನು ಮಾಡಿ ಕೈಯಲ್ಲಿ ಹಿಡಿದುಕೊಂಡು ಶುದ್ಧೋದಕ ಸಹಿತ ಬಂಗಾರವನ್ನು ವರನ ಹಸ್ತದಲ್ಲಿ ಕೊಡಬೇಕು. ಅದಕ್ಕೆ—

ವರನು— "ಓಂ ಸ್ವಸ್ತಿ" ಎಂದು ಹೇಳಿ ಆ ದಕ್ಷಿಣೆಯನ್ನು ಸ್ವೀಕರಿಸಿ

ಅದನ್ನು ವಧುವಿನ ಉದರಕ್ಕೆ ಮುಟ್ಟಿಸಿ ತೆಗೆಯಬೇಕು. ಆ ಬಳಿಕ ವಧೂವರರು ಹಾಲು ತುಪ್ಪದಲ್ಲಿ ಹಸ್ತಗಳನ್ನಿಟ್ಟು ಪರಸ್ಪರ ಹಸ್ತದ ಮೇಲೆ ಹಸ್ತವನ್ನು ಮೂರು ಮೂರು ಸಾರೆ ಸವರಿ ಎಳೆಯಬೇಕು. ತದನಂತರ ಅಕ್ಕೀ ಹಿಟ್ಟಿನಿಂದ ಅಥವಾ ಗೋದೀಹಿಟ್ಟು ಇಟ್ಟು ಹಸ್ತಗಳನ್ನು ತೊಳೆದುಕೊಳ್ಳಬೇಕು.

# ಗುಡಜೀರಕ ಕಾರ್ಯ

ಕನ್ಯಾದಾನ ಕಾರ್ಯ ಮುಗಿದ ನಂತರ ಈ ಗುಡಜೀರಕ ಕಾರ್ಯವನ್ನು ಮಾಡಬೇಕು. ಗುಡಜೀರಕವೆಂದರೆ ಬೆಲ್ಲ-ಜೀರಿಗೆಯು. ಇವುಗಳನ್ನು ಕೂಡಿಸಿ ವಧೂವರರ ಬೊಗಸೆಯಲ್ಲಿ ಈ ಬೆಲ್ಲ-ಜೀರಿಗೆಗಳನ್ನು ಕೊಟ್ಟು ಪುರೋಹಿತನು-

"ಸತ್ಯೇನೋತ್ತ ಭಿತಾಭೂಮಿ। ಸೂರ್ಯೇಣೋತ್ತಂ ಭಿತಾದ್ಯೌಃ।
ಋತೇನಾದಿತ್ಯಾಸ್ತಿಷ್ಟಂತಿ ದಿವಿಸೋಮೋ ಆಧಿಶ್ರಿತಃ॥

ಎಂಬ ಸೂರ್ಯ ಸೂಕ್ತ ಮಂತ್ರವನ್ನು ಅನ್ನುತ್ತಿರಲು ವಧುವಿನಿಂದ ವರನ ಶಿರಶ್ಶಿನ ಮೇಲೂ, ವರನಿಂದ ವಧುವಿನ ಶಿರಶ್ಶಿನ ಮೇಲೂ ಬೊಗಸೆಯಲ್ಲಿದ್ದ ಜೀರಿಗೆ-ಬೆಲ್ಲವನ್ನು ಹಾಕಿಸಬೇಕು.

ಇಷ್ಟಾದ ನಂತರ ವಧೂವರರ ಬೊಗಸೆಯಲ್ಲಿ ಮಂತ್ರಾಕ್ಷತೆಗಳನ್ನು ಕೊಡಬೇಕು. ಆ ಮೇಲೆ ಅವರು ಪರಸ್ಪರ ಕೆಳಗಿನ ವಾಕ್ಯಗಳನ್ನು ಉಚ್ಚರಿಸುತ್ತ ಮೊದಲು ವಧುವು ವರನ ಶಿರಸ್ಸಿನ ಮೇಲೂ ನಂತರ ವರನು ವಧುವಿನ ಶಿರಸ್ಸಿನ ಮೇಲೂ ಹಾಕಬೇಕು. ಹೇಗೆಂದರೆ—

ವಧು:— "ಭಗೋಮೇ ಕಾಮಃ ಸಮೃದ್ಧ್ಯತಾಂ।" ಹೀಗೆಂದು ವರನ ಶಿರಸ್ಸಿನ ಮೇಲೆ ಹಾಕಬೇಕು. ಆ ಬಳಿಕ—

ವರ:— "ಯಜ್ಞೋಮೇ ಕಾಮಃ ಸಮೃದ್ಧ್ಯತಾಂ" ಹೀಗೆಂದು ವಧುವಿನ ಶಿರಸ್ಸಿನ ಮೇಲೆ ಹಾಕಬೇಕು. ಇದರಂತೆ—

ವಧು:— "ಶ್ರೀ ಯೋಮೇ ಕಾಮಃ ಸಮೃದ್ಧ್ಯತಾಂ"

ವರ:— "ಯಶೋಮೇ ಕಾಮಃ ಸಮೃದ್ಧ್ಯತಾಂ"

ವಧು:— "ಪ್ರಜಾಮೇ ಕಾಮಃ ಸಮೃದ್ಧ್ಯತಾಂ"

ವರ:— "ಧರ್ಮೋಮೇಕಾಮಃ ಸಮೃದ್ಧ್ಯತಾಂ"

ಈ ಪ್ರಕಾರವಾಗಿ ಪುರೋಹಿತನು ವಧೂವರರಿಂದ ಪರಸ್ಪರ ಅಕ್ಷತಾರೋಪಣವನ್ನು ಮಾಡಿಸಬೇಕು. ಈ ಕಾಲಕ್ಕೆ ಮಂಗಳಾಷ್ಟಕವನ್ನಾಗಲೀ ಅಥವಾ ಮಂಗಲ ಪಂಚಕವನ್ನಾಗಲೀ ಪಠಿಸುತ್ತಿರಬೇಕು.

# ಮಾಂಗಲ್ಯಧಾರಣ ವಿಧಾನ

ಈ ಮಾಂಗಲ್ಯಧಾರಣ ಕಾರ್ಯವನ್ನು ಗುಡಜೀರಕ ಕಾರ್ಯ ಮುಗಿದ ನಂತರ ಮಾಡಬೇಕು. ಹೇಗಂದರೆ ಅಕ್ಕಿಯಿಂದ ತುಂಬಿದ ಒಂದು ತಟ್ಟೆಯಲ್ಲಿ ಕುಂಕುಮ ಅಥವಾ ಅರಿಷಣ ಪುಡಿಯಿಂದ ಅಷ್ಟದಳ ಕಮಲವನ್ನು ಬರೆದು, ಅದ ರಲ್ಲಿ ಮಾಂಗಲ್ಯ (ತಾಳಿ) ಹಾಗೂ ಫಲ ತಾಂಬೂಲಾದಿಗಳನ್ನು ಇಡಬೇಕು. ತದನಂತರ ಆ ಮಂಗಲಸೂತ್ರಕ್ಕೆ ಪೂಜಿಸಿ—

ಮಂತ್ರ ''ಸರ್ವಮಂಗಲ ಮಾಂಗಲ್ಯೇ ಶಿವೇ ಸರ್ವಾರ್ಥಸಾಧಕೇ |
ಶರಣ್ಯೇತ್ರ್ಯಂಬಕೇ ದೇವೀ ನಾರಾಯಣಿ ನಮೋಸ್ತುತೇ ||

ಹೀಗೆಂದು ಮಾಂಗಲ್ಯಾಧಿದೇವತೆಯಾದ ಶ್ರೀ ಗೌರಿಯನ್ನು ಪ್ರಾರ್ಥಿಸ ಬೇಕು. ಆ ಬಳಿಕ ಆ ಮಾಂಗಲ್ಯಕ್ಕೆ ಗುರು ಹಿರಿಯರ ಹಾಗೂ ಮುತ್ತೈದಿಯ ವರ ಹಸ್ತವನ್ನು ಮುಟ್ಟಿ ಆಶೀರ್ವದಿಸಿದ ನಂತರ ಮಂಗಲವಾದ್ಯವಾಗುತ್ತಿರಲು ವರನು ಮಂಗಲಸೂತ್ರವನ್ನು ತನ್ನ ಕೈಯಲ್ಲಿ ತೆಗೆದುಕೊಂಡು—

ಮಂತ್ರ ''ಮಾಂಗಲ್ಯ ತಂತುನಾನೇನ ಮಮಜೀವನಹೇತುನಾ |
ಕಂಠೇ ಬಧ್ನಾಮಿಸುಭಗೇ ತ್ವಂ ಜೀವ ಶರದಾಂಶತಂ ||

ಎಂಬ ಮಂತ್ರವನ್ನು ಪಠಿಸುತ್ತ ವಧುವಿನ ಕೊರಳಲ್ಲಿ ಧರಿಸಬೇಕು. ಆ ಬಳಿಕ ವಧುವನ್ನು ವರನ ಎಡಭಾಗದಲ್ಲಿ ಕೂಡ್ರಿಸಬೇಕು.

# ಪಾಣಿಗ್ರಹಣ ವಿಧಾನ

## ( ಹಸ್ತಾಂದೋಲನ ಕಾರ್ಯ )

ವಧುವು ತನ್ನ ಬಲ ಹಸ್ತವನ್ನು ಹೆಬ್ಬೆರಳು ಸಹಿತವಾಗಿ ಉದ್ದಕ್ಕೆ ಚಾಚ ಬೇಕು. ವರನೂ ಸಹ ತನ್ನ ಬಲಹಸ್ತವನ್ನು ಉದ್ದವಾಗಿ ಮಾಡಿ, ಚಾಚಲ್ಪಟ್ಟ ವಧುವಿನ ಹಸ್ತವನ್ನು ಗ್ರಹಣ ಮಾಡಬೇಕು. ಇದಕ್ಕೆ ಹಸ್ತಾಂದೋಲನವೆನ್ನು ವರು. ಹೀಗೆ ಹಸ್ತಾಂದೋಲನ ಮಾಡುವ ಸಮಯದಲ್ಲಿ—

''ಓಂ ಗೃಹ್ಣಾಮಿತೇ ಸೌಭಗತ್ವಾಯ ಹಸ್ತಂಮಯಾ ಪತ್ಯಾ
ಜರದೃಷ್ಟಿರ್ಯಥಾಸಃ | ಭಗೋ ಆರ್ಯಮಾ ಸವಿತಾ ಪುರಂಧಿರ್ಮ
ಹ್ಯಂತ್ವಾ ದುರ್ಗಾರ್ಹ ಪತ್ಯಾಯದೇವಾಃ"

ಎಂಬ ಮಂತ್ರವನ್ನು ಪಠಿಸಬೇಕು. ನಂತರ ವಧೂ-ವರರ ಹಸ್ತಗಳನ್ನು ತೊಳಿಸಿ ಅಲ್ಲಿ ನೆರೆದ ಮುತ್ತೈದೆಯರಿಗೆ ಫಲ ತಾಂಬೂಲಗಳನ್ನು ಕೊಡಬೇಕು.

|| ಇತಿ ಪಾಣಿಗ್ರಹಣ ವಿಧಿ ಸಮಾಪ್ತಿ ||

# ಆಜ್ಯಕ್ಷೀರ ವಿಧಾನ

ಒಂದು ಗಂಗಾಳದಲ್ಲಿ ಹಾಲು-ತುಪ್ಪವನ್ನು ಹಾಕಿ ಕೆಳಗಿನ ಮಂತ್ರವನ್ನು ಪಠಿಸುತ್ತ ದಂಪತಿಗಳ ಹಸ್ತವನ್ನು ಆ ಗಂಗಾಳದಲ್ಲಿ ಎದ್ದಿಸಿ ಪರಸ್ಪರವಾಗಿ ದಂಪತಿಗಳು ಒಬ್ಬರ ಹಸ್ತದ ಮೇಲೊಬ್ಬರು ಮೂರು-ಮೂರು ಸಾರೆ ಎಳಿಯ ಬೇಕು. ಹೀಗೆ ಹಸ್ತ ಎಳೆಯುವಾಗ—

''ಭರ್ತಾಸ್ವಸ್ತ್ರೀಯ ಮಾಣೋಪಿ ಕ್ಷೀರಾಜ್ಯ ಸ್ಪರ್ಶನಂಭವೇತ್ ।
ಪಾತ್ರೇಕ್ಷೀರಾಜ್ಯ ಸಂಯುಕ್ತಂ ಮೌಕ್ತಿನ್ವೇಷಣಂ ವದೇತ್ ॥
ಸಾಕ್ಷಿಣ್ಯ ಸರ್ವದೇವಾಶ್ಚ ತರುಗುಲ್ಮಾಲತಾ ಯದಯಃ ।
ಪಶುಪಕ್ಷಿ ಮೃಗಾದ್ಯಶ್ಚ ನಾಕ್ಷಿಸಾಕ್ಷಿಃ ಪ್ರಮಾಣಯೋಃ ॥
ತವ ಸಂರಕ್ಷಣಾರ್ಥಶ್ಚ ತವಮಾನಸ ಪಾಲಯೇ ।
ಕ್ಷೀರಶರ್ಕರ ಹಸ್ತಂಶ್ಚ ಸಾಕ್ಷಿತ್ವಾಂ ಪಾಲಯಾಮ್ಯಹಂ ॥
ತವಭಕ್ತಿ ಮಹಾಶ್ರದ್ಧಾ ತವಪೂಜಾ ಪರಾಯಣೇ ।
ತವಧ್ಯಾನಾನುರಕ್ತಾಹಂ ನಿಶ್ಚಯಂ ಶೃಣು ನಿಶ್ಚಯಂ ॥
ಎಂಬ ಮಂತ್ರವನ್ನು ಅನ್ನಬೇಕು.

## ಮೌಕ್ತಿಕ ದರ್ಶನ ವಿಧಿ

ವಧೂ-ವರರ ಹಸ್ತಗಳನ್ನು ಹಾಲು-ತುಪ್ಪದಲ್ಲಿ ಎದ್ದಿಸಿದ ತರುವಾಯ ಅದೇ ಹಾಲು-ತುಪ್ಪ ಹಾಕಿದ ಗಂಗಾಳದಲ್ಲಿ ಅಥವಾ ಒಂದು ಅಕ್ಕಿ ತುಂಬಿದ ತಟ್ಟೆಯಲ್ಲಿ ಒಂದು ಮುತ್ತಿನ ಮೂಗುತಿಯನ್ನಾಗಲೀ, ಅಥವಾ ಒಂದು ನತ್ತನ್ನಾಗಲೀ,ಇಲ್ಲವೇ ಒಂದು ಬಂಗಾರದ ಹರಳಿನ ಉಂಗುರುವನ್ನಾಗಲೀ ಇಟ್ಟು ದಂಪತಿಗಳಿಂದ ಅದನ್ನು ಹುಡುಕಿಸಬೇಕು. ಅದು ಯಾರ ಕೈಯಲ್ಲಿ ಸಿಗುವದೋ ಅಂದರೆ ವರನ ಕೈಯಲ್ಲಿ ಸಿಕ್ಕರೆ ವಧುವು ಕೆಳಗಿನಂತೆ ಹೇಳಿ ವರನಿಂದ ತೆಗೆದು ಕೊಳ್ಳಬೇಕು. ಒಂದು ವೇಳೆ ವಧುವಿನ ಕೈಯಲ್ಲಿ ಮೊದಲು ಸಿಕ್ಕರೆ ವರನು ಕೆಳಗಿನಂತೆ ಹೇಳಿ ವಧುವಿನಿಂದ ತೆಗೆದುಕೊಳ್ಳಬೇಕು. ಪುರೋಹಿತನು—

ಪತ್ನಿಯ ಬಾಯಿಂದ—''ಮುತ್ತಕಂಡೆ, ರತ್ನಕಂಡೆ, ರತ್ನದಂಥ (ಪತಿಯ ಹೆಸರು ಹೇಳಿ) ಪತಿದೇವನ ಕಂಡೆ" ಹೀಗೆ ಹೇಳಿಸಬೇಕು. ಈ ಪ್ರಕಾರ—

ಪತಿಯ ಬಾಯಿಯಿಂದ—"ಮುತ್ತುಕಂಡೆ, ಮಾಣಿಕ್ಯಕಂಡೆ, ಮಾಣಿಕ್ಯ ದಂಥ (ಪತ್ನಿಯ ಹೆಸರು ಹೇಳಿ)ಹೆಂಡತಿಯ ಕಂಡೆ''ಎಂದು ಹೇಳಿಸಬೇಕು. ಈ ಕಾರ್ಯವನ್ನು ದಂಪತಿಗಳ ಪ್ರೇಮಾಭಿವೃದ್ಧಿಯ ಸಲುವಾಗಿ ಮಾಡುವ ಪದ್ಧತಿಯಾಗಿದೆ.

### ಪಾದಸಂಘಟ್ಟನ ವಿಧಾನ

ವರನು ತನ್ನ ಪಾದಾಂಗುಷ್ಟ ಬೆರಳಿನಿಂದ ವಧುವಿನ ಪಾದಾಂಗುಷ್ಠ ಬೆರಳಿಗೆ ಮುಟ್ಟಿಸುತ್ತಿರಲು ಪುರೋಹಿತನು ಕೆಳಗಿನ ಮಂತ್ರವನ್ನು ಹೇಳಬೇಕು. ಆನಂತರ ವರನ ಪಾದಗಳಿಗೆ ವಧುವು ನಮಸ್ಕಾರ ಮಾಡಬೇಕು.

"ಏಕಪದೀಚ ದ್ವಿಪದೀ ತ್ರಿಪದೀಚ ಚತುಷ್ಪದಿ ।
ಪಂಚಪದೀ ವಧುವರೌ ಪಾದೋತ್ಥಾಪನ ಮಾಚರೇತ್ ॥"

  

## ಅಕ್ಷತಾರೋಪಣ ವಿಧಾನ

ಈ ಅಕ್ಷತಾರೋಪಣ ಕಾರ್ಯ ವಿಧಾನವು ದಾನ-ಧರ್ಮಗಳಲ್ಲಿ ಆರನೆಯದಾಗಿದ್ದು; ಇದಕ್ಕೆ ಹೆಚ್ಚಿನ ಪ್ರಾಧಾನ್ಯತೆಯಿದೆ. ಈ ಕಾರ್ಯದಲ್ಲಿ ಪುರೋಹಿತನು ಮೊದಲು ವಧೂ-ವರರ ಬೊಗಸೆಯಲ್ಲಿ ಮಂತ್ರಾಕ್ಷತೆಗಳನ್ನು ಕೊಟ್ಟು, ವಧುವಿನಿಂದ ವರನ ಶಿರಸ್ಸಿನ ಮೇಲೆಯೂ, ಆ ನಂತರ ವರನಿಂದ ವಧುವಿನ ಶಿರಸ್ಸಿನ ಮೇಲೆಯೂ ಅಕ್ಕೀಕಾಳನ್ನು ಹಾಕಿಸಬೇಕು. ಆ ಮೇಲೆ ಸರ್ವರೂ ಅಕ್ಕೀಕಾಳನ್ನು ವಧೂ-ವರರ ಮಸ್ತಕದ ಮೇಲೆ ಹಾಕಬೇಕು. ಮೊದಲು ವಧುವು ವರನ ಶಿರಸ್ಸಿನ ಮೇಲೆ—

"ಕನ್ಯೇ ಕರಾಗ್ರ ತಂಡೂಲಂ ಮಸ್ತಕ ಸ್ಪರ್ಶನಂ ।
ಮಂಗಲ ಕಲ್ಯಾಣಂ ಇಷ್ಟಸಿದ್ಧಿ ಶುಭಂ ಭವೇತ್ ॥"

ಎಂಬ ಮಂತ್ರವನ್ನು ಪುರೋಹಿತನು ಹೇಳುತ್ತಿರಲು ತನ್ನ ಬೊಗಸೆಯಲ್ಲಿಯ ಅಕ್ಕೀಕಾಳನ್ನು ಹಾಕಬೇಕು. ಇದರಂತೆ—

ಮಂತ್ರ "ಪತಿಕರಾಗ್ರ ತಂಡೂಲಂ ಕನ್ಯೇ ಮಸ್ತಕದರ್ಶನಂ।
ಸ್ಪರ್ಶನಂ ಮಂಗಲ ಕಲ್ಯಾಣಂ ಇಷ್ಟ ಸಿದ್ಧಿ ಶುಭಂಭವೇತ್॥"

ಎಂಬ ಮಂತ್ರವನ್ನು ಪುರೋಹಿತನು ಹೇಳುತ್ತಿರಲು ವರನು ತನ್ನ ಬೊಗಸೆಯಲ್ಲಿ ಹಿಡಿದುಕೊಂಡ ಅಕ್ಕಿಕಾಳನ್ನು ವಧುವಿನ ಮಸ್ತಕದ ಮೇಲೆ ಹಾಕಬೇಕು. ಆ ಮೇಲೆ—

## ಸರ್ವರೂ ಅಕ್ಕೀಕಾಳನ್ನು ಹಾಕುವ ಮಂತ್ರ

ಸುಮೂರ್ತೆ ಸ್ಸಾವಧಾನ ಬ್ರಹ್ಮಾವಿದಂತಿ ತಸ್ಮಾತ್ರರಂಹಾ । ವಿಘ್ನೇಶ್ವರಾಯ ವಿನಾಯಕಾಯ । ಕಲ್ಯಾಣಮಸ್ತು ಶ್ರೀ ಶೈಲವಾಸಾಂ| ಕಲ್ಯಾಣವಾಸಾಂ| ಶುಬವಂಶಯಾತೆ ಜನನೀ ವರಾಂತು ನಿರುತೀ ಶುಭಂ ॥೧॥

ವಸಂತ ಲಕ್ಷ್ಮೀ ವನರಾಜ ಲಕ್ಷ್ಮೀ| ಕ್ಷೀರಾಬ್ಧ್ಯಪುತ್ರಿ ಕಮಲಾಯತಾಕ್ಷಿ| ವಿಷ್ಣುಷ್ಣೋಶ್ಚ ಪತ್ನಿ ಮಾತೃಶಿವಾಸಾಂ ಕರಣಾಸುಹೃದಯಾ ॥೨॥

ತದೇವ ಲಗ್ನಂ ಸುದಿನಂತು ದೇವ | ತಾರಾಬಲಂ ಚಂದ್ರಬಲಂತು ದೇವ| ವಿದ್ಯಾಬಲಂ ದೈವಬಲಂತು ದೇವ || ಗೌರೀಪತೇ ತೇsಂಘ್ರಿ ಯುಗಂ ಸ್ಮರಾಮಿ ||೩|| ಸುಮುಹೂರ್ತೇsಸ್ತ್ವಾವಧಾನಸ್ತ್ವ ಲಗ್ನ ಸ್ತ್ವಾವಧಾನ| ಪಾರ್ವತಿ ಪರಮೇಶ್ವರ ಧ್ಯಾನೋತ್ಸವ ಸ್ತ್ವಾವಧಾನಂ||

ಎಂಬ ಮಂತ್ರವನ್ನು ಪುರೋಹಿತನು ಹೇಳಿದ ನಂತರ ಸರ್ವರೂ ವಧೂವರರ ಮಸ್ತಕದ ಮೇಲೆ ಅಕ್ಕೀಕಾಳನ್ನು ಹಾಕಬೇಕು. ಕಾಲಾವಕಾಶವಿದ್ದರೆ ಪುರೋಹಿತನು ಈ ಪ್ರಕರಣದ ಕೊನೆಯಲ್ಲಿ ಬರೆದ ಮಂಗಳಾಷ್ಟಕವನ್ನು ಹೇಳಿ ಅಕ್ಷತಾರೋಪಣವನ್ನು ಮಾಡಬೇಕು.

|| ಇತಿ ಅಕ್ಷತಾರೋಪಣ-ವಿಧಾನ ಸಮಾಪ್ತ ||

## ನಾಶಿಕಾಭರಣ ವಿಧಾನವು

ಮಂತ್ರ "ಮಾಹೇಶ್ವರೀ ಮಹಾದೇವಿ ಶಾರದಾ ಭುವನೇಶ್ವರೀ ಇದಂ
ಸರ್ವ ಮಾಯುಃ| ಶಾಂತಿಸ್ತುಷ್ಟಿಶ್ಚಾತ್ತು ಪುಷ್ಟಿಶ್ಚಾಸ್ತು ||"

ಎಂಬ ಮಂತ್ರದಿಂದ ವರನು ಒಂದು ನತ್ತನ್ನಾಗಲೀ ಅಥವಾ ಒಂದು ಮೂಗುತಿಯನ್ನಾಗಲೀ ಕೈಯೊಳಗೆ ತೆಗೆದುಕೊಂಡು ಅದನ್ನು ಪತ್ನಿಯ ಮೂಗಿಗೆ ಮುಟ್ಟಿಸಬೇಕು. ಅಥವಾ ಮೂಗಿನಲ್ಲಿ ಇಡಬೇಕು. ಆದರೆ ಆ ಮೂಗುತಿಯನ್ನು ಮೊದಲೇ ಪುರೋಹಿತನು ಒಂದು ಅಕ್ಕಿ ತುಂಬಿದ ತಟ್ಟೆಯಲ್ಲಿಟ್ಟು ಅದನ್ನು ಪೂಜಿಸಿ ಗುರುಹಿರಿಯರಿಂದಲೂ, ಮುತ್ತೈದೆಯರಿಂದಲೂ ಹಸ್ತ ಮುಟ್ಟಿಸಿಟ್ಟಿರಬೇಕು.

## ಫಲಧಾನ ವಿಧಾನ

ಒಂದು ತಟ್ಟೆಯಲ್ಲಿ ತಾಂಬೂಲ-ದಕ್ಷಿಣೆ ಕಾರೀಕ-ಬಾಳೇಹಣ್ಣು ಹಾಗೂ ಎರಡು ಟೆಂಗಿನಕಾಯಿಗಳನ್ನಿಟ್ಟು ದಂಪತಿಗಳು ಅದನ್ನು ಪೂಜಿಸಿದ ಬಳಿಕ—

"ಹಿರಣ್ಯಗರ್ಭ ಗರ್ಭಸ್ಥಂ ಹೇಮಬೀಜಂ ವಿಭಾವಸೋಃ |
ಅನಂತಪುಣ್ಯ ಫಲದ ಮತಶ್ಶಾಂತಿಂ ಪ್ರಯಚ್ಛಮೇ ||"
ಎಂಬ ಮಂತ್ರದಿಂದ ಪತ್ನಿಯ ಸಂಗಡ ಜಲಧಾರೆಯನ್ನೆರೆಸಿ—
"ಫಲಂ ಮನೋರಥ ಫಲಂ ಪ್ರದದಾತಿ ಸದಾನೃಣಾಂ |
ಪುತ್ರಪೌತ್ರಾಭಿವೃದ್ಧ್ಯೈರ್ಥ್ಯಂ ಮತಶ್ಶಾಂತಿ ಪ್ರಯಚ್ಛಮೇ ||"
"ಇದಂ ಫಲದಾನಂ ಸದಕ್ಷಿಣಾಕಂ ಸತಾಂಬೂಲಂ ಸದಾಶಿವ ಪ್ರಸಾದ
ಕಾಮಯಮಾನಸ್ತುಭ್ಯಮಹಂ ಸಂಪ್ರದದೇನಮಮ ನಮಮ"

ಎಂಬ ಮಂತ್ರದಿಂದ ಮಹೇಶ್ವರರಿಗೆ ಅಥವಾ ಗುರುಗಳಿಗೆ ದಾನ ಮಾಡಬೇಕು. ಆ ಬಳಿಕ ಮಹೇಶ್ವರರು ಆಶೀರ್ವಾದ ಪೂರ್ವಕವಾಗಿ ದಂಪತಿಗಳಿಗೆ ಫಲಗಳನ್ನು ಉಡಿತುಂಬಬೇಕು,

ಆಶೀರ್ವಾದ ಮಂತ್ರ:—

"ಭದ್ರಂ ಕರ್ಣೇ ಭಿಶ್ಶೃಣುಯಾಮದೇವಾಃ|
ಭದ್ರಂ ಪಶ್ಯೇ ಮಾಕ್ಷ ಭಿರ್ಯ ಜತ್ರಾಃ||
ಸ್ಥಿರೇಭಿರಂಗೈಸ್ತುಷ್ಟು ವಾಂಸಸ್ತನೂಭಿಃ |
ವ್ಯಶೇಮ ದೇವಹಿತಂ ಯದಾಯುಃ ||"

ಅಥವಾ

ಶ್ರೀ ಯಾಂ ವರ್ಛಸ್ಯ ಮಾಯುಷ್ಯಮಾರೋಗ್ಯ-
ಮಾಯು ಧಾತ್ರೋಭಾಯಮಾನಂ| ಮಹಿತೇ
ಧನಂ ಪಶು ಬಹುಪುತ್ರ ಲಾಭಂ ಶತಸಂವತ್ಸರ ದೀರ್ಘಮಾಯುಃ||

## ಧಾತುಬದ್ಧ ವಿಧಾನ

(ಬ್ರಹ್ಮಗಂಟು ಕಟ್ಟುವ ಕ್ರಮ)

ಮಂತ್ರ- "ಹರಿದ್ರ ಶೃಂಗ ಪೂಗಂಚ ಗುಡಜೀರಕ ಪಂಚಧಾ|
ವಧೂವರಾಂಬರಾಗ್ರೇಣ ಭಧ್ವಾಶೀರ್ವಾದ ಪೂರ್ವಕಂ||

ಎಂಬ ಮಂತ್ರದಿಂದ ವಧೂವರರ ಶೆರಗುಗಳಲ್ಲಿ ಬೆಲ್ಲ-ಜೀರಿಗೆ ಹಾಗೂ ಅರಿಷಣ ಕೊಂಬು ಬೆಟ್ಟಡಕಿ, ದಕ್ಷಿಣೆ (ಬಂಗಾರ) ಶಕ್ತ್ಯಾನುಸಾರ, ಗಂಟುಕಟ್ಟಿ ಪರಸ್ಪರವಾಗಿ ಒಬ್ಬರಿಗೊಬ್ಬರ ಶೆರಗನ್ನು ಏಕಮಾಡಿ ಒಂದೇ ಗಂಟುಕಟ್ಟಿ ಆಶೀರ್ವಾದ ಮಾಡುವದು ಹೀಗೆ ವಿಧಾನೋಕ್ತವಾಗಿ ಕಟ್ಟಿದ ಗಂಟಿಗೆ "ಬ್ರಹ್ಮಗಂಟು" ಎಂಬ ಹೆಸರು.

## ಅರುಂಧತೀ ದರ್ಶನ-ವಿಧಾನ

ಒಂದು ತಟ್ಟೆಯಲ್ಲಿ ಅಕ್ಕಿಯನ್ನಾಗಲೀ ಅಥವಾ ಗೋದಿಯನ್ನಾಗಲೀ ತುಂಬಿ ಅದರ ಮೇಲೆ ಒಂದು ಮುತ್ತನ್ನಿಡಬೇಕು. ಇದೇ ಮುತ್ತು ಅರುಂಧತಿಯೆಂದು ಕಲ್ಪಿಸಿ ಅದನ್ನು ಪೂಜಿಸಿ—

ಮಂತ್ರ:— "ಪತಿವ್ರತಾ ಲಕ್ಷಣ ಲಕ್ಷತಾಂಗೀ ಸನ್ಮಾರ್ಗಗಾಮೀ ಶುಭ ಸೌಖ್ಯ ದಾಯೀ | ಅರುಂಧತೀನಾಮ ವಶಿಷ್ಠ ಪತ್ನೀ ವಧೂ-ವರಾಭ್ಯಾಂ ವರದಾ ಭವಂತು | ಶಿವಸ್ಯ ಪತ್ನೀ ಗಿರಿರಾಜಪುತ್ರೀ ವಧೂವರಾಭ್ಯಾಂ ವರದಾ ಭವಂತು | ಬಸವೇಶ ಪತ್ನೀ ಬಲದೇವ ಪುತ್ರೀ ವಧೂವರಾಭ್ಯಾಂ ವರದಾ ಭವಂತು |

ಎಂಬ ಮಂತ್ರವನ್ನು ಹೇಳುತ್ತ ಅರುಂಧತಿ ಧರ್ಶನವನ್ನು ಮಾಡಿಸಬೇಕು. ವೀರಶೈವರು ಇದಕ್ಕೆ ಗೌರೀ ದರ್ಶನವೆಂದು ಭಾವಿಸಿ ಮೇಲಿನ ಮಂತ್ರವನ್ನು ಹೇಳಿಸಿ:—

"ಶ್ರೀ ಪಾರ್ವತೀ ನಮಸ್ತುಭ್ಯಂ ಶಂಕರಪ್ರಿಯ ಭಾಮಿನೀ ।
ವಿವಾಹಭಾಗ್ಯ ಮಾರೋಗ್ಯಂ ಪುತ್ರ ಲಾಭಂಚ ದೇಹಿಮೇ ॥"

ಹೀಗೆಂದು ಗೌರಿಯನ್ನು ಪ್ರಾರ್ಥಿಸುತ್ತ ತೋರಿಸಬೇಕು. ಪುರೋಹಿತರು ಈ ದರ್ಶನದ ಅರ್ಥವನ್ನು ಕೆಳಗಿನಂತೆ ದಂಪತಿಗಳಿಗೆ ಬೋಧೆ ಮಾಡುವದು.

ವಧುವಿಗೆ-- ಅನುಸೂಯಾ, ಅಕ್ಕಮಹಾದೇವಿಯವರಂತೆ ನೀನೂ ಮಹಾ ಪತಿವ್ರತೆಯಾಗಬೇಕು. ಇದಕ್ಕೆ ಬೇಕಾಗುವ ಸಕಲ ಸದ್ಗುಣಗಳನ್ನು ನಿನ್ನಲ್ಲಿ ಸಂಪಾದಿಸಿ ಅಳವಡಿಸಿಕೊಳ್ಳಬೇಕು. ಪತಿಯ ಮೇಲೆ ಅತುಲ ಭಕ್ತಿ ವಿಶ್ವಾಸ ಪ್ರೇಮಗಳನ್ನಿಡಬೇಕು. ಪತಿಯ ಸುಖ ದುಃಖಗಳೇ ನಿನ್ನ ಸುಖ ದುಃಖಗಳೆಂದು ನೀನು ಭಾವಿಸಿಕೊಂಡು ನಡೆಯಬೇಕು. ಪತಿಸೇವೆಯನ್ನು ಮಾಡುವದರಲ್ಲಿ ನೀನು ಹಿಂದೆ ಮುಂದೆ ನೋಡಬಾರದು. ಪತಿಯಾಜ್ಞೆಯನ್ನು ಎಂದೆಂದಿಗೂ ಮೀರಬಾರದು. ಪತಿಯಾಜ್ಞೆಯನ್ನು ಮೀರಿದ್ದಕ್ಕೆ ಸೀತಾದೇವಿಯು ರಾವಣ ನಿಂದ ಕಷ್ಟವನ್ನು ಅನುಭವಿಸಬೇಕಾಯಿತು. ಕಾರಣ ನೀನು ಪತಿದೇವನ ಹೊರ್ತಾಗಿ ಅನ್ಯದೇವರಿಲ್ಲೆಂದು ತಿಳಿಯಬೇಕು. ಅಂದರೆ ಇಹದಲ್ಲಿ ಕೀರ್ತಿ ಯನ್ನೂ ಪರದಲ್ಲಿ ಸೌಖ್ಯವನ್ನೂ ನಿಸ್ಸಂದೇಹವಾಗಿ ಪಡೆಯುವಿ. ಮುಂತಾಗಿ ಬೋಧಿಸುವದು. ಧರ್ಮ, ಅರ್ಥ, ಕಾಮ ಈ ಮೂರರಲ್ಲಿ ಸಹಕರಿಸಿ ನಡೆಯ ಬೇಕು. ಆದರ್ಶ ಗೃಹಿಣಿಯಾಗಬೇಕು.

ವರನಿಗೆ- ಶ್ರೀ ಬಸವೇಶ ವಸಿಷ್ಠ ಋಷಿಗಳಂತೆ ನೀನು ಮಹಾ ಏಕಪತ್ನೀ ವ್ರತನಿಷ್ಠೆಯುಳ್ಳವನಾಗಬೇಕು. ಅನ್ಯ ಸ್ತ್ರೀಯರೆಂದರೆ ಅಕ್ಕತಂಗಿಯರಂತೆ ಕಾಣ ಬೇಕು. ನಳ ಮಹಾರಾಜನಂತೆ ಹೆಂಡತಿಯನ್ನು ಅಡವಿಯಲ್ಲಿ ಬಿಟ್ಟು ಪಲಾಯನ ಮಾಡಬಾರದು. ಕಷ್ಟದಲ್ಲಿಯೂ ಸುಖದಲ್ಲಿಯೂ ಹೆಂಡತಿಯನ್ನು ತನ್ನ ಪ್ರಾಣ ದಂತೆ ರಕ್ಷಿಸಬೇಕಲ್ಲದೆ ಸದಾ ದಯವಂತನಾಗಿರಬೇಕು. ಧರ್ಮ-ಅರ್ಥ-ಕಾಮ ಈಮೂರರಲ್ಲಿ ಸದಾ ಸಹಕರಿಸಿಕೊಂಡು ನಡೆಯಬೇಕು. ಆದರ್ಶ ಪತಿಯಾಗ ಬೇಕು. ಮುಂತಾಗಿ ಬೋಧಿಸುವದು. ಆ ಬಳಿಕ ದಂಪತಿಗೆ ಮುತ್ತೈದೆಯರು ಆರತಿ ಮಾಡಿ ಎಬ್ಬಿಸಬೇಕು. ಹಾಗೂ ಗುರು-ಮಹೇಶ್ವರ ಪುರೋಹಿತರಿಗೆ ಯೋಗ್ಯತಾನುಸಾರ ದಕ್ಷಿಣೆ ಕೊಟ್ಟು ನಮಸ್ಕರಿಸಬೇಕು. ತದನಂತರ ದೇವರ ಕೋಲಿಗೆ ಹೋಗಿ ಕುಲದೇವರಿಗೆ ನಮಸ್ಕರಿಸಬೇಕು. ಬಲವುಳ್ಳವರಿಂದ ದಂಡಿ ಬಾಸಿಂಗಗಳನ್ನು ಬಿಚ್ಚಿಸಬೇಕು.

---

## ವಿವಾಹದ ಕೊನೆಯ ಕಾರ್ಯ

ವಧೂ ವರರು ಒಳಗೆ ಹೋದ ತರುವಾಯ ಯಜಮಾನನು ಗುರು-ಮಹೇ ಶ್ವರ ಪುರೋಹಿತರಿಗೆ ಅವರವರ ಹಕ್ಕು ಬಾಬುಗಳ ಪ್ರಕಾರ ಗೊತ್ತುಪಡಿಸಿದ ಕಾಣಿಕೆಗಳನ್ನು, ತಾಂಬೂಲ ದಕ್ಷಿಣೆ ಸಹಿತ ಕೊಟ್ಟು ಸಂತೋಷಪಡಿಸಿ ಪಂಚ

ಕಲಶಗಳನ್ನು ವಿಸರ್ಜನ ಮಾಡಿಸಬೇಕು. ಕೇವಲ ದಗ್ಧ ಹಸ್ತದಿಂದ ಕೊಡುವೆ ನೆಂದು ಭವಿಷ್ಯತ್ಕಾಲ ತೋರಿಸಿ, ವಿಸರ್ಜನ ಮಾಡಬಾರದು. ಇದು ಅಧರ್ಮ ವೆನಿಸುವದು. ಕಾರಣ ಯೋಗ್ಯ ದಕ್ಷಿಣಿ-ಕಾಣಿಕೆಗಳನ್ನು ಕೊಟ್ಟು ಪಂಚಕಲಶ ವಿಸರ್ಜನೆ ಮಾಡಿಸಬೇಕು.

## ಪಂಚ ಕಲಶ ವಿಸರ್ಜನ ವಿಧಾನ

ಪಂಚ ಕಲಶ ವಿಸರ್ಜನೆಯನ್ನು ಉತ್ಕ್ರಮವಾಗಿ ಮಾಡಬೇಕಾಗುವದು. ಆದಿಯಿಂದ ಅಂತ್ಯದ ವರೆಗೆ ಮಾಡುವ ಪದ್ಧತಿಗೆ ಕ್ರಮಬದ್ಧ ಪದ್ಧತಿಯೆನ್ನು ವರು. ಅಂತ್ಯದಿಂದ ಆದಿಯ ವರೆಗೆ ಮಾಡುವ ಕ್ರಮಕ್ಕೆ ಉತ್ಕ್ರಮವೆನ್ನುವರು. ಆ ಪ್ರಕಾರವಾಗಿ ಈ ವಿಸರ್ಜನ ವಿಧಾನವನ್ನು ಅಂತ್ಯದಿಂದ ಆದಿಯ ವರೆಗೆ ಮಾಡುತ್ತ ಬರಬೇಕು. ವಿಘ್ನೇಶ್ವರನನ್ನು ಮೊದಲು ಸ್ಥಾಪಿಸುವ ಕಾರಣ ಅವ ನನ್ನು ಕೊನೆಗೆ ವಿಸರ್ಜನೆಗೊಳಿಸಬೇಕಾಗುವದು. ಇನ್ನು ಪುರೋಹಿತರು ಮತ್ತು ಅಲ್ಲಿ ನೆರೆದ ಕೆಲ ಮಠಾಧಿಪತಿಗಳು ತಮ್ಮ ತಮ್ಮ ಸೂತ್ರದ ಕಲಶಗಳನ್ನು ಹಿಡಿ ದುಕೊಂಡು—

ಮಂತ್ರ:— "ಗಚ್ಛಗಚ್ಛ ಗಣಶ್ರೇಷ್ಠ । ಗಚ್ಛಗಚ್ಛ ಜಗದ್ಗುರೋ ॥
ಸದಾ ಪ್ರಸೀದ ದೇವೇಶ । ಪುನರಾಗಮನಾಯಚ॥"

ಎಂಬ ಮಂತ್ರದಿಂದ ವಿಸರ್ಜನೆಗೊಳಿಸಿ ಕಲಶಗಳ ಮೇಲೆ ಧರಿಸಿದ ಪುಷ್ಪ ಪತ್ರಿಗಳನ್ನು ಕೆಳಗೆ ತೆಗೆದು ನಮಸ್ಕಾರ ಮಾಡಬೇಕು.

ಇದೇ ಪ್ರಕಾರವಾಗಿ ಸ್ವಸ್ತಿ ಪುಣ್ಯಾಹವಾಚನ ಅಂಕುರಾರ್ಪಣಾದಿಗಳನ್ನು ವಿಸರ್ಜನೆ ಮಾಡುವಾಗ:-

ಮಂತ್ರ:- "ಗಚ್ಛ ಗಚ್ಛ ಮಹಾದೇವಿ। ಗಚ್ಛ ಗಚ್ಛ ಮಹೇಶ್ವರೀ ।
ಸದಾ ಪ್ರಸೀದ ಶರ್ವಾಣಿ। ಪುನರಾಗಮನಾಯಚ ॥"

ಎಂಬ ಮಂತ್ರವನ್ನು ಹೇಳಿ ವಿಸರ್ಜನ ಮಾಡಬೇಕು. ಇನ್ನು ನಾಂದಿ ಸಮಾರಾಧನೆಯನ್ನು ವಿಸರ್ಜನೆ ಮಾಡುವಾಗ:—

ಮಂತ್ರ:- "ಗಚ್ಛ ಗಚ್ಛ ಗಣಶ್ರೇಷ್ಠ । ಗಚ್ಛ ಗಚ್ಛ ದಯಾನಿಧೆ ।
ಸದಾ ಪ್ರಸೀದ ದೇವೇಶ । ಪುನರಾಗಮನಾಯಚ ॥"

ಹೀಗೆಂದು ಹೇಳಿ ವಿಸರ್ಜನೆಯನ್ನು ಮಾಡಬೇಕು. ಆ ಬಳಿಕ ಶ್ರೀಗಣೇ ಶನನ್ನು ವಿಸರ್ಜನೆ ಮಾಡುವಾಗ:-

ಮಂತ್ರ:- "ಗಚ್ಛ ಗಚ್ಛ ಗಣಾಧ್ಯಕ್ಷ। ಗಚ್ಛ ಗಚ್ಛ ಗಣಾಧಿಪ ।
ಸರ್ವದಾ ಸರ್ವಕಾರ್ಯೇಷು । ಶೀಘ್ರಂ ಸನ್ನಿಹಿತೋಭವ ॥"

ಎಂದು ಹೇಳಿ ವಿಸರ್ಜನೆ ಮಾಡಬೇಕು. ತದನಂತರ ವಧೂವರರು ಗುರುಗಳ ಪಾದಪೂಜೆಯನ್ನು ಮಾಡಿ ಗುರುಪಾದೋದಕವನ್ನು ಸ್ವೀಕರಿಸಿ ಅವರನ್ನು ಭೋಜನ ದಕ್ಷಿಣೆಗಳಿಂದ ತೃಪ್ತಿಗೊಳಿಸಿ ತಾವು ಸಹಿತವಾಗಿ ಸರ್ವರೂ ಸಂತೋಷದಿಂದ ಭೋಜನ ಮಾಡಬೇಕು.

|| ಇತಿ ವಿವಾಹ ವಿಧಾನ ಸಮಾಪ್ತ ||

# ಮಂಗಳಾಷ್ಟಕ

ಕಲ್ಯಾಣೈಕ ನಿಧಾನ ಭೂತ ಮಿತಿಯತ್ಕಾಲಾಗ್ನಿ ರುದ್ರಾದಿಭಿಃ ।
ಪ್ರಖ್ಯಾತೋಪನಿಷದ್ಭಿರಥ್ಯ ವಶಿತಂ ವಿಧ್ವಸ್ತ ಪಾಪವ್ರಜಂ||
ಭಸ್ಮೇತಿಸ್ಮೃತಿ ಮಾತ್ರತೋಭುವಿನೃಣಾಂ ಮೌನೀಂದ್ರ ಭೋಗ ಪ್ರದಂ।
ರುದ್ರಾಣೀರಮಣ ಪ್ರಿಯಂ ತದಮಿತದಂಕುರ್ಯಾತ್ಸದಾ ಮಂಗಳಂ ||೧||
ಲೋಕೇಶ್ರೀಶಿಶಿರಕ್ಷಮಾಧರಸುತಾ ಕಾಂತಾಕ್ಷಿ ಪಂಕೇರುಹ।
ಸ್ಯಂ ದೀಕ್ಷೀರಕಣೋದಿತಂ ಹಿಯದಿತಿ ಖ್ಯಾತಂ ಪುರಾಣೇಶ್ರುತೌ||
ಶ್ರೇಯಸ್ಸಾಧನತಾಂ ದಧಾನಮನಿಶಂ ಶೈವಪ್ರಮೋದಾವಹಂ।
ರುದ್ರಾಕ್ಷಂ ಶ್ರಿತರಕ್ಷಕಂ ತದಮಿದಂ ಕುರ್ಯಾತ್ಸದಾ ಮಂಗಳಂ ||೨||
ಸ್ವಾಂತರ್ಗರ್ಭಿತ ಸರ್ವ ಮಂತ್ರ ಕಲನಾ ಲಬ್ಧವ್ಯ ನಾನಾಫಲಂ।
ಸ್ಮಾರಂ ಸ್ಮಾರಮಿಹಸ್ಮರಾರಿ ಸದನಂ ಪಂಚಾಕ್ಷರಂ ಪಾವನಂ||
ಯಚ್ಛೈವಾಃ ಪ್ರತರಂತಿ ದುಸ್ತರ ಮಹಾಸಂಸಾರ ವಾರಾಂನಿಧಿಂ|
ಭೂಯಸ್ತದ್ವರ ಮಂತ್ರರತ್ನ ಮಮಿತಂ ಕುರ್ಯಾತ್ಸದಾ ಮಂಗಳಂ ||೩||
ಅಜ್ಞಾನಾತಿ ಶಯಾಧಿಕಾಂಧತಮಸಾ ತ್ಯಂದಸ್ಯ ಪುಂಸಸ್ಸದಾ।
ಸುಜ್ಞಾನಂ ಜನಸಾಧನೇನ ಮಹತಾ ಚಕ್ಷುಸ್ಸಮುನ್ಮೀಲಿತಂ||
ಯೇನ ಸ್ವಚ್ಛಮತುಚ್ಛ ಭೂರಿ ಕರುಣಾ ಕಲ್ಲೋಲಿನೀ ವಲ್ಲಭ।
ಶ್ರೀಮಾನ್ ಸದ್ಗುರು ರತ್ನಸೈಷ ಭಗವಾನ್ಕುರ್ಯಾತ್ಸದಾ ಮಂಗಳಂ ||೪||
ಸಂಬಂಧಾತಿಶಯಂ ಸದಾ ವಿರಜಯತ್ತ್ಯಾಗಾಂಗ ಯೋಗಾಂಗ ಸ|
ದ್ಭೋಗಾಂಗ ಪ್ರತಿಭೇದ ಭಿನ್ನತನುಷು ಶ್ರತ್ಯಂತ ಸಂಘೈಸ್ತುತಂ||
ಲಿಂಗಾಂಗದ್ವಯ ಸಾಮರಸ್ಯ ವಿಲಸಚ್ಛ್ರೀತ ಸ್ವರೂಪಪ್ರದಂ।
ಲಿಂಗಂ ಶ್ರೀಕರಮುತ್ತಮಂ ತದಮಿತಂಕುರ್ಯಾತ್ಸದಾಮಂಗಳಂ ||೫||
ಜಾನತೀಹ ಮುಹುಃಕ್ಷಿತಾವತಿಶಯಂ ವಿಶ್ವ ಪ್ರಕಾಶಪ್ರಭುಂ|
ವೇದಾಂತೈಃ ಪ್ರತಿಪಾದಿತಂ ಪರಶಿವಂ ಸ್ವೀಯಸ್ವರೂಪೇಣಯಃ||
ನಾನಾ ಘೋರತರಾಘಪೂಗತಿ ಮಿರಪ್ರಧ್ವಂಸನದ್ಯೋಮಣಿ|
ಸ್ಸೋಯಂ ಶ್ರೀವರಜಂಗಮಸ್ಸಮಧಿಕಂ ಕುರ್ಯಾತ್ಸದಾಮಂಗಳಂ ||೬||

ಪೀಠಸ್ಥಾಪಯತ್ಪರವಂ ಪವಿತ್ರಮಮಲಂ ಕೈಲಾಸ ಶೈಲೋಲ್ಲ ಸಚ್ಛ।
ರ್ಪೋದಗ್ರವರ ಪ್ರದೇಶ ಪದವೀ ಸೋಪಾನ ಭೂತಂ ಸದಾ ॥
ಭಕ್ತ್ಯಾಭೂಮಿತಳೇ ಸಮೀಹಿತತತಿಂ ಸಂಪ್ರಾಪ್ನುವಂತ್ಯಾದರಾ।
ತ್ತತ್ಪಾದೋದಕಮಿಷ್ಟದಂ ಸಮಧಿಕಂ ಕುರ್ಯಾತ್ಸದಾ ಮಂಗಳಂ ॥೭॥
ಜುಷ್ಟಾಖ್ಯಯಂ ಶೃತಿ ಶಂಶಿತಂ ಪುರಹರ ಪ್ರೇಮಪ್ರಕರ್ಷಾಸ್ಪಂದಂ।
ಶಸ್ತಂಧ್ವಸ್ತ ಸಮಸ್ತ ದುಷ್ಕೃತಗಣಂ ಸ್ವಶ್ರೇಯಸ ಶ್ರೀಪದಂ॥
ಸಾಂದ್ರಾನಂದ ಭರಾಭವಂತಿ ಪುರುಷಾಸ್ಸರ್ವೇ ಪಿಹೋರ್ಪಿತಳೇ।
ಹೃದ್ಯಸ್ಸತ್ರಿ ವಿಧಃಪ್ರಸಾದ ನೀಚಯಃಕುರ್ಯಾತ್ಸದಾಮಂಗಳಂ ॥೮॥
ಸ್ಪಷ್ಟಾವರಣ ಪ್ರಚಾರ ಚತುರಶ್ಚೈವ ವೀರಶೈವಾಗ್ರಣಿಃ।
ಪಂಚಾಚಾರ ವಿಚಾರ ಚಾರುಚತುರಃ ಸ್ವಚ್ಛಾಂತರಂಗಸ್ಸದಾ॥
ಸಂಖ್ಯಾವಜ್ಜನಗೀಯ ಮಾನವಿಲ ಸನ್ಮಾಹಾತ್ಮ್ಯ ಸಂಭಾವಿತೋ
ಭಕ್ತಾನುಗ್ರಹಕೃತ್ಪುರಾತನ ಗಣಃ ಕುರ್ಯಾತ್ಸದಾ ಮಂಗಳಂ ॥೯॥
ಲೋಕೇಶಾಂಭವ ಮಂಗಳಾಷ್ಟಕಮಿದಂ ಸರ್ವೇಷ್ಟ ಸಿದ್ಧಿಪ್ರದಂ।
ಭಕ್ತ್ಯಾಯಃ ಪಠತಿ ಪ್ರಹೃಷ್ಟಹೃದಯಃ ಶ್ಲಾಘ್ಯಂ ಸುಧೀಭೀರ್ಮುಹುಃ॥
ಶ್ರೀನಿರ್ವಾಣಮುದಾಪ್ತಯೇ ವಿರಚಿತಂ ಯೋವಾಶೃಣೋತ್ಯಾದರಾ।
ತ್ತಂಸಸ್ತನ್ಯ ಸದಾಶಿವಸ್ಸಮಧಿಕಂ ಕುರ್ಯಾತ್ಸದಾ ಮಂಗಳಂ ॥೧೦॥
॥ ಸುಮುಹೂರ್ತಸ್ಸಾವಧಾನಸ್ಸುಲಗ್ನಂ ಸಾವಧಾನಂ ॥

# ಮಂಗಲ ಪಂಚಕವು

ಸದ್ಯೋಜಾತ ಮುಖಾದವಾಪ್ಯ ಜನನಂ ಯಃ ಕೊಲ್ಲಿಪಾಕೀಪುರೇ।
ಸೋಮೇಶಾಭಿಧಲಿಂಗತಃ ಸಮಭವನ್ಮಾಹಾತ್ಮ್ಯಮುಚ್ಚೈರ್ಮುದಾ ॥
ಪೀಠಂ ಶ್ರೀಕದಲೀಪುರೇ ವ್ಯರಚಯತ್ಸಂಬೋಧ್ಯ ಕುಂಭೋದ್ಭವಂ।
ಸ ಶ್ರೀರೇವಣಸಿದ್ಧ ದೇಶಿಕವರಃ ಕುರ್ಯಾತ್ಸದಾ ಮಂಗಲಂ ॥೧॥
ಶ್ರೀ ಮಚ್ಛಂಕರ ವಾಮದೇವವದನಾಪಾದ್ಯ ದಿವ್ಯಾಂ ಜನಿಂ।
ಶ್ರೀ ಸಿದ್ಧೇಶ್ವರಲಿಂಗತಃ ಸಮುದಯನ್ ಭೂಲೋಕಮುದ್ಧಾರಯನ್॥
ಪೀಠಂಚೋಜ್ಜಯಿನೀಪುರೇ ವಿರಚಯನ್ ಯೋಲೋಕವಂದ್ಯೋಬಮಃ।
ಸಶ್ರೀಮನ್ಮರುಲಾರ್ಯದೇಶಿಕವರಃ ಕುರ್ಯಾತ್ಸದಾ ಮಂಗಲಂ ॥೨॥
ಶರ್ವಾಘೋರಮುಖಾರವಿಂದ ಜನಿತಃ ಸಪ್ತರ್ಷಿಮಾನ್ಯೋ ಗುರು।
ರ್ದ್ರಾಕ್ಷಾರಾಮಸುರಾಮ ಲಿಂಗಮುಖತಃ ಸಂಭೂಯ ಶೀತಾಚಲೇ ॥
ಶ್ರೀ ಸಿಂಹಾಸನ ಮಾರಚಯ್ಯ ವಸತಿಂ ಚಕ್ರೇ ಚ ತತ್ರೈವ ಯಃ।
ಏಕೋರಾಮಗುರುಃ ಸಪೂರ್ಣ ಕರುಣಃ ಕುರ್ಯಾತ್ಸದಾ ಮಂಗಲಂ

ಶ್ರೀ ಮತ್ತತ್ಪುರುಷಾನನಾಬ್ಜ ಜನಿತೋ ದೇವೈಃ ಸದಾ ಪೂಜಿತಃ ।
ಶ್ರೀಶೈಲಸ್ಥಿತ ಮಲ್ಲಿಕಾರ್ಜುನ ಮಹಾಲಿಂಗಾಂಗತಃ ಸಂಭವನ್ ॥
ಸಂಸ್ಥಾಪ್ಯೋತ್ತಮ ವೀರಶೈವ ಪದವೀ ಯೋ ವೈರರಕ್ಷ ಕ್ಷಿತಿಂ ।
ಸ ಶ್ರೀ ಪಂಡಿತನಾಮ ದೇಶಿಕವರಃ ಕುರ್ಯಾತ್ಸದಾ ಮಂಗಲಂ ॥೪॥

ಈಶಾನಾನನ ಸಂಭವಃ ಕ್ಷಿತಿತಲೇ ವಿಶ್ವೇಶ ಲಿಂಗೋದ್ಭವಃ ।
ಕಾಶ್ಯಾಂ ಮೋಕ್ಷ ಫಲೈಕಸಾಧನವಿಧೌ ಸಿಂಹಾಸನಾತಿಷ್ಠತಃ ॥
ಶ್ರುತ್ಯುಕ್ತೋತ್ತಮ ವೀರಶೈವ ಪದವೀಂ ಸಂಸ್ಥಾಪಯಾಮಾಸ ಯೋ ।
ವಿಶ್ವಾರಾಧ್ಯಗುರೋತ್ತಮಃ ಸ ಕೃಪಯಾ ಕುರ್ಯಾತ್ಸದಾ ಮಂಗಲಂ ॥೫॥

# ನ ವ ಮ — ರ ತ್ನ

## ದತ್ತ ಪುತ್ರನನ್ನು ಸ್ವೀಕರಿಸುವ ವಿಧಾನವು

### ಪೂರ್ವ ಪೀಠಿಕಾ

ಈ ಜಗತ್ತಿನಲ್ಲಿ ಮನುಷ್ಯನು ತನ್ನ ವಂಶಾಭಿವೃದ್ಧಿಯ ಸಲುವಾಗಿ ತನ್ನ ಪೀಳಿಗೆ (ಸಂತಾನ)ವನ್ನು ಬಿಟ್ಟು ಪರಂಧಾಮಗೈಯಲು ಇಚ್ಛಿಸುತ್ತಿರುವದು ಪ್ರತಿಯೊಬ್ಬ ಮಾನವನ ನೈಸರ್ಗಿಕ (ಸ್ವಾಭಾವಿಕ)ಗುಣಧರ್ಮವಾಗಿದೆ. ಒಂದು ವೇಳೆ ಸಂತಾನವೇ ಆಗದಿದ್ದರೆ "ನನ್ನ ವಂಶವು ಹೇಗೆ ಅಭಿವೃದ್ಧಿಯಾದೀತು ?" ಎಂಬ ಪ್ರಶ್ನೆಯೊಂದು ಹುಟ್ಟುವದು. ಹೀಗೆ ಸಂತಾನವಿಲ್ಲದ ಪಕ್ಷದಲ್ಲಿ "ಅಪುತ್ರಸ್ಯ ಗತಿರ್ನಾಸ್ತಿ" ಎಂಬಂತೆ ಮೋಕ್ಷ ಪ್ರಾಪ್ತಿಯಾಗಲಾರದೆಂಬ ಸಮಸ್ಯದ ಪರಿಹಾರ ಸಲುವಾಗಿ "ವಾತುಲಾಗಮದಲ್ಲಿ" ಶಿವ-ಪಾರ್ವತಿಯರ ಸಂವಾದದಲ್ಲಿ— ಪಾರ್ವತಿಯ ಪ್ರಶ್ನೆಗೆ ಪರಮೇಶ್ವರನು ಉತ್ತರಿಸಿದ್ದೇನಂದರೆ

ಹೇ ಪಾರ್ವತಿ ದೇವಿಯೇ; ಪ್ರಾಕೃತ ದ್ವಿಜಾದಿಯಾದ ಜೀವರು ದೇವ ಋಣ, ಋಷಿಋಣ, ಪಿತೃಋಣಗಳೆಂಬ ಋಣತ್ರಯಗಳಿಂದ ಬಂಧಿತರಾಗಿರುತ್ತಾರೆ. ಆದ್ದರಿಂದ ಅಂಥ ದ್ವಿಜರು ಯಜ್ಞ ಯಾಗಾದಿಗಳನ್ನಾಚರಿಸಿ ದೇವತೆಗಳ ಋಣವನ್ನೂ, ತರ್ಪಣದಿಂದ ಋಷಿ ಋಣವನ್ನೂ, ಸಂತಾನೋತ್ಪತ್ತಿಯಿಂದ ಪಿತೃ ಋಣವನ್ನೂ ತೀರಿಸಿ ಮುಕ್ತರಾಗಬೇಕಾಗುತ್ತದೆ. ಒಂದು ವೇಳೆ ಇವುಗಳನ್ನು ಬಿಟ್ಟರೆ ದ್ವಿಜರಿಗೆ ಮೋಕ್ಷ ಪ್ರಾಪ್ತಿಯಾಗದು.

ಆದರೆ ಅಪ್ರಾಕೃತ ಜೀವರೂ, ಚರಮ ದೇಹಿಗಳೂ, ಶಿವ ಸಂಸ್ಕಾರದಿಂದ ಶುದ್ಧರೂ ಆದ ವೀರಶೈವರಿಗೆ ಋಣತ್ರಯಗಳೇ ಇರುವದಿಲ್ಲ. ದೇಹಾಂತ್ಯವಾದ

ಕೂಡಲೆ ನನ್ನ ಶಿವ ಪದ ಅಂದರೆ ಮೋಕ್ಷ ಪ್ರಾಪ್ತಿಯಾಗುವದು. ಆದ ಕಾರಣ ವೀರಶೈವರ ಮೋಕ್ಷಕ್ಕೆ ಮಕ್ಕಳಿಲ್ಲದಿರುವದು ಯಾವ ತರದ ಅಡ್ಡಿ ಆತಂಕಗಳನ್ನುಂಟು ಮಾಡಲಾರದು.

ಆದ ಕಾರಣ ಅಪ್ರಾಕೃತ ಜೀವರಾದ ವೀರಶೈವರಿಗೆ ಈಶ್ವರನು ಪಿತೃವು (ತಂದೆಯು)ಸದಾಶಿವನೇ ಪಿತಾಮಹನು. (ತಂದೆಯ ತಂದೆ-ಅಜ್ಜನು) ಶಿವನೇ ಪ್ರಪಿತಾಮಹನು (ಅಜ್ಜನ ತಂದೆಯು)ಆದ್ದರಿಂದ ಪಿತೃಗಳನ್ನು ಕುರಿತು ಮಾಡುವ ಶ್ರಾದ್ಧ ಮೊದಲಾದ ಕರ್ಮಗಳೂಸಹ ವೀರಶೈವರಿಗೆ ಇರುವದಿಲ್ಲೆಂದು ಪರಶಿವನು ಹೇಳಿದನು.

ಇನ್ನೂ ಮತ್ತೆ ಶಿವನು ಹೇಳಿದ್ದೇನಂದರೆ- ವೀರಶೈವರಿಗೆ ಋಣ ತ್ರಯಗಳೇ ಇಲ್ಲವೆಂದ ಬಳಿಕ ದತ್ತಪುತ್ರನನ್ನು ಏಕೆ ತೆಗೆದುಕೊಳ್ಳಬೇಕೆಂಬ ಪ್ರಶ್ನೆಯೊಂದು ಉದ್ಭವಿಸಿ ಸಹಜ ಸಂಶಯಕ್ಕೆ ಕಾರಣೀಭೂತವಾಗುವದು. ಆದರೆ ವೀರಶೈವರಿಗಾದರೂ ತಮ್ಮ ಧರ್ಮವು ಸ್ಥಿರವಾಗಿರಬೇಕೆಂದೂ, ತಮ್ಮ ಮನೆತನದ ಹೆಸರು ಉಳಿಯಬೇಕೆಂದೂ ಇಚ್ಛೆಯಿರುವದಲ್ಲದೆ ಅನು ವಂಶಕ ನಿತ್ಯದಲ್ಲಿ ನಡೆದು ಬಂದ ಗುರು-ಜಂಗಮರ ಪಾದಪೂಜಾ, ಪಾದೋದಕ ಸ್ವೀಕಾರ, ಅತಿಥಿ ಸ್ವಾಗತದಿಂದ, ಅನ್ನ ಸಂತರ್ಪಣೆ, ಮತ್ತು ಗುರು-ಜಂಗಮಾರಾಧನೆ ಮೊದಲಾದ ಅನೇಕ ಲೌಕಿಕ ಕಾರ್ಯಗಳು ಅವ್ಯಾಹತವಾಗಿ ನಡೆಯಬೇಕಾಗುತ್ತದೆ. ಒಂದು ವೇಳೆ ಸಂತತಿ ಛೇದವಾದರೆ ತನ್ನ ವಂಶ ಪರಂಪರೆಯಿಂದ ನಡೆದು ಬಂದ ಗುರು-ಜಂಗಮರ ಪೂಜೆ ಮತ್ತು ನನ್ನ ಪೂಜೆ ನಿಲ್ಲುತ್ತದೆಂಬ ಸಂಶಯವಿದ್ದ ವೀರಶೈವರು ಅತ್ಯಗತ್ಯವಾಗಿ ಸ್ವಗೋತ್ರದಲ್ಲಿಯ ಸಲಕ್ಷಣಯುಕ್ತವಾದ ಬಾಲಕನನ್ನು ವಿಧಾನೋಕ್ತವಾಗಿ ದತ್ತಕ್ಕೆ ತೆಗೆದುಕೊಳ್ಳಬೇಕು. ಆದರೆ ಸಂಶಯ ಪರಿಹಾರವಾಗಿ ಮನಸ್ಸಿನ ಬಯಕೆಯು ಪೂರ್ತಿಯೆನಿಸಿ ಮಾನಸಿಕ ಶಾಂತಿ ಸಮಾಧಾನಗಳುಂಟಾಗುವವು.

## ದತ್ತಪುತ್ರ ವಿಧಾನವೂ ಒಂದು ಸಂಸ್ಕಾರವು

ದತ್ತಪುತ್ರ ಸ್ವೀಕಾರವಾದರೂ ದಶಕರ್ಮಗಳ ಸಂಸ್ಕಾರದಂತೆ ಒಂದು ವಿಶಿಷ್ಟ ಸಂಸ್ಕಾರವಾಗಿದೆ. ತಮ್ಮ ಐಚ್ಛಿಕ ಪ್ರಕಾರವಾಗಿ ಮೇಲೆ ವಿಧಿಸಿದಂತೆ ಯೋಗ್ಯ ಬಾಲಕನನ್ನು ತನ್ನ ವಂಶಾಭಿವೃದ್ಧಿಯ ಸಲುವಾಗಿ ಗುರು ಹಿರಿಯರ ಹಾಗೂ ಸಮಸ್ತ ದೈವದವರ ಸಮಕ್ಷಮಕ್ಕೆ ಶಾಸ್ತ್ರೋಕ್ತ ವಿಧಾನದಂತೆ ಗ್ರಹಿಸುವದೇ "ದತ್ತಪುತ್ರ ಸ್ವೀಕಾರ" ವೆಂದು ಹೇಳಲ್ಪಡುತ್ತದೆ.

ಆದರೆ ವೀರಶೈವರಲ್ಲಿ ಕೆಲವು ವಿಶಾಲ ಹೃದಯವುಳ್ಳ ಶ್ರೀಮಂತ ಲಿಂಗಪ್ಪ ಜಾಯಪ್ಪ ದೇಶಮುಖ ಸಾ|| ಶಿರಸಂಗಿ ದೇಸಾಯಿ ಇವರು ತಮ್ಮ ಸಮಾಜವೇ

ಪುತ್ರಸಮಾನವೆಂದು ತಿಳಿದು ತಮ್ಮ ಸಮಸ್ತ ಸಂಪತ್ತನ್ನು ಈಶ್ವರ ಪ್ರೀತ್ಯರ್ಥ ವಾಗಿ ಧಾರೆಯೆರೆದು ಅಜರಾಮರ ಕೀರ್ತಿಯನ್ನೂ ಶ್ರೇಯಸ್ಸನ್ನೂ ಪಡೆದು ಪರಲೋಕದಲ್ಲಿ ನಿರಂತರ ಸೌಖ್ಯವನ್ನು ಹೊಂದಿದರು. ಇಂಥ ಮಹನೀಯರಿಗೆ ವೀರಶೈವ ಸಮಸ್ತ ಸಮಾಜವೇ ಪುತ್ರಸಮಾನವಾಗಿದೆ. ಇಂಥವರು ವಿರಳಅಸ್ತು.

ಆಧುನಿಕ ಕಾಲದಲ್ಲಿ ಇತ್ತಿತ್ತಲಾಗಿ ಬಹುಸಂಖ್ಯಾಕರು ಶಾಸ್ತ್ರೋಕ್ತವಾಗಿ ದತ್ತಕ ವಿಧಾನವನ್ನು ಜರುಗಿಸದೆ ಮನಸ್ಸಿಗೆ ಬಂದಂತೆ ಅನುಕೂಲ ಸಿಂಧು ಪ್ರಕಾರ ಸ್ಟಾಂಪ ಬರೆಯಿಸಿ ನೋಂದಾಯಿಸುವರು. ಹೀಗೆ ಮಾಡುವದು ಯೋಗ್ಯವಾದುದಲ್ಲ. ಅವಿವಾಹಿತಳು ಪತಿಯ ಹೆಸರಿನಿಂದ ಹೇಗೆ ಮಂಗಲ ಕಾರ್ಯಗಳಲ್ಲಿ ಪ್ರವೇಶ ಮಾಡಲು ಸಾಧ್ಯವಿಲ್ಲವೋ ಹಾಗೆ ಸಂಸ್ಕಾರ ವಿಹೀನ ನಾದ ದತ್ತಕ ಮಗನಿಂದ ಗುರುಲಿಂಗ ಜಂಗಮಾದಿ ಪೂಜಾ ಮೊದಲಾದ ವಂಶೋದ್ಧಾರಕ ಲೌಕಿಕ ಕಾರ್ಯಗಳನ್ನು ಜರುಗಿಸಿದರೆ ಫಲಸಿದ್ಧಿಯಾಗುವದಿಲ್ಲ. ಮತ್ತು ಅವನು ಸರಕಾರದಲ್ಲಿ ಕಾನೂನ ಪ್ರಕಾರ ಮಗನೆನಿಸಿದರೂ ದೇವರ ಸಮ್ಮುಖದಲ್ಲಿ ಮಾತ್ರ ಸುಳ್ಳು ಮಗನೆನಿಸುತ್ತಾನೆ. ಆದ ಕಾರಣ ದತಪುತ್ರ ಸ್ವೀಕಾರವನ್ನು ಶಾಸ್ತ್ರೋಕ್ತ ವಿಧಾನದಂತೆ ಸಂಸ್ಕಾರವನ್ನು ಜರುಗಿಸಿಯೇ ದತ್ತಕಮಗನನ್ನು ತೆಗೆದುಕೊಳ್ಳುವದು ಯೋಗ್ಯವಾದುದು.

## ಪೂಜಾ ವಿಧಾನವು

ದತ್ತಕಪುತ್ರನನ್ನು ಸ್ವೀಕಾರ ಮಾಡುವ ಯಜಮಾನನಾಗಲೀ, ಇಲ್ಲವೇ ಯಜಮಾನಿಯಾಗಲೀ, ತಮ್ಮ ನಿತ್ಯ ಕರ್ಮ ಶಿವಪೂಜಾದಿ ಕ್ರಿಯೆಗಳನ್ನು ತೀರಿಸಿಕೊಂಡು ಭದ್ರ ಪೀಠದಲ್ಲಿ ಕುಳಿತುಕೊಂಡು ಆಚಮನ ಹಾಗೂ ಪ್ರಾಣಾಯಾಮಗಳನ್ನು ಆಚರಿಸಿ ತದನಂತರ ದೇಶಕಾಲಾದಿಗಳನ್ನು ಉಚ್ಚರಿಸಿ –

“ಏವಂ ಗುಣವಿಶೇಷಣ ವಿಶಿಷ್ಟಾಯಾಂ ಅಸ್ಯಾಂ ಶುಭ ತಿಥೌ ಅಸ್ಮಾಕಂ ಸಂತತ್ಯ ವಿಚ್ಛೇದನ ಮದೀಯ ವಂಶೇ ಕರಿಷ್ಯ ಮಾಣಃ ಶಿವಧರ್ಮಾನುಷ್ಠಾನ ದ್ವಾರಾ ಶಿವಪ್ರಸಾದ ಸಂಪಾದನಾರ್ಥಂ ಮಮ ವಂಶೇ ಕರಿಷ್ಯ ಮಾಣಃ ಶಿವ ಧರ್ಮಾನುಷ್ಠಾನ ದ್ವಾರಾ ಶಿವಪ್ರಸಾದ ಸಂಪಾದನಾರ್ಥಂ ಮಮ ವಂಶೇ ಶ್ರೀ ಗುರುಲಿಂಗ ಜಂಗಮಾರಾಧನಾಭಿವೃದ್ಧ್ಯರ್ಥಂ ಪುನರಾವೃತ್ತಿ ರಹಿತ ಶಾಶ್ವತ ಶಿವೈಕ್ಯರೂಪ ಶಿವಪಾದ ಪ್ರಾಪ್ತ್ಯರ್ಥಂಚ ವಿಶೇಷಣ ( ) ಗೋತ್ರೋತ್ಪನ್ನಸ್ಯ ( ) ನಾಮ್ನಃ ವಂಶೇ ಶಿಥಿಲೇಸತಿ ಮದೀಯ ವಂಶಾಭಿವೃದ್ಧ್ಯರ್ಥಂ ಸಗೋತ್ರೋತ್ಪನ್ನಂ ಅಸ್ಮದಾಚಾರ ಪ್ರವಿಷ್ಟಂ ಕುಲೀನಂ ರೂಪವಂತಂ। ಪಂಚವಾರ್ಷಿಕಂ ಕಂಚನ ಮಾಣವಕಂ ಪುತ್ರತ್ವೇನ ಸ್ವೀಕುರ್ಮಹೇ”

ಹೀಗೆಂದು ಸಂಕಲ್ಪವನ್ನು ಮಾಡಿದ ಬಳಿಕ ಈ ಹಿಂದೆ ಹೇಳಿದ ಪ್ರಕಾರ

ಶ್ರೀ ವಿಘ್ನೇಶ್ವರ ಪೂಜಾ, ಸ್ವಸ್ತಿಪುಣ್ಯಾಹವಾಚನ, ನಾಂದೀ ಸಮಾರಾಧನ ಇತ್ಯಾದಿಗಳನ್ನು ಆಚರಿಸಬೇಕು. ಆ ಮೇಲೆ ದತ್ತುಮಾಡುವ ಪುತ್ರನನ್ನು ಮಂಗಲ ಸ್ನಾನವಂ ಮಾಡಿಸಿ ನೂತನ ವಸ್ತ್ರಾಭರಣಗಳಿಂದ ಅಲಂಕಾರಮಾಡಿ, ಆತನನ್ನೂ ಹಾಗೂ ಅಕ್ಷತೆಗಳನ್ನೂ ಸಹ ದತ್ತಕ್ಕೆ ತೆಗೆದುಕೊಳ್ಳುವ ಯಜಮಾನನು ಕೈಯಲ್ಲಿ ಹಿಡಿದುಕೊಂಡು ಎದ್ದು ನಿಂತು—

"ಖಿಲವಂಶೋಽಸ್ಮಿಮಹೇಶಾ ಮಮವಂಶಾಭಿವೃದ್ಧಯೇ ।
ಆಜ್ಞಾಂದಧತ ವೈಶೀಘ್ರಂ ಸ್ವೀಕರ್ತುಂ ಪುತ್ರಕರ್ಮಣಿ ॥

ಎಂಬ ಮಂತ್ರವನ್ನು ಪಠಿಸಿ ಅಲ್ಲಿದ್ದ ಮಾಹೇಶ್ವರರ ಮೇಲೆ ಅಕ್ಷತೆಯನ್ನು ಹಾಕಿ, ದಕ್ಷಿಣೆ ಹಾಗೂ ತಾಂಬೂಲಾದಿಗಳನ್ನು ಅವರಿಗೆ ಕೊಟ್ಟು, ನಮಸ್ಕಾರವನ್ನು ಮಾಡಿ ಅಪ್ಪಣೆ ಪಡಕೊಳ್ಳಬೇಕು. ಆ ಮೇಲೆ—

ತನ್ನ ಮಗನನ್ನು ದತ್ತಕ್ಕೆ ಕೊಡತಕ್ಕ ತಂದೆಯು ಆಚಮನ ಪ್ರಾಣಾಯಾಮಗಳನ್ನು ಮಾಡಿ ದೇಶಕಾಲಾದಿಗಳನ್ನು ಉಚ್ಚರಿಸಿ—

"ಏವಂ ಗುಣವಿಶೇಷಣ ವಿಶಿಷ್ಟಾಯಾಮಸ್ಯಾಂ ಶುಭತಿಥೌ ಭವತಃ ಅಪುತ್ರತ್ವೇನಯೋರ್ದೋಷಸ್ಸ ಮಜ್ಜನಿತದ್ದೋಷ ಪರಿಹಾರಾರ್ಥಂ ತವ ವಂಶಾಭಿವೃದ್ಧ್ಯರ್ಥಂಚ ಅಸ್ಮತ್ಪಿತೃಣಾಂ ಶಾಶ್ವತ ಶಿವಲೋಕ ಪ್ರಾಪ್ತ್ಯರ್ಥಂ ಮತ್ಪುತ್ರಂ ಅದ್ಯಭಕ್ತ ಮಾಹೇಶ್ವರ ಸನ್ನಿಧೌದಾಸ್ಯಾಮಿ ॥

ಹೀಗೆಂದು ಸಂಕಲ್ಪವನ್ನು ಮಾಡಿ ಆ ಬಳಿಕ ಮಗುವನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಆ ಮಗುವಿನ ಎರಡೂ ಕೈಗಳನ್ನು ಹಿಡಿದುಕೊಂಡು

ದತ್ತಕಕ್ಕೆ ಕೊಡುವ ತಂದೆಯು—

"ಮಮಪುತ್ರಂ ಪ್ರದಾಸ್ಯಾಮಿ ತವ ವಂಶಾಭಿವೃದ್ಧಯೇ ।
ಪುತ್ರ ದಾನೇನ ಸರ್ವೇಷಾಂ ಪಿತೃಣಾಮಕ್ಷಯೋ ಭವೇತ್ ॥
ಅನೇನ ತವ ವಂಶೋಽಪಿ ಏಧತೆ ಸತ್ವರಂ ಭುವಿ ।
ಪುತ್ರಂ ಪ್ರಗೃಹ್ಯತ್ವಂ ಶಾಶ್ವತಂ ಕೀರ್ತಿಮಾಪ್ನುಹಿ ॥

ಹೀಗೆಂದು ಮಂತ್ರವನ್ನುಚ್ಚರಿಸಿ ಪುತ್ರದಾನ ಮಾಡುತ್ತೇನೆಂದು ಅನ್ನಲು-

ದತ್ತಕ್ಕೆ ತೆಗೆದುಕೊಳ್ಳತಕ್ಕ ತಂದೆಯು—

"ಪುತ್ರ ಭಿಕ್ಷಾಂದ ದಶ್ವಾಸು ಮಮ ವಂಶಾಭಿವೃದ್ಧಯೇ।
ಪುತ್ರದಾನೇನ ತೇಭೀಷ್ಟ ಸತ್ವರಂ ಭವತಿ ಧೃವಂ ॥

ಹೀಗೆಂದು ಯಾಚನೆಯನ್ನು ಮಾಡಿ ಅಂದರೆ ಪುತ್ರಭಿಕ್ಷೆಯನ್ನು ಬೇಡಿ-

"ದೇವಸ್ಯತ್ವಾಸವಿತುಃ ಪ್ರಸವೆ ಅಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಂ ಪ್ರತಿಗೃಹ್ಣಾಮಿ"

ಎಂಬ ಮಂತ್ರದಿಂದ ಪರಿಗ್ರಹಿಸುತ್ತೇನೆಂದು (ಸ್ವೀಕರಿಸುತ್ತೇನೆಂದು ಅನ್ನಬೇಕು.) ಆ ಮೇಲೆ—

ದತ್ತಕಕ್ಕೆ ಕೊಡುವವನು:—

"ರಾಜಾತ್ವಾ ವರುಣೋನಯತು। ದೇವಿದಕ್ಷಿಣೇಗ್ನಯೆ ಹಿರಣ್ಯಂ। ತೇನಾಮೃತತ್ವಮಸ್ಯಾಂ ವಯೊದಾತ್ರೆ ಮಯೋಮಹ್ಯಮಸ್ತು ಪ್ರತಿಗೃಹಿತ್ರೆ॥ ಕ ಇದಂಕಸ್ಮಾ ಅದತ್ಕಾಮಃ ಕಾಮಾಯ। ಕಾಮೊದಾತಾ ಕಾಮಃ ಪ್ರತಿಗ್ರಹೀತಾ। ಕಾಮಾಗ್‍ಂ ಸಮುದ್ರಮಾವಿಶಾ। ಕಾಮೇನತ್ವಾ ಪ್ರತಿಗೃಹ್ಣಾಮಿ। ಕಾಮೈತತ್ತೆ ಏಷಾತೆ ಕಾಮದಕ್ಷಿಣಾ ಉತ್ತನಸ್ಯಾಂಗೀರಸಃ ಪ್ರತಿಗೃಹ್ಣಾತು॥

ಎಂಬ ಮಂತ್ರವನ್ನುಚ್ಚರಿಸಿ ತನ್ನ ಮಗನನ್ನು ಕೊಡತಕ್ಕದ್ದು. ಆ ಬಳಿಕ ದತ್ತಕ್ಕೆ ತೆಗೆದುಕೊಳ್ಳುವವನು ಆ ಮಗುವನ್ನು ಸ್ವೀಕರಿಸಿ, ಮಗುವಿನ ಮಸ್ತಕವನ್ನು ಮೂರು ಸಾರೆ ಮೂಸಿ ನೋಡಬೇಕು. ಆ ತರುವಾಯ ಫಲಪೂಜೆಯನ್ನು ಮಾಡಬೇಕು.

(ಆದರೆ ಇಲ್ಲಿ ವಿಶೇಷವೇನಂದರೆ ಕೆಲವು ಗ್ರಂಥಗಳಲ್ಲಿ ದತ್ತ ಹೋಮವನ್ನು ಮಾಡಬೇಕೆಂದು ಉಕ್ತವಾಗಿದೆ. ಆದರೆ ವೀರಶೈವರು ಹೋಮ ಹವನಾದಿಗಳನ್ನು ಕರ್ಮಕಾಂಡಿಗಳಲ್ಲದ್ದರಿಂದ ಆಚರಿಸಲು ಬರುವದಿಲ್ಲ. ಮಾತ್ರ ವೀರಶೈವ ಧರ್ಮದಲ್ಲಿ ಜಪ-ಧ್ಯಾನ ತಪಸ್ಸು-ಜ್ಞಾನ ಇತ್ಯಾದಿಗಳೇ ಶಿವಸಂಬಂಧವಾದ ಹೋಮಗಳೆಂದೂ, ಇಂಥ ಹೋಮಗಳಿಂದಲೇ ಶಿವನನ್ನು ಪೂಜಿಸುವವನೇ ಶಿವ ಭಕ್ತನೆಂದು ಹೇಳಿದೆ. ಕಾರಣ ನಾವು ಇಲ್ಲಿ ಹೋಮ ಹವನಾದಿ ಕಾರ್ಯವನ್ನು ನಿಷೇಧ ಮಾಡಿ ಬರೆದಿರುವದಿಲ್ಲ.)

## ಫಲಪೂಜಾ ಕ್ರಮ ಹೇಗಂದರೆ—

ಒಂದು ತಟ್ಟೆಯಲ್ಲಿ ೨ ಟೆಂಗಿನಕಾಯಿ ೯ ಅಥವಾ ೧೧ ರ ಬಾಳೇಹಣ್ಣಿನ ಹಣಿಗಿ ಹಾಗೂ ಫಲ-ತಾಂಬೂಲಗಳನ್ನಿಟ್ಟು ದತ್ತಕ ತಂದೆಯು ದೇಶಕಾಲಾದಿಗಳನ್ನೂ ಹೇಳಿ—

"ಏವಂ ಗುಣವಿಶೇಷಣ ವಿಶಿಷ್ಠಾಯಾಮಸ್ಯಾಂ ಶುಭತಿಥೌ ಶುದ್ಧಿ ವೃದ್ಧ್ಯಭ್ಯುದಯ ಸಿದ್ಧಿ ದ್ವಾರಾ ಫಲದೇವತಾಂತರ್ವರ್ತಿ ಶ್ರೀ ಸಾಂಬಸದಾ ಪ್ರೀ ತಯೇ ಪುತ್ರಸ್ವೀಕಾರ ಕರ್ಮಾಂಗಭೂತ ಫಲಪೂಜಾಂ ಕರಿಷ್ಯೇ॥

ಎಂದು ಸಂಕಲ್ಪ ಮಾಡಬೇಕು. ತದನಂತರ ಈ ಹಿಂದೆ ಪೂಜಾ ಪ್ರಕರಣದಲ್ಲಿ ಹೇಳಿದಂತೆ ಷೋಡಶೋಪಚಾರಗಳಿಂದ ಪೂಜಿಸಬೇಕು. ಆ ಮೇಲೆ-

ಹಿರಣ್ಯಗರ್ಭ ಗರ್ಭಸ್ಥಂ ಹೇಮಬೀಜಂ ವಿಭಾವಸೋಃ।
ಅನಂತ ಪುಣ್ಯಫಲದ ಮತಶ್ಶಾಂತಿಂ ಪ್ರಯಚ್ಛಮೇ॥"

ಎಂಬ ಮಂತ್ರವನ್ನುಚ್ಚರಿಸಿ ಹಿರಣ್ಯೋದಕ ಅಂದರೆ ಬಂಗಾರಯುಕ್ತದ ಶುದ್ಧೋದಕವನ್ನು ಬಿಟ್ಟು—

“ಫಲಂ ಮನೋರಥ ಫಲಂ ಪ್ರದದಾತಿ ಸದಾನೃಣಾಂ । ಪುತ್ರಪೌತ್ರಾಭಿವೃದ್ಧ್ಯರ್ಥಂ ಅತಶ್ಶಾಂತಿ ಪ್ರಯಚ್ಛಮೇ” ಇದಂಫಲದಾನಂ ಸದಕ್ಷಿಣಾಕಂ ಸತಾಂಬೂಲಂ ಶ್ರೀ ಸಾಂಬಸದಾಶಿವ ಪ್ರೀತಿಂ ಕಾಮಯಮನಶ್ಶಿವರೂಪಿಣೆ ತುಭ್ಯಮಹಂಸಂಪ್ರದದೆ । ನಮ ಮನಮಮ”

ಎಂಬ ಮಂತ್ರವನ್ನು ಹೇಳಿ ಪುರೋಹಿತರಿಗೆ ಫಲದಾನವನ್ನು ಮಾಡಬೇಕು. ತದನಂತರ ತಮ್ಮ ಶಕ್ತ್ಯಾನುಸಾರವಾಗಿ ಗಣಾರಾಧನೆಯನ್ನು ಮಾಡಬೇಕು. ಈ ಪ್ರಕಾರವಾಗಿ ಪದ್ಧತಿಯಂತೆ ಮಾಡುವ ವಿಧಾನವೇ ಶಾಸ್ತ್ರೋಕ್ತ ದತ್ತಕ ವಿಧಾನವೆನಿಸುತ್ತದೆ.

ಇನ್ನು ದತ್ತಕ ಪತ್ರವನ್ನು ಅನುಕೂಲವಿದ್ದರೆ ಅಂದೇ ನೊಂದಾಯಿಸಬಹುದು. ಇಲ್ಲವಾದರೆ ಈ ದತ್ತಕ ವಿಧಾನ ತರುವಾಯ ೨–೩ ದಿನಗಳಲ್ಲಿ ನೊಂದಾಯಿಸಬಹುದು.

॥ ಇತಿ ದತ್ತಪುತ್ರ ಸ್ವೀಕಾರ ವಿಧಾನ ಸಮಾಪ್ತಂ ॥

# ಪ್ರಾಯಶ್ಚಿತ್ತ (ಶುದ್ಧಿ ಸಂಸ್ಕಾರ) ಕ್ರಮವು

ಸಮಾಜದಲ್ಲಿ ಅಕಸ್ಮಾತ್ ಬಹಿಷ್ಕಾರ ಹಾಕಿದವರಿಗಾಗಲೀ, ಯಾವದೇ ರೀತಿಯಿಂದ ಅಪವಿತ್ರ ಪ್ರಾಪ್ತಿಯಾದವರಿಗಾಗಲೀ, ಅನ್ಯ ಕುಲದವರಲ್ಲಿ ಅನ್ನ–ನೀರು ಸ್ವೀಕಾರ ಮಾಡಿದ್ದರಿಂದಾಗಲೀ, ನಿಂದ್ಯ ವಸ್ತುಗಳಿಂದ ಹೊಡಿಸಿಕೊಂಡಿದ್ದರ ಮೂಲಕವಾಗಲೀ, ಇಲ್ಲವೇ ಗುರುವರ್ಯರು ಅಥವಾ ಸಮಾಜದ ಪ್ರಮುಖರು ದೋಷಿಯೆಂದು ಗೊತ್ತುಪಡಿಸಿ ಸ್ವಜಾತಿಯಿಂದ ಬಹಿಷ್ಕರಿಸಿದವರಾಗಲೀ, ಅಂಥವರನ್ನು ಪುನಃ ಸಮಾಜದ ಸರ್ವ ಪ್ರಮುಖರ ಹಾಗೂ ಗುರುಗಳ ಒಪ್ಪಿಗೆಯನ್ನು ಪಡೆದುಕೊಂಡು ಪ್ರಾಯಶ್ಚಿತ್ತ ಅಂದರೆ ಶುದ್ಧಿ ಸಂಸ್ಕಾರ ಮಾಡಿ ತೆಗೆದುಕೊಳ್ಳಬೇಕು. ಹೇಗಂದರೆ—

ಪ್ರಾಯಶ್ಚಿತ್ತ ತೆಗೆದುಕೊಳ್ಳತಕ್ಕಂಥವನ ಕಡೆಯಿಂದ ಪುರೋಹಿತನು ದೇಶ ಕಾಲಾದಿಗಳನ್ನು ಹೇಳಿಸಿ—

“ಮಮ ಕಾಯಕ ವಾಚಕ ಮಾನಸಿಕ ಸಾಂಸರ್ಗಿಕ ದೋಷನಿರಸನ ಪೂರ್ವಕಂ ಸರ್ವಕರ್ಮ ಸಂಶುದ್ಧಿ ಸಿದ್ಧ್ಯರ್ಥಂ ಶ್ರೀ ಗುರುಚರಣೋದಕೇನ ಪ್ರಾಯಶ್ಚಿತ್ತ ಸ್ನಾನಮಹಂ ಕರಿಷ್ಯೇ”

ಹೀಗೆಂದು ಸಂಕಲ್ಪ ಮಾಡಿಸಿ ಗುರುಪಾದೋದಕದಿಂದ ಸ್ನಾನ ಮಾಡಿಸಿ ಶುಚಿರ್ಭೂತನಾಗಿ, ಶುದ್ಧ ಮಡಿಯನ್ನುಟ್ಟು, ಭಸ್ಮ–ರುದ್ರಾಕ್ಷಿಗಳನ್ನು ಧರಿಸಿಕೊಂಡು ತನ್ನ ಶಿವಪೂಜೆಯನ್ನೂ ತದನಂತರ ಗುರುಪಾದ ಪೂಜೆಯನ್ನೂ ಮಾಡಿಕೊಂಡು ಗುರುಪಾದ ತೀರ್ಥವನ್ನು ಸೇವಿಸಿ, ಗುರುವರ್ಯರಿಗೂ ಹಾಗೂ

ಸಮಾಜದ ಪ್ರಮುಖರಿಗೂ, ತನಗುಂಟಾದ ದೋಷದ ಬಗ್ಗೆ ಪಶ್ಚಾತ್ತಾಪ ಮೂಲಕವಾಗಿ ಕ್ಷಮೆಯನ್ನು ಬೇಡಬೇಕು. ಆಗ ಸಮಸ್ತರೂ ಕ್ಷಮೆಯನ್ನು ದಯಪಾಲಿಸಬೇಕು. ತದನಂತರ ಶುದ್ಧನಾದಂಥವನು ತನ್ನ ಶಕ್ತ್ಯಾನುಸಾರವಾಗಿ ಭಕ್ತರರಿಗೂ ಮಹೇಶ್ವರರಿಗೂ ಆರಾಧನೆ ಮಾಡಿಸಿ, ಪುರೋಹಿತರಿಗೂ ದಕ್ಷಿಣೆ ತಾಂಬೂಲಾದಿಗಳನ್ನು ಕೊಟ್ಟು ಅವರಿಗೂ ಭೋಜನ ಮಾಡಿಸಿ, ಸರ್ವರನ್ನೂ ಭೋಜನ ತಾಂಬೂಲಾದಿಗಳಿಂದ ತೃಪ್ತಿಪಡಿಸಿ ಸಮಾಜೋನ್ನತಿಯ ಕಾರ್ಯಗಳಿಗೆ ತನ್ನ ಯೋಗ್ಯತಾನುಸಾರವಾಗಿ ಕಾಣಿಕೆಯನ್ನು (ದ್ರವ್ಯದಾನವನ್ನು) ಮಾಡತಕ್ಕದ್ದು.

|| ಇತಿ ಪ್ರಾಯಶ್ಚಿತ್ತ (ಶುದ್ಧಿ ಸಂಸ್ಕಾರ) ಕ್ರಮಸಮಾಪ್ತಿಯು ||

## ಶಮೀ (ಬನ್ನಿ) ಪೂಜಾ ವಿಧಾನ

ಈ (ಬನ್ನಿ) ವೃಕ್ಷ ಪೂಜೆಯ ವಿಧಾನವನ್ನು ಪ್ರತಿ ವರ್ಷ ಆಶ್ವೀಜ ಶುದ್ಧ ದಶಮಿ ಅಂದರೆ ವಿಜಯಾದಶಮೀ ತಿಥಿ ದಿವಸ ಸಮಸ್ತರೂ ಆಚರಿಸಬೇಕು.

ಶಮೀಪೂಜಾ ಸಂಕಲ್ಪ ಮಾಡಿ-ದೇಶಕಾಲಾದಿಗಳನ್ನು ಉಚ್ಚರಿಸಿ—

"ಮಮದುಷ್ಕೃತಾ ಮಂಗಲಾದಿ ನಿರಾಸಾರ್ಥಂ ಕ್ಷೇಮಾರ್ಥಂ ಯಾತ್ರಾಯಾಂ ವಿಜಯಾರ್ಥಂಚ ಶಮೀ ಪೂಜಾಂ ಕರಿಷ್ಯೇ"

ಹೀಗೆಂದು ಸಂಕಲ್ಪಿಸಿ ಹಿಂದೆ ಇಷ್ಟಲಿಂಗ ಪೂಜಾ ಪ್ರಕರಣದಲ್ಲಿ ಹೇಳಿದ ಮಂತ್ರಗಳಿಂದ ಆವಾಹನ ಆಸನಾದಿ ಷೋಡಶೋಪಚಾರ ಮಂತ್ರಗಳಿಂದ ಬನ್ನಿಗಿಡವನ್ನು ಪೂಜಿಸಬೇಕು. ಆ ಮೇಲೆ—

"ಶಮಿ ಶಮಯತೇ ಪಾಪಂ ಶಮೀ ಶತ್ರುವಿನಾಶನಂ। ಅರ್ಜುನಸ್ಯ ಧನುರ್ಧಾರೀ ರಾಮಸ್ಯ ಪ್ರಿಯವಾದಿನೀ ||೧|| ಕರಿಷ್ಯ ಮಾಣ ಯಾತ್ರಾಯಾಂ ಯಥಾಕಾಲ ಸುಖಂ ಮಯಾ। ತತ್ರ ನಿರ್ವಿಘ್ನ .ಕರ್ತ್ರೀತ್ವಂ ಭವ ಶ್ರೀರಾಮ ಪೂಜಿತೆ ||೨||

ಹೀಗೆಂದು ಬನ್ನಿದೇವಿಯನ್ನು ಪ್ರಾರ್ಥಿಸಿ ಭಕ್ತಿಯಿಂದ ನಮಸ್ಕಾರ ಮಾಡಿದನಂತರ ಆ ಬನ್ನಿಗಿಡದ ಪತ್ರವನ್ನು ತೆಗೆದುಕೊಂಡು ಬಂದು ಗುರು ಹಿರಿಯರಿಗೂ ಮಾತಾಪಿತೃಗಳಿಗೂ, ಆಪ್ತೇಷ್ಟರಿಗೂ, ಮಿತ್ರರಿಗೂ ಬಂಗಾರವೆಂದು ಪರಸ್ಪರ ಕೊಟ್ಟು "ನಾವೂ ನೀವೂ ಬಂಗಾರದಂತೆ ವರ್ತಿಸೋಣ" ವೆಂದು ಅನ್ನುತ್ತ ನಮಸ್ಕರಿಸಬೇಕು.

ಪಾಂಡವರು ಅಜ್ಞಾತವಾಸಕ್ಕೆ ತೆರಳುವ ಸಮಯದಲ್ಲಿ ತಮ್ಮ ಸಮಗ್ರ ಬಾಣ ಬತ್ತಳಿಕೆಗಳನ್ನೂ, ಬಿಲ್ಲು-ಧನುಷ್ಯಗಳನ್ನೂ ಶಮೀ ವೃಕ್ಷದ ಅಂದರೆ ಶಮಿದೇವಿಯ ಸ್ವಾಧೀನದಲ್ಲಿ ಭಕ್ತಿ ವಿಶ್ವಾಸಗಳಿಂದ ಸಮರ್ಪಿಸಿ ತೆರಳಿದರೆಂದೂ

ಆ ಮೇಲೆ ಅವರು ತಮ್ಮ ಅಜ್ಞಾತವಾಸಾವಧಿಯನ್ನು ಪೂರ್ತಿಗೊಳಿಸಿಕೊಂಡು ಹಿಂತಿರುಗಿ ಆಯುಧಗಳನ್ನು ತೆಗೆದುಕೊಂಡು ಕೌರವರ ಸಂಗಡ ಪೌರುಷಯುಕ್ತಿಗಳಿಂದ ಯುದ್ಧ ಮಾಡಿ ಜಯಶಾಲಿಗಳಾದ ಕಾರಣ ಅಂದಿನಿಂದ ಈ ಶಮೀವೃಕ್ಷ ಪೂಜೆಯೂ ಹಾಗೂ ಆಯುಧ ಪೂಜೆಯ ವಿಧಾನವೂ ಹೆಚ್ಚು ರೂಢಿಯಲ್ಲಿ ಬಂದಿರುವದೆಂದು ಕೆಲ ಧಾರ್ಮಿಕ ಗ್ರಂಥಗಳಿಂದ ಈ ವಿಷಯವು ತಿಳಿಯುತ್ತದೆ.

|| ಇತಿ ಶಮೀ ಪೂಜಾ ವಿಧಾನ ಸಮಾಪ್ತಿ ||

# ಶ್ರೀ ಮಹಾಲಕ್ಷ್ಮೀ-ಸರಸ್ವತೀ (ವಹಿ-ಪುಸ್ತಕ) ಪೂಜಾ ವಿಧಾನ

ಪ್ರತಿ ವರ್ಷ ಆಶ್ವೀಜ ಬಹುಳ ೩೦ ತಿಥಿ ದಿವಸ ಅಂದರೆ ದೀಪಾವಳಿಯ ಅಮಾವಾಸ್ಯೆಯ ದಿವಸ ಶ್ರೀ ಮಹಾಲಕ್ಷ್ಮಿ ಪೂಜೆಯನ್ನೂ ಮತ್ತು ಕಾರ್ತಿಕ ಶುದ್ಧ ೧ ತಿಥಿ ದಿವಸ ಶ್ರೀ ಮಹಾ ಸರಸ್ವತಿ ಪೂಜೆ (ಹೊಸ ಲೆಖ್ಖದ ವಹಿ ಪುಸ್ತಕ ಪೂಜೆ) ಯನ್ನೂ ಪುರೋಹಿತರಿಂದ ಮಾಡಿಸುವ ಪದ್ಧತಿಯಿರುತ್ತದೆ. ಆ ದಿವಸ ಸಮಗ್ರ ಪೂಜಾ ಸಾಮಾನುಗಳನ್ನು ತಯಾರ ಮಾಡಿಟ್ಟುಕೊಂಡು ಹೊಸ ವಹಿಗಳ ಮೊದಲನೆಯ ಪೇಜಿನಲ್ಲಿ ಕೆಳಗೆ ಬರೆದಂತೆ ಬರೆಯಬೇಕು.

ಶ್ರೀ ಶುಭ-ಲಾಭ 卐 ಶ್ರೀ ಶುಭ-ಲಾಭ.

೧ || ಶ್ರೀ ಮಹಾ ಗಣಧಿಪತಯೇನಮಃ ||
೨ || ಶ್ರೀ ಮಹಾ ಸರಸ್ವತ್ಯೈನಮಃ ||
೩ || ಶ್ರೀ ಮಹಾ ಲಕ್ಷ್ಮ್ಯೈನಮಃ ||
೪ || ಶ್ರೀ ಮಹಾ ಕುಲದೇವತಾಯೈನಮಃ ||
೫ || ಶ್ರೀ ಮಹಾ ಸದ್ಗುರುವೇನಮಃ ||

ವಕ್ರತುಂಡ ಮಹಾಕಾಯ ಸೂರ್ಯಕೋಟಿ ಸಮಪ್ರಭಾ ||
ಅವಿಘ್ನಂ ಕುರುಮೇ ದೇವ ಸರ್ವ ಕಾರ್ಯೇಷು ಸರ್ವಧಾ || ೧ ||

ಅಥ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶ್ರೀಮನ್ನೃಪಶಾಲಿವಾಹನ ಶಕೆ ೧೮೮೦ ವಿಳಂಬೀನಾಮ ಸಂವತ್ಸರಸ್ಯ ಕಾರ್ತೀಕ ಶುದ್ಧ ಪ್ರತಿಪದಾರಭ್ಯ ಶ್ರೀ ಶಕೆ ೧೮೮೧ ನೇ ವಿಕಾರೀನಾಮ ಸಂವತ್ಸರಸ್ಯ ಆಶ್ವೀಜ ಬಹುಳ ೩೦ ಪರ್ಯಂತಮ್.

ಶುಭಮಸ್ತು ಲಾಭ ಸಮೃದ್ಧಿರಸ್ತು ಶ್ರೀರಸ್ತು ||
ಶೀ ಸಕಲ ಸನ್ಮಂಗಲಾನಿ ಶುಭಂ ಭೂಯಾತ್ ||

ಈ ಪ್ರಕಾರ ಸರ್ವ ವಹಿಗಳಲ್ಲಿ ಬರೆದು ಅವುಗಳನ್ನು ಸಾಲಾಗಿ ಇಟ್ಟು ಮೇಲೆ ಬಂಗಾರು ಬೆಳ್ಳಿ ರೂಪಾಯಿಗಳನ್ನೂ ಫಲ ಪುಷ್ಪಾದಿಗಳನ್ನೂ ಇಟ್ಟು ಪೂಜಿಸಬೇಕು.

## ಪೂಜಾ-ವಿಧಾನ

ಪುರೋಹಿತನು ದೇಶಕಾಲಾದಿಗಳನ್ನು ಹೇಳಿ—

ಏವಂ ಗುಣಗಣ ವಿಶೇಷಣ ವಿಶಿಷ್ಟಾಯಾಂ ಅಸ್ಯಾಂ ಶುಭ ಪುಣ್ಯ ತಿಥೌ ಏತತ್ ನವೀನ ವರ್ಷೇ ಕೃತ ವ್ಯವಹಾರೇ ಲಾಭ ಸಮೃದ್ಧ್ಯರ್ಥಂಚ ಸಂಪದ ಭಿವೃದ್ಧ್ಯರ್ಥಂ ಶ್ರೀ ಮಹಾಲಕ್ಷ್ಮೀ ಪೂಜಾಂ ಕರಿಷ್ಯೇ"

ಹೀಗೆಂದು ಸಂಕಲ್ಪ ಮಾಡಿ:—

"ಬ್ರಾಹ್ಮೀ ಹಂಸ ಸಮಾರೂಢಾ ಧಾರಿಣ್ಯಕ್ಷತಮಂಡಲಂ । ವಿಷ್ಣು ತೇಜೋಧಿಕಾದೇವೀ ಸಾಮಾಂಪಾತು ವರಪ್ರದಾ" ಶ್ರೀ ಮಹಾ ಲಕ್ಷ್ಮ್ಯೈ ನಮಃ ಅವಾಹನಂ ಸಮರ್ಪಯಾಮಿ;—

ಎಂದು ಲಕ್ಷ್ಮಿಯನ್ನು ಆವಾಹನ ಮಾಡಿ—

"ಮಾಹೇಶ್ವರೀ ಮಹಾದೇವಿ ಆಸನಂತೇ ದದಾಮ್ಯಹಂ ।
ಮಹೈಶ್ವರ್ಯ ಸಮಾಯುಕ್ತಂ ಬ್ರಹ್ಮಾಣೀ ಬ್ರಹ್ಮಾಣಃ ಪ್ರಿಯೇ"
ಶ್ರೀ ಮಹಾಲಕ್ಷ್ಮ್ಯೈನಮಃ ಆಸನಂ ಸಮರ್ಪಯಾಮಿ॥

ಈ ಮಂತ್ರದಿಂದ ಆಸನವನ್ನು ಹಾಕಿ—

ಅರ್ಘ್ಯ ಸಾಲಿನಿಂದ ಪಾದ್ಯ-ಅರ್ಘ್ಯ-ಆಚಮನಾದಿಗಳನ್ನು ಸಮರ್ಪಿಸ ಬೇಕು. ಅನಂತರ—

"ಗಂಗಾಜಲ ಸಮಾನೀತಂ ಸುಗಂಧ ದ್ರವ್ಯ ಸಂಯುತಂ । ಸ್ನಾನಾರ್ಥಂತೇ ಮಯಾದತ್ತಂ ಗೃಹಾಣ ಪರಮೇಶ್ವರೀ" ಶ್ರೀ ಮಹಾಲಕ್ಷ್ಮ್ಯೈನಮಃ ಶುದ್ಧೋದಕೇನ ಸ್ನಾಪಯಾಮಿ ॥ ಎಂದು ಶುದ್ಧೋದಕವನ್ನು ಅರ್ಪಿಸಿ—

"ರಜತಾದ್ರಿ ಸಮಂ ದಿವ್ಯಂ ಕ್ಷೀರಸಾಗರ ಸನ್ನಿಭಂ । ಚಂದ್ರಪ್ರಭಾ ಸಮಂ ದೇವೀ ವಸ್ತ್ರಂತೇ ಪ್ರದದಾಮ್ಯಹಂ ॥" ಶ್ರೀ ಮಹಾಲಕ್ಷ್ಮ್ಯೈನಮಃ ವಸ್ತ್ರಂ ಸಮರ್ಪಯಾಮಿ ॥ ಎಂದು ವಸ್ತ್ರವನ್ನು ಅರ್ಪಿಸಬೇಕು. ಆ ಮೇಲೆ—

"ಮಾಂಗಲ್ಯಮಣಿ ಸಂಯುಕ್ತಂ ಮುಕ್ತಾಫಲ ಸಮನ್ವಿತಂ । ದತ್ತಂ ಮಂಗಳಸೂತ್ರಂತೆ ಗೃಹಾಣ ಹರಿವಲ್ಲಭೇ" ಶ್ರೀ ಮಹಾಲಕ್ಷ್ಮ್ಯೈನಮಃ ಕರ ಸೂತ್ರಂ ಸಮರ್ಪಯಾಮಿ ॥ ಎಂದು ಮಾಂಗಲ್ಯವನ್ನು ಧರಿಸಬೇಕು. ತದನಂತರ—

"ಸುವರ್ಣ ಭೂಷಿತಂ ದಿವ್ಯಂ ನಾನಾರತ್ನ ಸುಶೋಭಿತಂ ।
ತ್ರೈಲೋಕ್ಯ ಭೂಷಿತೇ ದೇವೀ ಗೃಹಾಣಾಭರಣಂ ಶುಭಂ ॥"
ಶ್ರೀ ಮಹಾಲಕ್ಷ್ಮ್ಯೈನಮಃ ನಾನಾವಿಧ ಆಭರಣಂ ಸಮರ್ಪಯಾಮಿ॥

ಹೀಗೆಂದು ಆಭರಣಗಳನ್ನು ಅರ್ಪಿಸಿ–

''ರಕ್ತಗಂಧಂ ಸುಗಂಧಾಢ್ಯ ಅಷ್ಟಗಂಧೆ ಸಮಾನ್ವಿತಂ ।
ದಾಸ್ಯಾಮಿದೇವಿ ವರದೇ ಗೃಹಾಣ ಪರಮೇಶ್ವರೀ ॥"

ಶ್ರೀ ಮಹಾಲಕ್ಷ್ಮ್ಯೈನಮಃ ಗಂಧಂ ಸಮರ್ಪಯಾಮಿ ॥ ಎಂದು ಗಂಧವಂ ಸಮರ್ಪಿಸಿ—

''ಹರಿದ್ರಾಚೂರ್ಣ ಸಂಯುಕ್ತಂ ಕುಂಕುಮಂ ಕಾಮದಾಯಕಂ ।
ವಸ್ತ್ರಾಲಂಕಾರಣಂ ಸರ್ವಂ ದೇವಿತ್ವಂ ಪ್ರತಿಗೃಹ್ಯತಾಂ ॥

ಶ್ರೀ ಮಹಾ ಲಕ್ಷ್ಮ್ಯೈನಮಃ ಕುಂಕುಮಂ ಧಾರಯಾಮಿ ಹೀಗೆಂದು ಕುಂಕುಮವಂ ಧರಿಸಿ–

''ನಾನಾ ವಿಧಾನಿ ಪುಷ್ಪಾಣಿ ನಾನಾವರ್ಣಯುತಾನಿಚ ।
ಪೂಜಾರ್ಥಂತೇ ಪ್ರಯಚ್ಛಾಮಿ ಭಕ್ತ್ಯಾ ದೇವಿ ವರಪ್ರದೇ ॥''

ಶ್ರೀ ಮಹಾಲಕ್ಷ್ಮ್ಯೈನಮಃ ನಾನಾವಿಧ ಪರಿಮಳ ಪುಷ್ಪ ಸಮರ್ಪಯಾಮಿ ಎಂದು ಪುಷ್ಪಗಳನ್ನು ಧರಿಸಿ––

''ಧೂಪಂ ದಾಸ್ಯಾಮಿತೆ ದೇವಿ ಗೋಘೃತೇನ ಸಮನ್ವಿತಂ । ಸ್ವೀಕುರುಷ್ವ ಮಹಾದೇವಿ । ಭಕ್ತಾನಾಂ ವರದಾಯಿನೀ ॥ ಶ್ರೀ ಮಹಾ॥ ಧೂಪಂ । ಸಂ । ಹೀಗೆಂದು ಧೂಪವನ್ನು ಸಮರ್ಪಿಸಿ––

''ಸಾಜ್ಯಂ ತ್ರಿವರ್ತಿ ಸಂಯುಕ್ತಂ ಪಾಪಾಂಧ ತಮಸಾಪಹಂ ।
ಸ್ವಪ್ರಕಾಶಮಯೆ ಲಕ್ಷ್ಮೀ ದೀಪಂ ಸ್ವೀಕುರುಭಾರ್ಗವಿ''ಶ್ರೀಮಹಾಲಕ್ಷ್ಮ್ಯೈ ನಮಃ ದೀಪಂ ಸಮರ್ಪಯಾಮಿ ॥ ಎಂದು ದೀಪವನ್ನು ಸಮರ್ಪಿಸಿ––

''ಭುಂಕ್ಷ್ವ ಭಕ್ಷ್ಯಂಚ ಭೋಜ್ಯಂಚ ನೇವೇದ್ಯಂ ಷಡ್ರಸಾನ್ವಿತಂ ।
ಕ್ಷೀರಸಾಗರ ಸಂಭೂತೆ ಪರಮಾನ್ನಾದಿ ಸಂಯುತಂ ॥ ಶ್ರೀ ಮಹಾ ॥ ಲ ।
ನೇವೇದ್ಯಂ । ಸಮರ್ಪಯಾಮಿ ।

ಎಂದು ನೇವೇದ್ಯವನ್ನು ಅರ್ಪಿಸಿ ಅರ್ಘ್ಯವನ್ನು ತೋರಿಸುವದು.

''ಪೂಗೀಫಲ ಸಮಾಯುಕ್ತಂ ನಾಗವಲ್ಲೀದಲ್ಯೈರ್ಯುತಂ ।
ಜಾತೀ ಲವಂಗ ಸಂಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಂ ॥
ಶ್ರೀ ಮಹಾ । ಲ । ತಾಂಬೂಲಂ । ಸಂ ॥

ಹೀಗೆಂದು ತಾಂಬೂಲವನ್ನು ಅರ್ಪಿಸಿ ಅರ್ಘ್ಯವನ್ನು ತೋರಿಸುವದು––

''ಸುವರ್ಣಂ ಸರ್ವ ಧಾತೂನಾಂ ಶ್ರೇಷ್ಠಂ ದೇವೀ ವರಂ ಸದಾ ।
ಭಕ್ತ್ಯಾದದಾಮಿ ವರದೇ ಸ್ವರ್ಣ ವೃಷ್ಟಿಂಚ ದೇಹಿಮೇ ॥ ಶ್ರೀ ಮಹಾ ।
ಲ । ದಕ್ಷಿಣಾಂ । ಸಂ ॥

ಎಂದು ದಕ್ಷಿಣೆಯನ್ನು ಅರ್ಪಿಸಿ ಅರ್ಘ್ಯವನ್ನು ತೋರಿಸುವದು.

"ನೀರಾಜನಂ ಸುಮಾಂಗಲ್ಯಂ ಕರ್ಪೂರೇಣ ಸಮನ್ವಿತಂ ।
ಚಂದ್ರಾರ್ಕ ವಹ್ನಿ ಸದೃಶಂ ಗೃಹಾಣ ಹರಿವಲ್ಲಭೇ ॥ ಶ್ರೀ ಮಹಾ ॥ ೮॥
ನೀರಾಜನಂ । ಸಂ॥

ಹೀಗೆಂದು ಆರತಿಯನ್ನು ಬೆಳಗಬೇಕು. ತದನಂತರ--

"ದಾಮೋದರ ಪ್ರಿಯದೇವಿ ನಮಸ್ತ್ರೈಲೋಕ್ಯಸಾಯಕಿ ।
ಹರಿಕಾಂತೇ ನಮಸ್ತೇಸ್ತು ತ್ರಾಹಿಮಾಂ ದುಃಖಸಾಗರಾತ್ ॥

ಶ್ರೀ ಮಹಾಲಕ್ಷ್ಮೈನಮಃ ನಮಸ್ಕಾರಂ ॥ ಸಂ ॥ ಎಂದು ನಮಸ್ಕಾರ ಮಾಡಿ ಮಂಗಲವನ್ನು ಮಾಡಿ ಮಂತ್ರಾಕ್ಷತೆಗಳನ್ನು ಹಾಕಿ ಪೂಜಾ ಸಮಾಪ್ತಿಗೊಳಿಸಬೇಕು. ಇದರಂತೆ ಸರಸ್ವತೀ ಪೂಜೆಯನ್ನು ಪೂರೈಸಿ ಅಲ್ಲಿ ನೆರೆದ ಜನರಿಗೆ ಶಕ್ತ್ಯಾನುಸಾರ ಫಲಹಾರ ಮಿಠಾಯಿ ತಾಂಬೂಲಾದಿಗಳನ್ನು ಕೊಡಬೇಕು. ಪುರೋಹಿತರಿಗೂ ಹಾಗೂ ಮಹೇಶ್ವರರಿಗೂ ತಾಂಬೂಲ ದಕ್ಷಿಣೆಯನ್ನು ಕೊಟ್ಟು ತೃಪ್ತಿಪಡಿಸಬೇಕು.

ಇತಿ ಮಹಾಲಕ್ಷ್ಮೈ ಸರಸ್ವತೀ (ವಹಿ ಪುಸ್ತಕ) ಪೂಜಾ ಸಮಾಪ್ತಂ ॥

## ೧೧ ಹಿತೋಪದೇಶಗಳ-ರತ್ನ ಮಾಲಿಕೆ

### (ಭಕ್ತಿ, ಜ್ಞಾನ, ನಡೆ-ನುಡಿ, ನೀತಿ, ಮೊದಲಾದವುಗಳ ವಿಷಯ ಪೋಣಿಕೆ.)

೧) ಸದಾ ನೀತಿವಂತನಾಗಿರಬೇಕು. ಇದರಿಂದ ಜನರಲ್ಲಿ ಹೆಚ್ಚು ಮೆಚ್ಚಿಗೆ ಬೆಳೆಯುವದು. ೨) ಸದಾ ಸಂತೋಷಿಯೂ, ನಮ್ರತೆವಂತನೂ ಆಗಿರಬೇಕು. ೩) ಮಾನಕ್ಕೆ ಹಾನಿ ಬರುವ ಸ್ಥಾನಕ್ಕೆ ಆಮಂತ್ರಣವಿಲ್ಲದೆ ಹೋಗಿ ಅವಮಾನ ಹೊಂದಿ ದುಃಖಿತನಾಗಬಾರದು. ೪) ಪರರ ದೂಷಣೆಯನ್ನು ಎಂದೂ ಮಾಡಕೂಡದು. ೫) ಶುಚಿಯೇ ಶಿವಾಚಾರದ ಸ್ವಾಸ್ಥ್ಯವೆಂದು ಹೇಳಲ್ಪಡುವ ಕಾರಣ ಸದಾ ತನ್ನ ಹೆಂಡರು ಮಕ್ಕಳು ಶುಚಿಯಾಗಿರುವದರ ಕಡೆ ಹೆಚ್ಚು ಗಮನಿಸಬೇಕು. ೬) ತಮ್ಮ ಅನಾಚಾರ ವೃತ್ತಿಯಿಂದ ಆಚಾರವಂತರನ್ನು ನೋಯಿಸಿ ಪಾಪಿಗಳೆನಿಸಬಾರದು. ೭) "ಅತಿ ಸರ್ವತ್ರ ವರ್ಜಯೇತ್" ಎಂಬುದನ್ನು ತಿಳಿದು ಸ್ನೇಹ ಮಾಡಬೇಕು. ೮) ದುಷ್ಟನಿಗ್ರಹ ಶಿಷ್ಟಪರಿಪಾಲನ ಗುಣವಂತನಾಗಿರಬೇಕು. ೯) ಪ್ರತಿಫಲದ ಇಚ್ಛೆಯಿಲ್ಲದೇ ಪರೋಪಕಾರವನ್ನು ಮಾಡಬೇಕು. ೧೦) "ಆಲಸ್ಯಾಣಾಂ ಮಹಾರಿಪುಃ" ಎಂಬುದನ್ನು ತಿಳಿದು ಆಲಸ್ಯವೆಂಬ ಶತೃವನ್ನು ಹೊಡೆದೋಡಿಸಿ ತನ್ನ ಕರ್ತವ್ಯವನ್ನು ಪರಿಪಾಲಿಸಿದರೆ ಶ್ರೀ

ದೇವಿಯು ಬೆನ್ನು ಬಿಡಲಾರಳು. ಹಾಗೂ ದೈವವೇ ಗತಿಯೆಂದು ಕೂಡ್ರದೆ ಸದಾ ಪ್ರಯತ್ನಶೀಲನಾಗಿರಬೇಕು. ೧೧) ಬಾರದು ಬಪ್ಪದು ಬಪ್ಪದು ತಪ್ಪದು ಎಂಬಂತೆ ಬಾರದಿದ್ದಕ್ಕೆ ಬಯಿಸಿ ಚಿಂತಿಸಬಾರದು. ಒಂದು ವೇಳೆ ಬರುವದಿದ್ದರೆ ತಾನೇ ಬರುವದು. ೧೨) ಅಪರಿಚಿತರ ಮನೆಯಲ್ಲಿ ಮಲಗದಿರುವದೇ ವಿಹಿತ. ಹಾಗೂ ಪುರುಷನು ತನ್ನ ತಾಯಿ ಅಥವಾ ಅಕ್ಕ ಇಲ್ಲವೇ ತಂಗಿ ಇವರ ಸಂಗಡ ಒಂದೇ ಹಾಸಿಗೆಯಲ್ಲಿ ಮಲಗಬಾರದು. ೧೩) ಹಾಸಿಗೆ ಇದ್ದಷ್ಟು ಕಾಲು ಚಾಚಬೇಕು. ಹಾಗೂ ನಾವು ಬಂದರೂ ಸಾಲ ಮಾಡಕೂಡದು. ದೇವರು ಕೊಟ್ಟದ್ದರಲ್ಲಿಯೇ ತಮ್ಮ ಚರಿತಾರ್ಥವನ್ನು ನಡೆಸಿಕೊಂಡು ಸಂತೃಪ್ತನಾಗಿರಬೇಕು. ೧೪) ಉತ್ಪನ್ನಕ್ಕಿಂತ ಖರ್ಚು ಹೆಚ್ಚು ಮಾಡಬಾರದು. ಇದು ಒಳ್ಳೆಯ ಲಕ್ಷಣವಲ್ಲೆಂದು ತಿಳಿಯಬೇಕು. ೧೫) ದುಷ್ಟರಿಗೆ ಬಂದ ಸಂಪತ್ತು ಸಜ್ಜನರಿಗೆ ಬಂದ ವಿಪತ್ತು ಇವು ಸ್ಥಿರವಾದವುಗಳೆಂದು ತಿಳಿಯಬಾರದು. ೧೬) ಅಧಿಕಾರ, ಐಶ್ವರ್ಯ ಹಾಗೂ ದಾರಿದ್ರ್ಯ ಇವು ಸ್ಥಿರವೆಂದು ತಿಳಿದು ಅನ್ಯಾಯ ಮಾಡಬಾರದು. ೧೭) ಸಂತೋಷವೇ ಯೌವನ, ಚಿಂತೆಯೇ ಮುಪ್ಪು ಎಂಬುದನ್ನು ಚನ್ನಾಗಿ ಅರಿತು ನಡೆಯಬೇಕು. ೧೮) ಹಿಡಿದ ಕಾರ್ಯವನ್ನು ಅರ್ಧಕ್ಕೆ ಬಿಡದವನು ಜಾಣನು. ೧೯) ಸಜ್ಜನರ ಸಹವಾಸವು ಹೆಜ್ಜೇನು ಸವಿದಂತೆ ದುರ್ಜನರ ಸಹವಾಸವು ಸರ್ಪದಂತೆಯು. ೨೦) ಅನ್ಯರ ಬೆಳವಣಿಗೆಯನ್ನು ನೋಡಿ ಸಂತೋಷಪಡಬೇಕು. ಆದರೆ ಅಸೂಯೆಪಡಬಾರದು. ೨೧) ಸದ್ವಿದ್ಯೆಯನ್ನು ಸದಭಿಮಾನದಿಂದ ಬಹು ಪರಿಶ್ರಮಪಟ್ಟಾದರೂ ಸಂಪಾದಿಸಬೇಕು. ೨೨) ತಪ್ಪಿಗೆ ಒಪ್ಪಿಕೊಳ್ಳುವದು ಜಾಣತನದ ಲಕ್ಷಣ. ಮತ್ತು ಯೋಗ್ಯ ವಿಚಾರದ ಕಡೆ ಮನಸ್ಸನ್ನು ಸೆಳೆಯುವದು ವಿವೇಕದ ಲಕ್ಷಣ. ೨೩) ಸತತೋದ್ಯೋಗಿಗೇನೇ ಧನಲಕ್ಷ್ಮಿಯು ಮಾಲೆಯನ್ನು ಹಾಕುವಳು. ದರಿದ್ರನ ಕಡೆ ಆಕೆಯು ಹೊರಳಿ ನೋಡುವದಿಲ್ಲ. ೨೪) ಸದ್ಧರ್ಮ ಸದಾಚಾರಣೆಗಳಿಂದ ಯಶ, ಕೀರ್ತಿ, ಆದರ, ಐಶ್ವರ್ಯಗಳು ಪ್ರಾಪ್ತಿಯಾಗುವವೆಂದು ಮರೆಯಬಾರದು. ೨೫) ಇಹಲೋಕದಲ್ಲಿ ಎಲ್ಲರ ಸಂಗಡ ಪ್ರೇಮದಿಂದಿದ್ದು ಬೇಕಾದವನೇ ದೇವಲೋಕಕ್ಕೆ ಬೇಕಾಗುವನು. ೨೬) ಸದ್ಭಕ್ತಿಯೇ ಮುಕ್ತಿಗೆ ಕಾರಣವಾದ್ದರಿಂದ ಬಾಹ್ಯಾಡಂಬರ ಭಕ್ತಿಯನ್ನು ಬಿಟ್ಟು ಯಾವಾಗಲೂ ನಿಜ ಭಕ್ತಿಯಲ್ಲಿರಬೇಕು. ೨೭) ಸದ್ಧರ್ಮವಂತರು ಸ್ವಜನಾಂಗಾಭಿವೃದ್ಧಿಗೆ ಹಗಲಿರುಳೂ ದುಡಿಯತಕ್ಕವರಿಗೆ ಆತ್ಮ ಸಂತೋಷದಿಂದ ತನು-ಮನ-ಧನಗಳಿಂದ ಸಹಾಯ ಸಲ್ಲಿಸಬೇಕು. ೨೮) ಅಜ್ಞಾನವಂತರಿಗೆ ಸುಜ್ಞಾನವಂತರು ಭಿನ್ನಭಾವವಿಲ್ಲದೆ ಜ್ಞಾನೋಪದೇಶ ಮಾಡಬೇಕು. ೨೯) ಮನಸ್ಸಿನ ಗುರುವೇ ಸದ್ವಿವೇಕವೆಂದು ಮರೆಯಬಾರದು ೩೦) ಮಾತಿನಲ್ಲಿ ಚತುರನಾಗಿ ಸುವ್ಯಾಖ್ಯಾನಕಾರನಾಗಬೇಕಾದರೆ ಪಂಡಿತರ ಗ್ರಂಥವನ್ನು ಆಗಾಗ್ಗೆ ಓದುತ್ತಿರಬೇಕು. ೩೧) ಮನೆಯಲ್ಲಿ

ಮುಖ್ಯವಾಗಿ ಸ್ತ್ರೀಯರೂ ಸಹ ಸುಶೀಲ ಹಾಗೂ ಸುಶಿಕ್ಷಿತರೂ ಆಗಿದ್ದರೆ ಮಾತ್ರ ಗೃಹಸೌಖ್ಯ ದೊರೆಯುವದು. ೩೨) "ತಾಯಿಯೇ ಬಾಯಿ" ಎಂಬಂತೆ ತಾಯಿ ಇದ್ದ ಮನೆಯೊಳಗಿನ ಸೌಖ್ಯವು ಸ್ವರ್ಗ ಸುಖಕ್ಕಿಂತಲೂ ಹೆಚ್ಚಿನದೆಂದು ಹೇಳ ಬಹುದು. ೩೩) ಆಶೆಯುಳ್ಳ ಧನವಂತನು ಎಂದೆಂದಿಗೂ ಸೌಖ್ಯ ಹೊಂದಲಾ ರನು. ೩೪) "ಕೃಪಣನ ದುಡ್ಡು ಕಲ್ಲಾಬಿಲ್ಲಿ" ಎಂಬಂತೆ ದಾನ-ಧರ್ಮಮಾಡದ ಕೃಪಣ ಶ್ರೀಮಂತನ ದ್ರವ್ಯವು ದುಂದುಗಾರಿಕೆಯಲ್ಲಿ ಹಾಳಾಗುವದು. ೩೫) ವೇಳೆಯ ಮಹತ್ವವನ್ನರಿತವನೇ ಸದಾ ಸೌಖ್ಯದಿಂದ ಇರುತ್ತಾನೆ. ೩೬) ನಿಯ ಮಿತತನದಿಂದ ಆಗುವಷ್ಟು ಕಾರ್ಯಗಳು ಅನಿಯಮಿತತನದಿಂದ ಆಗಲಾರವು. ೩೭) ಸಿಟ್ಟಿನ ಕೈಯಲ್ಲಿ ಬುದ್ಧಿಯನ್ನು ಕೊಡದೆ, ಉಪಾಯದಿಂದ ನಡೆದರೆ ಅಪಾ ಯಗಳು ಸಂಭವಿಸಲಾರವು ೩೮) ಪ್ರಾಮಾಣಿಕತನವು ಸರ್ವ ಗುಣಗಳಲ್ಲಿಯೂ ಶ್ರೇಷ್ಠವಾಗಿರುವದರಿಂದ ಪ್ರಾಮಾಣಿಕವಂತನು ಸೌಖ್ಯಾನಂದ-ಯಶಾದರ-ಕೀ ರ್ತಿಯನ್ನು ಹೊಂದುತ್ತಾನೆ. ೩೯) ಜೀವನದ ಕೊನೆಯ ಧ್ಯೇಯವೆಂದರೇಸತ್ಕೀ ರ್ತಿ-ಸದ್ಗುಣಗಳನ್ನು ಸಂಪಾದಿಸುವದು. ೪೦) ಬಾಲ್ಯದಲ್ಲಿ ನೋಮಾರಿಯಾ ದರೆ ಮುಪ್ಪಿನ ಕಾಲಕ್ಕೆ ಬಹು ಕಷ್ಟಕ್ಕೀಡಾಗಬೇಕಾಗುತ್ತದೆ. ೪೧) ಕಪಟ ದಿಂದ ಜಯಹೊಂದಿದಕ್ಕಿಂತಲೂ ಸನ್ಮಾರ್ಗದಲ್ಲಿ ಸಂಭವಿಸಿದ ಕಷ್ಟ ನಷ್ಟಗಳ ಸಹನತೆಯೇ ವರ್ಣನೀಯವಾಗುವದು. ೪೨) ಇಂದ್ರಿಯ ನಿಗ್ರಹವೇ ಆತ್ಮ ವಿಜಯದ ಮೂಲತತ್ವವು. ಆತ್ಮ ವಿಜಯವೇ ನಿಜವಾದ ಸುಖಶಾಂತಿಯೆನಿಸು ವದು. ೪೩) ಆರೋಗ್ಯವೇ ಭಾಗ್ಯ, ವಿಶ್ವಾಸವೇ ಬಂಧು, ವಿನಾಶವಿಲ್ಲದ ಐಶ್ವ ರ್ಯವೇ ತೃಪ್ತಿಯು. ೪೪) ಸಿರಿ ಬಂದ ಕಾಲಕ್ಕೆ ಕರೆದು ದಾನವ ಮಾಡಬೇಕು ೪೫) ದಾನ ಕೊಡುವದಿದ್ದಾಗ ಆಗ ಬಾ, ಈಗ ಬಾ, ಹೋಗಿ ಬಾ ಅನ್ನದೇ ಆಗಲೇ ಕೊಡುವವನ ಧರ್ಮವೇ ಶ್ರೇಷ್ಠವಾದುದು. ೪೬) ಆಶೆಯ ದಾಸನಾ ದರೆ ದಾರಿದ್ರ್ಯತನವು ಬೆನ್ನುಹತ್ತುವದು. ೪೭) ಹರನು ಕೊಡುವ ಕಾಲಕ್ಕೆ ಸಿರಿಯು ತಾನೇ ಬೆಂಬತ್ತಿ ಬರುವದು. ೪೮) ಸಿರಿಯೆಂಬುದು ನೀರಮೇಲಿನ ಗುಳ್ಳೆಯಂತೆ, ಅದು ಕಾರಣ ಸಂಪತ್ಕಾಲದಲ್ಲಿ ದಯಾವಂತನೂ ನಿಗರ್ವವಂತನೂ ಆಗಿರಬೇಕು. ೪೯) ಹಣದ ಸದ್ವಿನಿಯೋಗವು ಆಗದಿದ್ದರೆ ಲಕ್ಷಾಧೀಶನೂ ಭಿಕ್ಷಾ ಧೀಶನಾಗುತ್ತಾನೆ. ೫೦) ಕಾಲಗತಿಸಿದ ನಂತರ ಬಂದ ಬುದ್ಧಿಯಿಂದ ಏನು ಪ್ರಯೋಜನ. ಅದು ಕಾರಣ ಹಣವಿದ್ದಾಗಲೇ ಭಕ್ತಿ, ನೆಣವಿದ್ದಾಗಲೇ ಸೇವಾ ಮಾಡಿ ಮುಕ್ತಿ ಪಡೆಯಬೇಕೆಂಬ ತತ್ವವನ್ನರಿತು ನಡೆಯಬೇಕು. ೫೧) ಲಾಭ ಹಾನಿಗಳನ್ನು ಪ್ರತಿನಿತ್ಯದಲ್ಲಿಯೂ ವಿಚಾರ ಮಾಡತಕ್ಕವನ ಪ್ರಪಂಚವು ನಿರ್ವಿ ಘ್ನಕರವಾಗಿ ನಡೆಯುವದು. ೫೨) ಸಂಸಾರವೆಂಬ ಕಡಲವನ್ನು ದಾಟಬೇಕಾ ದರೆ ಶಿವನಾಮಸ್ಮರಣೆಯೇ ಮಿಗಿಲಾದುದು. ೫೩) ಶಿವನಾಮವೆಂಬ ಕಾಡ್ಗಿಚ್ಚು ಪಾಪವೆಂಬ ಪರ್ವತಗಳನ್ನೆಲ್ಲ ದಹಿಸಿಬಿಡುವದು. ೫೪) ಸಂಪತ್ತಿನಲ್ಲಿ ಹಿಗ್ಗದ

ವಿಪತ್ತಿನಲ್ಲಿ ಕುಗ್ಗದೆ, ಮೂಡುವ ಮುಳಗುವ ಕಾಲಕ್ಕೆ ಒಂದೇ ರೂಪವಾದ ಸೂರ್ಯನಂತೆ ಸದಾವ ಕಾಲ ಏಕರೂಪನಾಗಿರಬೇಕು. ೫೫) ಪರಧನ-ಪರಸ್ತ್ರೀ ಮುಟ್ಟದಿರುವದೇ ಶೀಲ; ಪರಪೀಡೆ-ಪರನಿಂದೆ ಮಾಡದಿರುವದೇ ಪುಣ್ಯ. ೫೬) ವರದಕ್ಷಿಣೆ ಹಾಗೂ ತೆರವು ತೆಗೆದುಕೊಳ್ಳುವದು ಅನೀತಿಯ ಪರಮಾವಧಿಯು. ಕಾರಣ ಇವುಗಳನ್ನು ನಿಷೇಧ ಮಾಡಬೇಕು. ೫೭)ಗ್ರಹಣ ಕಾಲದಲ್ಲಿ ಉಣ್ಣುವದನ್ನಾಗಲೀ, ಮಲಗುವದನ್ನಾಗಲೀ ಮಾಡಿದರೆ ರೋಗಿಯಾಗುತ್ತಾನೆ. ೫೮) ಗ್ರಹಣ ಕಾಲದಲ್ಲಿ ಮಲಮೂತ್ರ ವಿಸರ್ಜನೆಯನ್ನೂ, ಸಂಭೋಗವನ್ನೂ ತ್ಯಾಜ್ಯ ಮಾಡಬೇಕು. ೫೯) ತೆಂಗಿನ ನೀರನ್ನು ಕಂಚಿನ ಪಾತ್ರೆಯಲ್ಲಿ ಹಾಗೂ ಹಾಲನ್ನು ತಾಮ್ರದ ಪಾತ್ರೆಯಲ್ಲಿ ಹಾಕಿಕೊಂಡು ಕುಡಿಯಬಾರದು. ೬೦) ವಿಶ್ವಾಸವು ಉತ್ಕರ್ಷತೆಯನ್ನು ಹೆಚ್ಚಿಸುವದು. ಅವಿಶ್ವಾಸವು ಅವನತಿಯನ್ನು (ಕೀಳುತನವನ್ನು) ಹೊಂದಿಸುವದು. ೬೧) ಪ್ರೇಮದಿಂದ ಸಾಧ್ಯವಾಗುವಷ್ಟು ಕಾರ್ಯಗಳು ದ್ವೇಷ, ಅಸೂಯೆ, ಸಿಟ್ಟುಗಳಿಂದ ಸಾಧ್ಯವಾಗಲಾರವು. ೬೨) ಅರಿಷಡ್ವರ್ಗಗಳನ್ನು ಗೆಲ್ಲಬೇಕಾದರೆ, ಶಿವಭಕ್ತರಲ್ಲಿ ಪ್ರೇಮವನ್ನೂ ಶಿವನಲ್ಲಿ ನಿಷ್ಕಾಮ ಭಕ್ತಿಯನ್ನೂ, ದುರಾಚಾರಿಯಲ್ಲಿ ಗರ್ವವನ್ನೂ ಶಿವಭಕ್ತಿಯಿಲ್ಲದವರಲ್ಲಿ ಅಸೂಯತನವನ್ನೂ, ಮದಗೊಂಡ ಇಂದ್ರಿಯಗಳಲ್ಲಿ ಕ್ರೋಧವನ್ನೂ, ಶಿವಪ್ರಸಾದದೊಳು ಆಶೆಯನ್ನೂ ತಾಳಬೇಕು. ೬೩) ಹಗಲು ಮೈಥುನ ಮಾಡುವದು ಅಥವಾ ನಿದ್ರೆಮಾಡುವದು ಪಾಪಿಯ ಲಕ್ಷಣವು. ಹಾಗೂ ಇದರಿಂದ ಆಯುಷ್ಯವು ಕಡಿಯಾಗುವದು. ೬೪) ಕ್ರಿಯಾಯುಕ್ತ ಜ್ಞಾನವೇ ಸುಜ್ಞಾನವೆನಿಸುವದು. ೬೫) ಸತ್ಕರ್ಮಗಳಲ್ಲಿ ನಿರತನಾಗುವದೇ ಮಿಗಿಲಾದ ಭೂಷಣವು ೬೬) ವಿಚಾರವಿಲ್ಲದವನ ಕೂಡ ಅವಿವೇಕಿಗಳಂತೆ ನಾವು ಎಂದೂ ವರ್ತಿಸಕೂಡದು. ೬೭) ಪಂಡಿತರನ್ನು ಸತ್ಕರಿಸುವದೂ, ಪಾಮರರನ್ನು ಉದ್ಧಾರ ಮಾಡುವದೂ ವಿವೇಕವಂತನ ಪರಮ ಲಕ್ಷಣವು. ೬೮) ಚಾಂಡಾಲನೆಂದರೇ ಗುರುಭಕ್ತಿಯಿಲ್ಲದವನೆಂದು ತಿಳಿಯಬೇಕು. ೬೯) ಗುರು ಪತ್ನಿ ಪುತ್ರಿಯರನ್ನು ಗಮನ ಮಾಡುವವನೇ ಮಹಾ ಪಾಪಿಯು. ಆದರೆ ಅವರನ್ನು ಗುರುವಿನಂತೆ ಕಾಣುವವನೇ ಮಹಾ ಪುಣ್ಯಾತ್ಮನು. ೭೦) ಗುರೂಪದೇಶವನ್ನು ಮರೆಯದೇ ಹಾಗೂ ಗುರುವಾಜ್ಞೆಯನ್ನು ಉಲ್ಲಂಘಿಸದೆ ನಡೆಯಬೇಕು. ೭೧) ಅನಾಚಾರವಂತರೂ ನಿಂದ್ಯರ ಹಾಗೂ ಬಹಿಷ್ಕಾರಹೊಂದಿದವರ ಮತ್ತು ಪತಿತರಾದವರ ಮನೆಯ ಅನ್ನವನ್ನು ಉಣ್ಣಕೂಡದು. ೭೨) "ಮಾತೃದೇವೋಭವ-ಪಿತೃದೇವೋಭವ" ಎಂಬಂತೆ ಪ್ರತ್ಯಕ್ಷ ದೇವರಸ್ವರೂಪರಾದ ಜನ್ಮ ಕೊಟ್ಟ ತಾಯಿ-ತಂದೆಗಳನ್ನು ಭಕ್ತಿ ವಿಶ್ವಾಸಗಳಿಂದ ಕಾಪಾಡಬೇಕು. ೭೩) "ಅತಿಥಿ ದೇವೋಭವ" ಎಂಬಂತೆ ಅತಿಥಿಯೆಂದರೆ ದೇವರ ಸಮಾನವೆಂದು ತಿಳಿದು ಸತ್ಕಾರ ಮಾಡಬೇಕು. ೭೪) ಸದಾ ಪರೋ

ವಕಾರಿಯಾಗಿರಬೇಕು ೭೫) ಶಿವಧರ್ಮ-ಶಿವಸಾಸ್ತ್ರ ಹಾಗೂ ಶಿವಶರಣರಲ್ಲಿ ಅಚಲಭಕ್ತಿಯಿಂದಿರಬೇಕು. ೭೬) ಸ್ತ್ರೀಯರನ್ನೂ ಪೀಡಿಸಬಾರದು. ಹಾಗೂ ಹಿಂಸೆ ಕೊಡಬಾರದು. ಯಾಕಂದರೆ ಕಣ್ಣೀರು ಸುರಿಸುವ ಹೆಣ್ಣು ಮಕ್ಕಳ ಮನೆಯು ಎಂದೂ ಉದ್ಧಾರವಾಗಲಾರದು. ಅಂದರೆ ಹಾನಿ, ಕೇಡು, ಅರಿಷ್ಟ ಮೊದಲಾದವುಗಳು ತಪ್ಪಲಾರವು. ೭೭) ಅರ್ಥವಿಲ್ಲದ ಮಾತುಗಳಿಂದ ವ್ಯರ್ಥ ವಾಗಿ ಗೌರವಕ್ಕೆ ಕುಂದು ಬರುತ್ತದೆ. ೭೮) ಸಜ್ಜನರು ಮೆಚ್ಚುವಂತೆ ನುಡಿ ನಡೆಗಳಿದ್ದು ಮಹಾತ್ಮರ ಮಾರ್ಗ ತುಳಿಯುವದೇ ಲೇಸು. ೭೯) ಅಪರಿಚಿತ ವಿಷಯದಲ್ಲಿ ವ್ಯರ್ಥವಾಗಿ ದುರಭಿಮಾನವನ್ನು ತಾಳಕೂಡದು. ಯಾಕಂದರೆ ಇದು ಅವನತಿಯ ಲಕ್ಷಣವು. ೮೦) ಶಾಸ್ತ್ರವಿರುದ್ಧವಿರುವ ರೂಢಿಯಲ್ಲಿದ್ದರೆ ಅದನ್ನು ಕೈ ಬಿಡಲು ಅಡ್ಡಿಯಿಲ್ಲ. ೮೧) ಆತ್ಮಪೌರುಷ ಮಾಡಿಕೊಳ್ಳುವದು ‹‹ಉತ್ತರಭೂಪನಂತೆ'' ಹೇಡಿಯ ಲಕ್ಷಣವು. ೮೨) ಧನದಾಶೆಗಾಗಿ ಎಂದೂ ಅಯೋಗ್ಯ ಕಾರ್ಯಗಳನ್ನು ಮಾಡಬಾರದು. ೮೩) ಧಾರ್ಮಿಕ ವೃತ್ತಿಯಿಂದ ಸಂಪಾದಿಸಿದ ದ್ರವ್ಯದಲ್ಲಿಯೇ ಸಂತೃಪ್ತಿಯುಳ್ಳವನಾಗಿರಬೇಕು. ೮೪) ಸಧರ್ಮ ದಲ್ಲಿ ಲೋಪದೋಷಗಳಿವೆ ಎಂದು ಹೀಯ್ಯಾಳಿಸಿ ಅನ್ಯ ಧರ್ಮಗಳಲ್ಲಿ ಬಹ್ವು ಸುಗುಣಗಳಿವೆಯೆಂದು ಎಣಿಸಿ ಪರಧರ್ಮ ಸ್ವೀಕರಿಸಿದರೆ ಮಹಾ ಪಾಪಕಾರ್ಯ ಮಾಡಿದಂತಾಗುವದು. ೮೫) ಕಲಿಯುಗದ ಅಂತ್ಯದಲ್ಲಿ ಜರಗಬಹುದಾದ ಸುಳ್ಳು ಭವಿಷ್ಯ ನಂಬಿ ಈಗಾಗಲೇ ವರ್ಣಸಾಂಕರ್ಯವಾಗುವದು ಅಧರ್ಮವೆನಿಸು ತ್ತದೆ. ೮೬) ಕೇವಲ ಎಲ್ಲ ಜಾತಿಯವರ ಕೂಡ ಕೂಡಿ ಊಟ ಮಾಡಿದರೆ ರಾಷ್ಟ್ರೋನ್ನತಿಯಾಗದೇ ಪರಸ್ಪರ ಸರ್ವ ಜನಾಂಗದವರು ಒಕ್ಕಟ್ಟಾಗಿ ಮಾತ್ಸರ್ಯ ಹಾಗೂ ಸ್ವಾರ್ಥವನ್ನು ತ್ಯಾಜ್ಯ ಮಾಡಿ ವಿದ್ಯಾದಾನ, ಧರ್ಮ ಧನ, ಪರೋಪ ಕಾರ್ಯಗಳನ್ನು ಹೆಚ್ಚಾಗಿ ಮಾಡುತ್ತ ಸರ್ವರೂ ಸ್ನೇಹಭಾವದಿಂದ ಇರುವದೇ ರಾಷ್ಟ್ರಕ್ಕೂ ಹಿಂದೂ ಧರ್ಮಕ್ಕೂ ಹಿತಕಾರಿಯು. ೮೭) ಭಗೀರಥ ಪ್ರಯತ್ನ ದಿಂದ ಸುಜ್ಞಾನವನ್ನೇ ಸಂಪಾದಿಸಬೇಕು. ಅಂದರೆ ಅಜ್ಞಾನವು ತಾನಾಗಿಯೇ ನಾಶಹೊಂದುತ್ತದೆ. ೮೮) ಧಾರ್ಮಿಕನ ಶ್ರದ್ಧೆಯು ಸಾತ್ವಿಕವಾಗಿದ್ದರೆ ಮಾತ್ರ ಸದಾ ಸೌಖ್ಯವು ನೆಲೆಗೊಳ್ಳುವದು. ೮೯) ಅಜ್ಞಾನವೆಂಬ ಕತ್ತಲೆಯಿಂದ ಪಾರಾಗಿ ಸುಜ್ಞಾನವೆಂಬ ಪ್ರಕಾಶವನ್ನು ತಲುಪಿದರೆ ಪುರುಷಾರ್ಥಸಿದ್ಧಿಯಾಗಿ ಜೀವ ನ್ಮುಕ್ತಿಯಾಗುವದು ೯೦) ಸರ್ವಭೂತದಯೆ ಪ್ರಾಣಿಗಳ ಮೇಲೆ ಅಂತಃಕರು ಣೆಯುಳ್ಳವನಾಗಿರಬೇಕು. ಅಂದರೆ ಶಿವನು ಮೆಚ್ಚಿ ತನ್ನ ಸಾನಿಧ್ಯದಲ್ಲಿ ಸ್ಥಾನ ವನ್ನು ಕೊಡುವನು. ೯೧) ತನಗಾಗುವ ಅಲ್ಪ ಸುಖ-ಲಾಭಕ್ಕಾಗಿ ಅನ್ಯರನ್ನು ಮಹಾ ಸಂಕಟವೆಂಬ ಕಂದಕದಲ್ಲಿ ನೂಕಕೂಡದು. ೯೨) ಅಹಿಂಸೆಯೇ ಪರ ಧರ್ಮವಾಗಿದೆ- ೯೩) ಅನ್ಯರ ಮನನೋಯುವಂಥ ಮಾತನ್ನಾಡಿದರೆ ತನಗೆ ಮುಂದೆ ಕಷ್ಟದ ಬುತ್ತಿ ಕಟ್ಟಿಟ್ಟದ್ದೆಂದು ತಿಳಿಯಬೇಕು. ೯೪) ಒಂದು ಕಪಾ

ಳಕ್ಕೆ ಹೊಡೆದರೆ ಮತ್ತೊಂದು ಕಪಾಳವನ್ನು ಮುಂದೆ ಮಾಡು. ಎಂಬ ತಾತ್ವಿಕ ವಚನದಂತೆ ತಾನು ಯಾರಿಂದ ಅವಮಾನಿತನಾಗಿರುತ್ತಾನೆಯೋ ಅವರನ್ನು ತಿರುಗಿ ಅವಮಾನಗೊಳಿಸಲು ಪ್ರಯತ್ನಿಸಕೂಡದು. ೯೫) ತಾನು ಎಂಥ ವಿಪತ್ತಿನಲ್ಲಿದ್ದರೂ ಪರರ ಹೃದಯಭೇದಕ ನಿಷ್ಠುರ ಮಾತಗಳನ್ನಾಡಕೂಡದು. ೯೬) ಅಧಿಕಾರದಲ್ಲಿ ನ್ಯಾಯನಿಷ್ಠುರತೆ, ನಿಷ್ಪಕ್ಷಪಾತತನ ಒಳ್ಳೇ ಮುಖ್ಯವಾಗಿರಬೇಕು. ೯೭) ದುಃಖವಂತರಿಗೆ ದಯೆಯನ್ನೂ ಆಡಂಬರವಂತರಿಗೆ ನಿರ್ದಯತ್ವವನ್ನೂ ತೋರಿಸಬೇಕು. ೯೮) ಮನದ ಮುಂದಿನ ಆಶೆಯೇ ನಾಶಕ್ಕೆ ಕಾರಣವೆಂದು ನಿಸ್ಸಂದೇಹವಾಗಿ ತಿಳಿಯಬೇಕು. ೯೯) ಪತಿಯೇ ಇಹಲೋಕದ ಪ್ರತ್ಯಕ್ಷ ದೇವರೆಂದು ಭಾವಿಸಿ ಪತ್ನಿಯು ಸದಾಚಾರ ಸದ್ವರ್ತನೆ ಹಾಗೂ ಪತಿವ್ರತೆಯಾಗಿ ನಡೆಯಬೇಕು. ೧೦೦) ದ್ವೇಷಾಸೂಯೆ ಸುಳ್ಳ ಸಿಟ್ಟುಗಳಿಲ್ಲದ ಮನಸ್ಸಿನವನಿಗೆ ಸರ್ವಜ್ಞತ್ವವುಂಟಾಗುತ್ತದೆ. ೧೦೧) ಮಾನವನು ಸದಾಚಾರ ಸದ್ಧರ್ಮ, ಸತ್ಯ, ಶೀಲ, ಸಚ್ಚಾರಿತ್ರ್ಯವುಳ್ಳವನಾಗಿ ವರ್ತಿಸಿ ಇಹದಲ್ಲಿ ಕೀರ್ತಿಯನ್ನೂ ಪರದಲ್ಲಿ ಸೌಖ್ಯವನ್ನೂ ಹೊಂದಬೇಕು.

# ದ ಶ ಮ — ರ ತ್ನ

## ಅಂತ್ಯೇಷ್ಟಿ-ವಿಧಾನ

### ವಿಭೂತಿವೀಳ್ಯೆ ಮಾಡುವ ಕ್ರಮ

"ಜಾತಸ್ಯ ಮರಣಂ ಧ್ರುವಂ" ಎಂಬಂತೆ ಇಹಲೋಕದಲ್ಲಿ ಜನ್ಮಿಸಿದ ಪ್ರತಿಯೊಬ್ಬನೂ ಪಂಡಿತನಾಗಲೀ, ಪಾಮರನಾಗಲಿ, ಭಿಕ್ಷುಕನಾಗಲೀ, ಲಕ್ಷಾಧೀಶನಾಗಲೀ, ಮಹಾತ್ಮರಾಗಲೀ, ಚಕ್ರವರ್ತಿಯಾಗಲೀ, ಆಳಾಗಲೀ, ಅರಸನಾಗಲೀ ಎಲ್ಲರೂ ಒಂದಿಲ್ಲೊಂದು ದಿವಸ ಮರಣ ಹೊಂದುವದು ನಿಶ್ಚಿತವು. ಈ ದೇಹವು ಅಸ್ಥಿರವಾದ ಘಟವೆಂದು ಆಧುನಿಕ ವಿಜ್ಞಾನಿಗಳೂ ನೆನಪಿನಲ್ಲಿಡಬೇಕಾದ ವಿಷಯವಾಗಿದೆ. ಮರಣದ ಪೂರ್ವದಲ್ಲಿ ಮರಣಾನಂತರ ವೀರಶೈವ ಪದ್ಧತಿಗನುಸಾರವಾಗಿ ಮಾಡಬೇಕಾದ ಕೊನೆಯ ಸಂಸ್ಕಾರ ವಿಧಾನವನ್ನು ಇಲ್ಲಿ ಹೇಳಲಾಗುತ್ತದೆ.

ದೇಹಾಂತ್ಯಕಾಲವು ಅತಿ ಸಮೀಪಿಸಿದಲ್ಲಿ ಮರಣ ಲಕ್ಷಣಗಳನ್ನು ಕಂಡು ವೀಳ್ಯದ ಕ್ರಮ ತೀರಿಸಿದ ನಂತರ ಜೀವಂತ ಉಳಿದರೆ ಸ್ತ್ರೀಯಾಗಲೀ ಪುರುಷ

ನಾಗಲೀ ಅವರು ಸನ್ಯಾಸಿ ಆಶ್ರಮುವನ್ನು ಸ್ವೀಕರಿಸಬೇಕಾಗುವದು. ಹಾಗೂ ಅವರು ಗೃಹಕೃತ್ಯಗಳಿಗೆ ಆರ್ಹರಾಗದೇ ಗೃಹಸ್ಥಾಶ್ರಮಿಗಳಂತೆಜೀವನ ನಾಗಿಸಲು ಬರುವದಿಲ್ಲ. ಮತ್ತು ನಿತ್ಯದಲ್ಲಿ ಸ್ನಾನ, ಪೂಜಾ, ಧ್ಯಾನ, ವಗೈರೆ ಮಾಡುತ್ತ ಕ್ರಿಯಸ್ಥರಂತೆ ಜೀವನವನ್ನು ಒಳ್ಳೇ ಆಚಾರಯುಕ್ತವಾಗಿ ಸಾಗಿಸಬೇಕಾಗುವದು. ಆದಕಾರಣ ವಿಭೂತಿವೀಳ್ಯೆಯನ್ನು ಬಹು ಜಾಗ್ರತೆಯಿಂದ ಮಾಡಬೇಕಾಗುವದು.

ಶರಣನಾಗಲೀ ಅಥವಾ ಮಹೇಶ್ವರನಾಗಲೀ ದೇಹಾಂತ್ಯ ಕಾಲದಲ್ಲಿ ತನಗೆ ಇಷ್ಟರಾದ ಅಣ್ಣ-ತಮ್ಮ, ಶಿಷ್ಯ, ಮಗ, ಬಂಧು, ಭಕ್ತ, ಸ್ನೇಹಿತ ಶಿವಜ್ಞಾನಿ ಮೊದಲಾದವರಲ್ಲಿ ಯಾರಾದರನ್ನೂ ಒರಮಾಡಿಕೊಂಡು ಯಾರಬ್ಬರಾದರೂ ಸ್ನಾನವನ್ನು ಮಾಡಿ ಆಚಮನಾದಿಗಳನ್ನು ಮುಗಿಸಿಕೊಂಡು ಮಡಿ ಬಟ್ಟೆಗಳನ್ನು ತೊಟ್ಟುಕೊಂಡು ಭಸ್ಮ ರುದ್ರಾಕ್ಷಿಗಳನ್ನು ಧರಿಸಿಕೊಂಡು ಕೂಡಿದ ಭಕ್ತ ಮಹೇಶ್ವರ ನಡುವೆ ವಿಭೂತಿ ವೀಳೆಯನ್ನಿಟ್ಟು ನುಮಸ್ಕರಿಸಿ ಅಪ್ಪಣೆಯನ್ನು ಪಡೆಯಬೇಕು. ತದನಂತರ ಆ ಮಹೇಶ್ವರನು ಇಲ್ಲವೇ ಭಕ್ತನು ಲಿಂಗೈಕ್ಯವಾಗತಕ್ಕ ಸಮಯವನ್ನರಿತು ಜಂಗಮ ಪಾದಪೂಜೆಯನ್ನು ಮಾಡಿಕೊಂಡು, ಶಿವೈಕ್ಯವಾಗತಕ್ಕವನಿಗೆ ತೀರ್ಥ ಪ್ರಸಾದವನ್ನು ಕೊಡಬೇಕು. ಆ ಬಳಿಕ ಪೂಜಿಸಿದ ಜಂಗಮ ಪರ್ಯಾನ ಪಾದದ ಅಳತೆಯನ್ನು ತೆಗೆದಿಟ್ಟುಕೊಂಡು ಅದನ್ನು ಮುಂದೆ ಸಮಾಧಿಯನ್ನು ತಯಾರಿಸುವಾಗ ಹಾಗೂ ವಿಮಾನ ಕಟ್ಟುವಾಗ ಉಪಯೋಗಿಸಬೇಕು. ನಂತರ ಲಿಂಗ ಶರೀರದ ಸಲುವಾಗಿ ಒಂದು ಕಡೆ ಭೂಮಿಯನ್ನು ಷಟ್ಸಮಾರ್ಜನೆಯಿಂದ ಶುದ್ಧ ಮಾಡಿ ರಂಗವಲ್ಯಾದಿಗಳಿಂದ ಅಲಂಕಾರ ಮಾಡಿ ಅದರ ಮೇಲೆ ಭಸ್ಮದ ಹಾಸಿಗೆಯನ್ನು ಹರಡಿ, ಆ ಹರಡಿದ ಭಸ್ಮದ ಮೇಲೆ ಲಿಂಗ ಶರೀರವನ್ನು ಕೂಡ್ರಿಸಿ, ಭವಿಜನರು (ಅಲಿಂಗಿಗಳು) ನೋಡದಂತೆ ಮರಸು ಮಾಡಿ, ಶಿವೈಕ್ಯವಾಗತಕ್ಕವನ ದೇಹದಲ್ಲಿ ಭಸ್ಮ ಹಾಗೂ ರುದ್ರಾಕ್ಷಿಗಳನ್ನು ಧರಿಸಿ ಬಲಗಿವಿಯಲ್ಲಿ ಪ್ರಣವ ಸಹಿತ ಪಂಚಾಕ್ಷರೀ ಮಹಾ ಮಂತ್ರವನ್ನು ಮೂವತ್ತಾರುನಾರೆ ಜಪಿಸಬೇಕು. ಆ ಬಳಿಕ ಅವನಿಂದ ದಾನಧರ್ಮಾದಿಗಳನ್ನು ಶಕ್ತ್ಯಾನುಸಾರ ಮಾಡಿಸಬೇಕು. ತದನಂತರ ಭಕ್ತ ಮಹೇಶ್ವರರೆಲ್ಲರೂ ಕೂಡಿಕೊಂಡು ಶಿವ ಸಂಬಂಧವಾದ ಅನೇಕ ವಿಷಯಗಳೊಂದಿಗೆ ಪದ-ಪದ್ಯಗಳನ್ನೂ ಶ್ರೀರುದ್ರವನ್ನೂ ಮತ್ತು ಶ್ವೇತಾಶ್ವಪರ, ಅಥವಣಿರ, ಅಥರ್ವಶಾಖಾ ಕೈವಲ್ಯವೆಂಬ ಪಂಚರುದ್ರಗಳನ್ನು ಉಚ್ಚ ಸ್ವರದಿಂದ ಘೋಷಣೆ ಮಾಡುತ್ತ ಕೂಡ್ರುವದು. ಇದೇ ವಿಭೂತಿ ವೀಳ್ಯದ ಸಂಸ್ಕಾರ ಕ್ರಮವು.

# ಶವ-ಸಂಸ್ಕಾರ-ವಿಧಾನ

ವಿಭೂತಿ ವೀಳ್ಯದ ಕ್ರಮವು ಮುಗಿದ ನಂತರ ಶಿವೈಕ್ಯವಾದುದನ್ನು (ಮರಣ ಹೊಂದಿದ್ದನ್ನು) ತಿಳಿದುಕೊಂಡು ಆ ಲಿಂಗದೇಹಿಯನ್ನು (ಶವವನ್ನು) ಸ್ನಾನ ಮಾಡಿಸುವದಕ್ಕಾಗಿ ಸಂಕಲ್ಪವನ್ನು ಮಾಡಿ ದೇಶಕಾಲಾದಿಗಳನ್ನು ಹೇಳಿ—

"ಅಸ್ಯಾಂ ಗುಣವಿಶೇಷಣ ವಿಶಿಷ್ಟಾಯಾಂ ಅಸ್ಯಾಂ ಶುಭ ತಿಥೌ ಲಿಂಗಸ್ಯ ಪಿತುಗೋತ್ರಸ್ಯ ‡ ಶರ್ಮಣಃ ಲಿಂಗ ಪುರಸ್ಸರಂ ಲಿಂಗರೂಪ ಶರೀರಂ ಸಹಸ್ರ ಶೀರ್ಷಾಃನಮಸ್ತೇ ರುದ್ರಮನ್ಯವ, ಪಂಚಬ್ರಹ್ಮ, ಮಂತ್ರೈಸ್ಸಹ ಸ್ನಾಪಯಿಷ್ಯೇ" ಎಂದು ಸಂಕಲ್ಪ ಮಾಡಬೇಕು. ಆ ಮೇಲೆ—

"ಓಂ ಸಹಸ್ರ ಶೀರ್ಷಾಃ ..... .... ವೃಣಿ ಮಹೇ" "ಹಾಗೂ ಓಂ ನಮಸ್ತೇ ರುದ್ರಮನ್ಯವ ಉತೋತ ಇಷವೇನಮಃ .......... ಓಂ ಜಂ ಭೇದಧಾಮಿ" ಮತ್ತು "ಓಂ ಸದ್ಯೋಜಾತಂ ಪ್ರಪದ್ಯಾಮಿ..... ....ಬ್ರಹ್ಮಾಶಿವೋಮೇ ಅಸ್ತು ಸಧಾ ಶಿವೋಂ"

ಎಂಬ ಮಂತ್ರಗಳಿಂದ ( ಈ ಮಂತ್ರ ಹಿಂದೆ ಬರೆಯಲಾಗಿದೆ. ನೋಡಿಕೊಳ್ಳಬೇಕು.) ಆ ಲಿಂಗರೂಪ ಶರೀರಗ್ಗ ಝಳಕ ಮಾಡಿಸಿ, ಶುಭ್ರ (ಬಿಳಿ) ವಸ್ತ್ರಗಳನ್ನು ತೊಡಿಸಿ ದೇಹಕ್ಕೆ ಭಸ್ಮವನ್ನು ಸವರಿ ಜಲಮಿಶ್ರಿತ ಭಸ್ಮದಿಂದ ಆಯಾಯ ಸ್ಥಾನಗಳಲ್ಲಿ ತ್ರಿಪುಂಡಧಾರಣವನ್ನು ಮಾಡಿ ರುದ್ರಾಕ್ಷಿಗಳನ್ನು ಧರಿಸಬೇಕು. ತದನಂತರ ಗೋಡೆಯ ಹತ್ತರ ಶುದ್ಧ ಮಾಡಿದ ಸ್ಥಳದಲ್ಲಿ ಗಾಯತ್ರಿ ಮಂತ್ರದಿಂದ ಶುದ್ಧೋದಕವನ್ನು ಸಿಂಪಡಿಸಿ, ದೊಡ್ಡದಾದ ಚೌಕಿ ಅಥವಾ ಮಂಚವನ್ನು ಇಟ್ಟು ಅದರ ಮೇಲೆ ಭಸ್ಮವನ್ನು ಹರಡಿ ಆ ಲಿಂಗ ಶರೀರವನ್ನು ಕೂಡ್ರಿಸಿ ಗಂಧ, ಅಕ್ಷತೆ, ಪುಷ್ಪ, ಧೂಪ, ದೀಪಾದಿಗಳಿಂದ ಪೂಜೆ ಮಾಡಿ ಕೆಳಗಿನ ಮಂಗಳಾರತಿ ಹೇಳಿ ಪುಷ್ಪಾಂಜಲಿ ಮಾಡಬೇಕು. ಆ ಬಳಿಕ ಸಮಾಧಿ ಹಾಗೂ ವಿಮಾನ ತಯಾರಾಗುವ ವರೆಗೆ ಶಿವಕಥಾಶ್ರವಣ, ಶಿವಶಾಸ್ತ್ರ ಶಿವಪೂಜಾ ಮೊದಲಾದವುಗಳನ್ನು ಹೇಳಿಸುತ್ತ ಕೇಳುತ್ತ ಕಾಲಕಳೆಯಬೇಕು.

## ಶವಕ್ಕೆ ಮಾಡಬೇಕಾದ ಮಂಗಳಾರತಿ ಪದ್ಯ

ಜಯಮಂಗಳಂ ನಿತ್ಯ ಶುಭಮಂಗಳಂ । ಜಯ ಜಯತು ಶಿವಲಿಂಗ ವರ ಮೂರ್ತಿಗೆ ॥ ಪಲ್ಲ ॥ ನರಜನ್ಮದಲಿ ಪುಟ್ಟಿ ಗುರುದೀಕ್ಷೆಯಂ ಪಡೆದು ಹರಿದು

---

‡ ಲಿಂಗೈಕ್ಯರಾದವರು ಸ್ತ್ರೀಯಿದ್ದರೆ "ಲಿಂಗಸ್ಯ ಮಾತುರ್ಗೋತ್ರಾಯಾಃ ದೇವ್ಯಾಃ" ಎಂದು ಹೇಳಿ ಸಂಕಲ್ಪ ಮಾಡಬೇಕು.

ಭವಬಳ್ಳಿಯನು ಕಿತ್ತ್ಯಾಡ್ಯಾಡುತೆ । ಶರಣಗಣ ಸಾಕ್ಷಿ ಯುಂತಾಗಿ ಮಂತ್ರದರು ವಿಂದೆ ಹರ ಲೋಕೈಕದಿ ಪರಮನೊಳು ಬೆರೆದಗೆ ॥ ೧ ॥ ಹಿಂದೆ ಹರಿದು ಮುಂದೆ ಮುರಿದು ನಡುವಿರುವ ಗೊಂದಣವ ಕಡಿದು ನಸ್ಸ್ಯಯಗಳಾ। ಅಂದವನು ತಿಳಿದು ಶಿವ ಶಿವ ಎನುತ ಮಂದರಾಗಿರಿಗೈದಿ ಕಂದುಗೊರಳಿನೋಳ್ ಬೆರೆದಗೇ ॥ ೨ ॥ ಅನುಭವದ ಹಾದಿಯಂ ತಿಳಿದು ಮಹಘನವಾದ ಅನುಭವದ ರಚನೆಯಿಂ ಚರಿಸುತ್ತಲಿ । ಮನವು ಬ್ರಹ್ಮದಿ ನಿಂದು ಸತ್ಯದಿ ತನು ಸಹಾ ಶಿವಲಿಂಗಮೂರ್ತಿಯಾದವರಿಗೆ ॥ ೩ ॥ ಜಯಮಂಗಳಂ ನಿತ್ಯ ಶುಭಮಂಗಳಂ ॥

# ವಿಮಾನ ಕಟ್ಟುವ ಕ್ರಮ

ಈ ಮೊದಲು ಪೂಜಿಸಿದ ಜಂಗಮ ಮೂರ್ತಿಯ ಪಾದದಳತೆಯನ್ನು ತೆಗೆದಿಟ್ಟುಕೊಂಡಿದ್ದ ಅಳತೆಯನ್ನು ತೆಗೆದುಕೊಂಡು ವಿಮಾನವು ೫ ಪಾದದಳತೆ ಮೊದಲು ಚೌಕಾಗಬೇಕು. ಇದರ ಒಂದು ಮೂಲಿಗೆ ನಾಲ್ಕರಂತೆ ನಾಲ್ಕು ಮೂಲಿಗೆ ೧೬ ಕಲಶ. ಅದರ ಮೇಲೆ ನಾಲ್ಕೂವರೀ ಪಾದ, ಮೂಲೆಗೆ ೩ ರಂತೆ ೧೨ ಕಲಶ ಅದರ ಮೇಲೆ ೩॥ ಪ ದ. ನಾಲ್ಕು ಮೂಲೆಗೆ ಒಟ್ಟು ೧೦ ಕಲಶ ಮತ್ತೆ ಅದರ ಮೇಲೆ ೩ ಪಾದ ನಾಲ್ಕು ಮೂಲಿಗೆ ಕೂಡಿಕೊಂಡು ಒಟ್ಟು ೬ ಕಲಶ, ಅದರ ಮೇಲೆ ೨ ಪಾದ, ೨ ಕಲಶ, ಅದರ ಮೇಲೆ ಒಂದು ಪಾದ ಒಂದು ಕಲಶ ದೊಡ್ಡದು. ಈ ಅಳತೆ ಪ್ರಮಾಣದಂತೆ ವಿಮಾನವನ್ನು ಕಟ್ಟಿ ತಯಾರ ಮಾಡಬೇಕು. ಒಂದು ವೇಳೆ ಹೀಗೆ ಸಾಧ್ಯವಾಗದ ಪಕ್ಷದಲ್ಲಿ ನಾಲ್ಕು ದಿಕ್ಕಿಗೆ ನಾಲ್ಕು ಕಂಬ, ತಳರು, ತೋರಣ, ಚಿತ್ರ ಬಣ್ಣದ ಪಟ ಮೊದಲಾದವುಗಳಿಂದ ಅಲಂಕರಿಸಿ ವಿಮಾನವನ್ನು ಕಟ್ಟಿ ತಯಾರ ಮಾಡಬೇಕು.

# ಸಮಾಧಿಯನ್ನು ಸಿದ್ಧಗೊಳಿಸುವ ಕ್ರಮ

ಸಮಾಧಿಯನ್ನು ಕಂಡ ಕಂಡಲ್ಲಿ ಮಾಡದೆ,ಶಿವಾಲಯ (ದೇವರ ಗುಡಿಯ) ಸಮೀಪದಲ್ಲಾಗಲೀ, ಅಥವಾ ಶಿವಸಂಬಂಧವಾದ ಮಠಸ್ಥಲ, ಇಲ್ಲವೇ ತೋಪು-ತೀರ್ಥ ಸ್ಥಾನ, ಹೊಳೆದಂಡೆ, ತೋಟ ಇತ್ಯಾದಿಗಳಲ್ಲಿ ಒಂದು ಶುಭ ಸ್ಥಾನವನ್ನು-ಗೊತ್ತುಪಡಿಸಿ, ಆ ಸ್ಥಲವನ್ನು ಗೋಮಯ (ಸಗಣಿ)ಯಿಂದ ಸಾರಣೆಯನ್ನು ಮಾಡಬೇಕು. ಆ ಬಳಿಕ—

"ಓಂ ಹ್ಲಾಂ, ಪೃಥಿವ್ಯೈ ನಮಃ" ಎಂಬ ಮಂತ್ರದಿಂದ ನೀರು, ಗಂಧ, ಅಕ್ಷತೆ, ಹಾಗೂ ಪತ್ರಿ-ಪುಷ್ಪ ಧೂಪ ಮೊದಲಾವುಗಳಿಂದ ಆ ಭೂಮಿಯನ್ನು ಪೂಜಿಸಬೇಕು. ತದ ನಂತರ—

ಸುತ್ತಾಗಿ ೫ ಪಾದ ಚೌರಸ ಅಳತೆ ೯ ಪಾದ ಗುಂಭ (ತಗ್ಗು) ಆಗುವಂತೆ ಈ ಪ್ರಮಾಣಕ್ಕನುಸಾರವಾಗಿ ಅಗಿಯಬೇಕು. ಆ ಬಳಿಕ ಸೋಪಾನವನ್ನು ಉತ್ತರ ದಿಕ್ಕಿನ ಮೇಲ್ಭಾಗದಲ್ಲಿ ಉದ್ದ-ಅಗಲ-ಎತ್ತರ ಒಂದು ಪಾದದಳತೆಯ ಮೊದಲನೆಯ ಸೋಪಾನವನ್ನು (ಪಾವಟಣಗಿಯನ್ನು) ಮಾಡಬೇಕು. ಇದರಂತೆ ಉದ್ದ, ಅಗಲ, ಎತ್ತರ ೨ ಪಾದದಳತೆಯ ೨ ನೆಯ ಸೋಪಾನವನ್ನೂ ಮತ್ತು ಉದ್ದ-ಅಗಲ-ಎತ್ತರ ೩ ಪಾದದಳತೆಯ ೩ ನೆಯ ಸೋಪಾನವನ್ನೂ ತಯಾರ ಮಾಡಬೇಕು. ಇನ್ನು ಸಮಾಧಿಯ ಮಧ್ಯದಲ್ಲಿ ಮೂರು ಪಾದದಳತೆಯ ಅಗಲ ಮತ್ತು ಉದ್ದ ೩ ಪಾದ, ಎತ್ತರ ಒಂದು ಪಾದ ಈ ಪ್ರಕಾರದಳತೆಯ ವೇದಿಕೆ (ಕಟ್ಟೆ)ಯನ್ನು ಮಾಡಿ ಆ ವೇದಿಕೆಗೆ ದಕ್ಷಿಣವಾಗಿ ಪೂರ್ವ-ಪಶ್ಚಿಮ ೨ ಪಾದದ ಳತೆಯನ್ನು ಬಿಟ್ಟು, ದಕ್ಷಿಣ ದಿಗ್ಭಾಗದ ಗೋಡೆಯ ಕೆಳಗೆ ಉದ್ದ-ಅಗಲ-ಎತ್ತರ ೩ ಪಾದದಳತೆಯ ತ್ರಿಕೋಣಾಕೃತಿಯ ಗೂಡನ್ನು ಮಾಡಬೇಕು.

ಹೀಗೆ ವಿವರಿಸಿದ ಪ್ರಮಾಣದಂತೆ ಸಮಾಧಿಯು ತಯಾರಾದಮೇಲೆ ಅದನ್ನು ಪೂರಾ ಗೋಮಯದಿಂದ ಸಾರಿಸಿ, ಸುಣ್ಣ ಹಾಗೂ ಕೆಮ್ಮಣ್ಣುಗ ಳಿಂದ ಚಂದ ಕಾಣುವಂತೆ ಬಳಿದು, ಬಾಳೇಕಂಬ, ಮಾವಿನ ತೋರಣ, ಕಬ್ಬು ಗಳಿಂದ ಅಲಂಕಾರ ಮಾಡಿದ ಹಂದರವನ್ನು ಹಾಕಿ ಆ ತ್ರಿಕೋಣಾಕೃತಿಯ ಗೂಡನ್ನು ಗಾಯತ್ರೀ ಮಂತ್ರವನ್ನುಚ್ಚರಿಸುತ್ತ ಜಲವನ್ನು ಸಿಂಪಡಿಸಬೇಕು. ತದನಂತರ—

"ಯಾತೇ ರುದ್ರ ಶಿವಾತನೂರಘೋರಾ ಪಾಪಕಾಶಿನೀ ।
ತಯಾಸ್ತನುವಾಶಂತ ಮಾಯಾ ಗಿರಿಶಂತಾಭಿಚಾಕಶೀಹಿ ॥"

ಎಂಬ ಮಂತ್ರವನ್ನು ಪಠಿಸುತ್ತ ರಂಗವಲ್ಲಿಯನ್ನು ಹಾಕಿ, ದೀಪಗಳನ್ನು ಹಚ್ಚಿ ಆ ತ್ರಿಕೋಣಾಕೃತಿಯ ಗೂಡಿನಲ್ಲಿ ಭಸ್ಮವನ್ನು ಮತ್ತು ಪತ್ರಿ ಪುಷ್ಪಾದಿ ಗಳನ್ನು ಹರಡಬೇಕು.

## ಲಿಂಗಮುದ್ರೆಯ ತಗಡನ್ನು ಸಂಬಂಧಿಸುವ ಕ್ರಮ

ಸಮಾಧಿಯು ಸಂಪೂರ್ಣ ಸಿದ್ಧವಾದ ಮೇಲೆ, ಲಿಂಗಮುದ್ರೆಯನ್ನು ಬರೆದ ಅಥವಾ ಲಿಂಕಾಕೃತಿಯಂತೆ ಕತ್ತರಿಸಿದ ತಗಡನ್ನು, ಪೂರ್ವ ಪಶ್ಚಿಮದ ಗೋಡೆ ಗಳಿಗೆ ಎರಡೆರಡರಂತೆ ಒಟ್ಟು ನಾಲ್ಕು ತ್ರಿಕೋಣಾಕೃತಿಯ ಗೂಡಿನ ಪೂರ್ವ ಪಶ್ಚಿಮ ಗೋಡೆಗಳಲ್ಲಿ ಒಂದೊಂದರಂತೆ ಒಟ್ಟು ಎರಡು, ಎರಡನೆಯ ಹಾಗೂ ಮೂರನೆಯ ಸೋಪಾನಗಳ ಪೂರ್ವ-ಪಶ್ಚಿಮ ಗೋಡೆಗಳಲ್ಲಿ ಎರಡೆರಡರಂತೆ ಒಟ್ಟು ೪, ಮೊದಲನೆಯ ಸೋಪಾನದ ಉತ್ತರ ಗೋಡೆಯೊಳಗೆ ಒಂದು ಹೀಗೆ ಒಟ್ಟು ಹನ್ನೊಂದು ಲಿಂಗಮುದ್ರೆಯ ತಗಡನ್ನು ಸ್ಥಾಪಿಸಬೇಕು.

## ಬೀಜಾಕ್ಷರಯುಕ್ತ ತಗಡುಗಳನ್ನು ಸಂಬಂಧಿಸುವ ಕ್ರಮ

ಸಮಾಧಿಯ ಪೂರ್ವ ಕಡೆಯ ಗೋಡೆಯೊಳಗೆ ಅ. ಬ. ಸವ ಈ ನಾಲ್ಕು ಅಕ್ಷರಗಳನ್ನು ತಗಡಿನಲ್ಲಿ ಬರೆದು ಸ್ಥಾಪನೆ ಮಾಡಬೇಕು. ಇನ್ನು ಪಶ್ಚಿಮ ಕಡೆಯ ಗೋಡೆಯೊಳಗೆ ಅ. ಆ. ಉ. ಮ. ಎಂಬ ನಾಲ್ಕು ಅಕ್ಷರಗಳನ್ನು ಬರೆದ ತಗಡನ್ನು ಇಡಬೇಕು. ತದನಂತರ ಉತ್ತರ ಗೋಡೆಯಲ್ಲಿ "ಮ. ಓಂ ನಮಃ ಶಿವಾಯ" ಎಂಬ ಈ ಏಳು ಅಕ್ಷರಗಳನ್ನು ಬರೆದ ತಗಡನ್ನು ಇಡಬೇಕು. ದಕ್ಷಿಣ ಕಡೆಯ ತ್ರಿಕೋಣೆಯಲ್ಲಿ ಮೇಲಿನ ಭಾಗದಲ್ಲಿ "ಓಂ ಹ್ರಾಂ ಹ್ರೀಂ ಹ್ರುಂ ಹ್ರೈಂ ಹ್ರೋಂ ಹ್ರೌಂ ಹ್ರಃ" ಎಂಬ ಎಂಟು ಅಕ್ಷರಗಳನ್ನು ಬರೆದ ತಗಡನ್ನಿಡಬೇಕು. ಆಕಾಶ ತತ್ವವುಳ್ಳ ಹಕಾರ ಒಂದನ್ನು ಬರೆದ ತಗಡನ್ನು ತ್ರಿಕೋಣೆಯ ಮೇನ ಭಾಗದಲ್ಲಿಡಬೇಕು.

ಹಂ, ಓಂ, ಕ್ಷಂ ಎಂಬ ಮೂರಕ್ಷರಗಳನ್ನು ಬರೆದ ತಗಡೊಂದನ್ನು, ಹಾಗೂ ಒಂಭತ್ತು "ಳ"ಕಾರಗಳನ್ನು ಮೂರು–ಮೂರರಂತೆ ಮೂರು ಪಂಕ್ತಿಗಳನ್ನಾಗಿ ಬರೆದ ತಗಡನ್ನೂ ತ್ರಿಕೋಣೆಯ ಬೆನ್ನಿನಲ್ಲಿಯೂ; ಪೃಥ್ವೀ ತತ್ವ ಬೀಜವಾದ ಲ ಕಾರದ ಒಂದು ತಗಡನ್ನು ವೇದಿಕೆಯ ಮೊದಲಿನ ಭಾಗದಲ್ಲಿಯೂ; ಮೂರು ಮೂರರಂತೆ ಮೂರು ಸಾಲಾದ ಒಂಭತ್ತು "ಹ"ಕಾರಗಳುಳ್ಳ ಒಂದು ತಗಡನ್ನು ವೇದಿಕೆಯ ಮೇಲ್ಭಾಗದಲ್ಲಿಯೂ ಪ್ರಸ್ಥಾಪಿಸಬೇಕು. ಇನ್ನು—

**೧ ನೇ ಸೋಪಾನದಲ್ಲಿ:**— ಅ ಕಾರ ೩ ರನ್ನು ಬರೆದ ತಗಡನ್ನು ಮೊದಲನೆಯ ಸೋಪಾನದಲ್ಲಿಡಬೇಕು.

**೨ ನೇ ಸೋಪಾನದಲ್ಲಿ:**—ಮೂರು-ಮೂರರಂತೆ ಎರಡು ಸಾಲಾಗಿಬರೆದ ೬ ಮ ಕಾರಗಳ ಒಂದು ತಗಡನ್ನೂ,

**೩ ನೇ ಸೋಪಾನದಲ್ಲಿ:**– ಮೂರು–ಮೂರರಂತೆ ೩ ಪಂಕ್ತಿಯಾಗಿ ಬರೆದ ೯ ಮ ಕಾರಗಳುಳ್ಳ ತಗಡೊಂದನ್ನು ಇಡಬೇಕು. ಈ ಪ್ರಕಾರವಾಗಿ ಆಯಾ ಅಕ್ಷರಗಳಿಂದ ಕೂಡಿದ ತಗಡನ್ನು ಆಯಾಯ ದಿಕ್ಕು ವ ಸ್ಥಾನಗಳಲ್ಲಿ ಸ್ಥಾಪಿಸಬೇಕು.

ಈ ಪ್ರಕಾರ ಹೇಳಿದ ಪದ್ಧತಿಯಂತೆ ವಿಮಾನವೂ ಹಾಗೂ ಸಮಾಧಿಯೂ ತಯಾರಾದ ನಂತರ ಆ ಲಿಂಗ ಶರೀರಕ್ಕೆ ಪುನಃ ಪುಷ್ಪಾಂಜಲಿಯನ್ನು ಕೆಳಗೆ ಬರೆದ ವಾರ್ಧಿಕದಿಂದ ಮಾಡಬೇಕು.

## ಪುಷ್ಪಾಂಜಲಿ ಮಂತ್ರ

ಗುರುದೀಕ್ಷೆಯಿಂ ಪಡೆದು ಶರೀರ ಧರ್ಮವ ನೀಗಿ ಗುರುಲಿಂಗ ಜಂಗಮದ ಗುಪ್ತ ಭಕ್ತಿಯ ಮಾಡಿ ವರ ತೀರ್ಥ ಪ್ರಸಾದವಂ ಪಡೆದು ಸೇವಿಸುತ್ತಂ | ಶಿರದೊಳಿಹ ಕಳೆ ಇಷ್ಟವೇ ಪರಬ್ರಹ್ಮವೆಂಬರು ಹಿಡಿದು ಸತ್ಕ್ರಿಯಗಳಿಂದಾಚರಿಸುತ್ತ

ಧರೆಯ ಭೋಗವನಳಿದು ಹರಲೋಕಕ್ಕೈದಿ ಮರ್ತ್ಯಕೆ ತಿರುಗದಿರು ಎಂದು ರಜತ ಪುಷ್ಪವನೀಯ್ವೆನು ||

ಶಿವ ಜನ್ಮದಲಿ ಪುಟ್ಟಿ ಶಿವದೀಕ್ಷೆಯಂ ಪಡೆದು ಶಿವ ಶೇಷವನೇ ಸವಿದು ಭವವ ಪರಿಹರಿಸುತ್ತ ಶಿವಮಂತ್ರದರುಹಿಂದೆ ಸಂಸಾರನಿಃಪ್ರಿಯನಾಗಿ | ತಪ ಹರುಷದಿಂದ ಷಟ್‌ಸ್ಥಲವನಂನಗೊಂಡುತ್ತಂ|ಸವಿಕಲ್ಪತೆ ತತ್ವಾದಾದಿಇತೆ ಎಂದು ನವಸ್ಥಾನದೊಳಿಹ ನವವರ್ನವಸ್ತುವಿನೊನಗೆ ಶಿವ ಶಿವಾ ಶಿವ ಎನುತ ಶಿವಲೋಕಕ್ಕೈದಿ ಭುವನವನು ಬಯಸಬೇಡೆಂದು ಸುವರ್ಣ ಪುಷ್ಪವನೀಯ್ವೆನು || ೨ ||

ತನುಗುರುವು ಆಯತ ದೀಕ್ಷೆಯಂ ಶುದ್ಧ ತಾನಾಗಿ ಪ್ರಾಣಚರ ಸನ್ನಿಹಿತ ದೀಕ್ಷದಿಂ ಪ್ರಸಿದ್ಧನು ತಾನಾಗಿ ಸನ್ಮತಪದೇಶದನುಗ್ರಹವನು ಪಡೆದು ಮತ್ತಂ| ಮದ, ಬುದ್ಧಿ, ಚಿತ್ತ, ಅಹಂಕಾರವನುಳಿದು ಇನಿತು ವಂಚನೆಯಿಲ್ಲದೆ ಗಣಸಾಕ್ಷಿ ಮುಂತಾಗಿ ಘನಲಿಂಗ ತಾನಾಗಿ ಗಗನಕ್ಕೈದುತ್ತ ಬಳಿಕ ಮನುಜ ಜನ್ಮಕ್ಕಿಳಿಯದಿರು ಎಂದು ಸರ್ವ ಪುಷ್ಪವನೀಯ್ವೆನು || ೩ ||

ಹೀಗೆ ಪುಷ್ಪಾಂಜಲಿ ಮಾಡಿದ ತರುವಾಯ ಆ ಲಿಂಗ ಶರೀರವನ್ನು ಸಾವಧಾನವಾಗಿ ವಿಮಾನ ಬಳಿಯಲ್ಲಿ ತಂದು, ಅದಕ್ಕೆ ಗುರು ಪಾದೋದಕವನ್ನು ಸಿಂಪಡಿಸಿ ಮಧ್ಯದಲ್ಲಿ ಆ ಲಿಂಗ ಶರೀರವನ್ನು ಚನ್ನಾಗಿ ಕೂಡ್ರಿಸಿ—

"ಮೂರ್ಧಾನಂ ಪತ್ಯುರಾರೋಹ ಪ್ರಾಜಯಾತ ವಿರಾಡ್ಭವ'

ಎಂಬ ಮಂತ್ರದಿಂದ ವಿಮಾನವನ್ನು ಮೇಲಕ್ಕೆ ಎತ್ತಿ ಮೆರವಣಿಗೆಯನ್ನು ಮಾಡುತ್ತ ಐಚ್ಛಿಕ ಮುಖ್ಯ ಬೀದಿಗಳಿಂದ ಸಮಾಧಿಯ ಮಾರ್ಗವನ್ನು ಹಿಡಿದು ಸಮಾಧಿಯ ಸ್ಥಾನಕ್ಕೆ ಬರಬೇಕು. ಆದರೆ ೧೬ ಪಾದದಳತೆಯಷ್ಟು ಸಮಾಧಿಯು ದೂರವಿರುವಾಗಲೇ ಸಮಾಧಿಯ ಹತ್ತರ ಇಬ್ಬರು ಮಾಹೇಶ್ವರರು ನಿಂತುಕೊಂಡು ವಿಮಾನ ಹೊತ್ತವರ ಸಂಗಡ ಕೆಳಗಿನ ಪ್ರಶ್ನೋತ್ತರಗಳಿಂದ ಇದಿರುಗೊಳ್ಳಬೇಕು.

ಸಮಾಧಿಯ ಹತ್ತರ ಇದ್ದ ಉಭಯ ಮಾಹೇಶ್ವರರು—"ಅಯ್ಯಾ ಬಂದವಯ್ಯಾ" ಎಂದು ವಿಮಾನ ಹೊತ್ತವರಿಗೆ ಪ್ರಶ್ನೆ ಮಾಡಬೇಕು. ತದನಂತರ ಅದಕ್ಕೆ ಉತ್ತರವಾಗಿ ವಿಮಾನ ಹೊತ್ತವರು—"ಯಾವಲೋಕದಿಂದ ಬಂದಿರಯ್ಯಾ"ಎಂದು ಕೇಳುವದು.

ಮಾಹೇಶ್ವರರು– "ಮಹಾಲೋಕ ಕೈಲಾಸದಿಂದ ಬಂದೆವಯ್ಯಾ" ಎಂದು ಅನ್ನುವದು.

ವಿಮಾನ ಹೊತ್ತವರು– "ಏನು ಕಾರಣ ಬಂದಿರಯ್ಯಾ"ಎಂದುಕೇಳುವದು.

ಮಾಹೇಶ್ವರರು– ''ಇಂತಿಪ್ಪ ಲಿಂಗ ನಿಷ್ಠಾಪರನಪ್ಪ ಶರಣನು ಶಿವೈಕ್ಯನಾದನೆಂಬ ಸುದ್ದಿಯಂ ಕೇಳಿ ಈ ಬಟ್ಟೆ (ಮಾರ್ಗವ)ಹಿಡಿದು ಬಂದೆವಯ್ಯಾ"ಎಂದು ಹೇಳುವದು.

ವಿಮಾನ ಹೊತ್ತವರು– ''ಬಂದರೆ ಒಳಿತಾಯಿತು ಈ ಲಿಂಗೈಕ್ಯನಾದ ಶರಣನಂ ಶಿವನೆಡೆಗೆ ಕರೆದೊಯ್ಯಿರಯ್ಯಾ''ಎಂದು ಹೇಳುವದು.

ಮಾಹೇಶ್ವರರು– ''ಕರೆದೊಯ್ಯುವೆವು–ಒಯ್ಯುವೆವು; ಆದರೆ ಈ ಮಾತು ಕಠಿಣವಯ್ಯಾ''ಎಂದು ಹೇಳಬೇಕು.

ವಿಮಾನ ಹೊತ್ತವರು– ''ಅದೇನು ಕಾರಣವಯ್ಯಾ'' ಎಂದು ಕೇಳುವದು.

ಮಾಹೇಶ್ವರರು– ''ಇಲ್ಲಿಯವರು ಹೊಣೆ ಕೊಟ್ಟರೆ ಒಯ್ಯುವೆವಯ್ಯಾ'' ಎಂದು ಹೇಳುವದು.

ವಿಮಾನ ಹೊತ್ತವರು– ''ಬಿತ್ತಿದ ಬೆಳೆಯನೇ ತೋರಿ ಮುಕ್ತಿ ಕಳೆಯನು ಕೊಟ್ಟು ಸರ್ವ ಜೀವ ದಯಾಪರನಾಗಿ ಕ್ಷಮೆ, ದಮೆ, ಸ್ಮರಣೆ, ಬಂಜೆಗೆ ಮಗನಾದಂತೆ, ಕುರುಡನಿಗೆ ಕಣ್ಣು ಬಂದಂತೆ,ಭಕ್ತನಿದ್ದೆಡೆಗೆ ಜಂಗಮ ನಡೆದುಬಂದಂತೆ, ಸಂಗಮೇಶ್ವರನ ಶರಣದ ಪಾದವ ಹೊಂದಿದವರಿಗೆ ವಿಭೂತಿ ರುದ್ರಾಕ್ಷಿಗಳ ಹೊಣೆಯಿಲ್ಲದೆ ಇನ್ನೊಬ್ಬರ ಹೊಣೆಯುಂಟೇನಯ್ಯಾ"ಎಂದು ಕೇಳುವದು.

ಮಾಹೇಶ್ವರರು–"ಒಳ್ಳೇದು ಒಯ್ಯುವೆವು. ಬನ್ನಿರಯ್ಯಾ"ಎಂದು ಹೇಳಬೇಕು

ವಿಮಾನ ಹೊತ್ತವರು– "ಉಘೇ ಉಘೇ ಚಾಂಗು ಭಲರೇ"ಎಂದು ಅನ್ನುತ್ತ ಮುಂದಕ್ಕೆ ಹೋಗಿ ವಿಮಾನವನ್ನು ಸಮಾಧಿಯ ಮುಂದೆ ಇಳಿಸಬೇಕು.

ಇಷ್ಟಾದ ಬಳಿಕ ಲಿಂಗ ಶರೀರವನ್ನು ತ್ರಿಕೋಣಾಕೃತಿಯ ಕೋಣೆಯಲ್ಲಿ ಉತ್ತರ ಮುಖವಾಗಿ ಕುಳ್ಳಿರಿಸಬೇಕು. ಆ ಮೇಲೆ ಲಿಂಗ ದೇಹಕ್ಕೆ ತಗಡು ಬರೆದು ಸಂಬಂಧ ಮಾಡಬೇಕು.

## ಲಿಂಗದೇಹದಲ್ಲಿ ತಾಮ್ರದ ತಗಡುಗಳನ್ನು ಧರಿಸುವದು

''ಓಂ"ಕಾರವನ್ನು ಬರೆದ ತಗಡನ್ನು ನಾಲಿಗೆ(ಜಿಹ್ವೆ)ಯಲ್ಲಿಡಬೇಕು. ಇದರಂತೆ ''ನ''ಕಾರ ಅಕ್ಷರವನ್ನು ಬರೆದ ತಗಡನ್ನು ಬಲ ಭುಜದಲ್ಲಿ, ''ಮ''ಕಾರ ಅಕ್ಷರವನ್ನು ಬರೆದ ತಗಡನ್ನು ಎಡ ಭುಜದಲ್ಲಿ, ''ಶಿ''ಕಾರವನ್ನು ಬರೆದ ತಗಡನ್ನು ನಾಭಿಯಲ್ಲಿ (ಹೊಕ್ಕಳದಲ್ಲಿ), ''ವ''ಕಾರ ಅಕ್ಷರವನ್ನು ಬರೆದ ತಗಡನ್ನು ಬಲ ಪಾದದಲ್ಲಿ, ''ಯ''ಕಾರ ಅಕ್ಷರವನ್ನು ಬರೆದ ತಗಡನ್ನು ಎಡ ಪಾದದಲ್ಲಿ, ''ಉ ಬ ಸ ವ''ಎಂಬ ಅಕ್ಷರಗಳನ್ನು ಬರೆದ ತಗಡನ್ನು ಎದೆ ಗುಂಡಿಯಲ್ಲಿ, "ಮ ಅ ಉ ಮ''ಎಂಬ ನಾಲ್ಕು ಅಕ್ಷರಗಳನ್ನು ಬರೆದ ತಗಡನ್ನು ಬೆನ್ನಿನಲ್ಲಿ; ''ಅ ಓಂ ನಮಃ ಶಿವಾಯ ಎಂಬ ೭ ಅಕ್ಷರಗಳನ್ನು ಬರೆದ ತಗಡನ್ನು ಎಡಗಡೆಯಲ್ಲಿ, ಓಂ,

ಹ್ರಾಂ, ಹ್ರೀಂ, ಹ್ರುಂ, ಹ್ರೈಂ, ಹ್ರೋಂ, ಹ್ರೌಂ, ಹ್ರಃ ಎಂಬ ಅಕ್ಷರಗಳನ್ನು ಬರೆದ ತಗಡನ್ನು ಬಲಗಡೆಯಲ್ಲಿಯೂ ಧರಿಸಬೇಕು. ಒಂದು ವೇಳೆ ತಾಮ್ರದ ತಗಡು ಸಿಗದಿದ್ದ ಪಕ್ಷದಲ್ಲಿ ತಾಳಪತ್ರದಲ್ಲಿ ಬರೆದು ಧರಿಸಿದರೂ ಬರುವದು. ಇದಕ್ಕೆ ಯಾವ ಅಭ್ಯಂತರವಿಲ್ಲ. ಆ ಮೇಲೆ ಮೊಟ್ಟ ಮೊದಲೇ ಹೊಲಿಸಿ ತಯಾರ ಪಡಿಸಿದ ಕಂಚುಕ(ಚೀಲ)ವನ್ನು ತೊಡಿಸಿ ಅದರೊಳಗೆ ವಿಭೂತಿ, ಬಿಲ್ವ ಪತ್ರಾದಿಗಳನ್ನು ತುಂಬಿ, (ಹಾಗೂ ಇದರ ಸಂಗಡ ಮಣ್ಣು ಉಸುಕು ಸಹಿತವಾಗಿ ತುಂಬಿ) ಬಳಿಕ ಆ ಲಿಂಗ ಶರೀರವಿರುವ ಚೀಲವನ್ನು ಕೆಳಗಿನ ಪದ್ಯವನ್ನು ಅನ್ನುತ್ತ ಎರಡಾವರ್ತಿ ತೂಗಿ ತ್ರಿಕೋಣೆಯೊಳಗೆ ಇಡಬೇಕು.

## ಲಿಂಗ ಶರೀರವನ್ನು ತೂಗುವ ಪದ್ಯ

ತೂಗುತಿದೆ ನಿಜದುಯ್ಯಾಲೆಯು । ಲಿಂಗಾಂಗಯೋಗ ಸಂಭ್ರಮವ ಬಂದು ಗುರುವೆ ॥ ಪಲ್ಲ ॥ ಅಷ್ಟದಳ ಕಮಲ ಮಧ್ಯ ಈ ಕೀಳು ಸೃಷ್ಟಿಯಡಗುವ ತೆರದೊಳು ಗುರುವೇ, ಮುಟ್ಟಾ ಮುಟ್ಟಂಲಯದೊಳು ಮಾಹೇಶ್ವರನು ಮೆಟ್ಟಿ ಆಡಿದನುಯ್ಯಾಲಿ ಗುರುವೇ ॥ ೧ ॥

ಈ ಪದವನ್ನು ಹೇಳಿದ ತರುವಾಯ ಪುಷ್ಪಾಂಜಲಿಯನ್ನು ಮತ್ತೊಮ್ಮೆ ಮಾಡಿ ಭಕ್ತ ಮಾಹೇಶ್ವರ ಮೊದಲಾದ ಸಮಸ್ತ ಜನಸ್ತೋಮದಿಂದ ಪತ್ರಿ ಪುಷ್ಪಗಳನ್ನು ಹಾಕಿಸಬೇಕು.

## ಪುಷ್ಪಾಂಜಲಿ ಮಾಡುವ ವಾರ್ಧಿಕ ಮಂತ್ರ

ಶಿವಲೋಕದಿಂದಲಾ ಪರಮನಪ್ಪಣೆವಿಡಿದು ಶಿವನ ವಂಶೋದ್ಭವನಾಗಿ ಮೃತ್ಯರ್ಕ್ಕಿಳಿದು॥ ವಿವರಿಸುತತತ್ವವಂ ಪಂಚಾಕ್ಷರಿಯ ಮಹಾ ಷಟ್‌ಸ್ಥಲಂಗಳನು ಮುದದಿಂ ॥ ತವೆ ತಿಳಿದು ಆಚರಿಸಿ ಸಾತ್ವಿಕೋತ್ತಮನೆನಿಸಿ ಶಿವಪುರವ ಪೊಕ್ಕು ಸಮರಸವಾದ ಬಳಿಕ ನೀಂ ಶಿವನ ಬಿಟ್ಟು ಮರ್ತ್ಯರ್ಕ್ಕಿಳಿಯಬೇಡೆಂದು ರಜತ ಪುಷ್ಪವನೀಯ್ವೆನು ॥ ೧ ॥

ರಜತ ಗಿರಿಯೊಳಗಿರ್ಪ ರಜಧರನ ಅಪ್ಪಣೆಯ ನಿಜಶಿರದೋಳ್ ತಾಳ್ದು ನಿತಿವಿಡಿದಾಚರಿಸಿ ಭಜಿಸುತಿಹ ಭಕ್ತರ್ಗೆ ಅಷ್ಟಮಹ ಸಿದ್ಧಿಗಳ ನಿಜ ಮೋಕ್ಷಗಳನು ಕೊಡುತಾ ॥ ತ್ರಿಜಗವಂದಿತನಾಗಿ ತ್ರೈಮಲವ ಧಿಃಕ್ಕರಿಸಿ । ಅಜಹರಿ ಸಹಸ್ರಾಕ್ಷವಂದಿತನ ಪಾದವಂ । ನಿಜವಾಗಿ ಸಾರಿ ಮರ್ತ್ಯರ್ಗವ ಬಯಸಬೇಡೆಂದು ಸುವರ್ಣ ಪುಷ್ಪವನೀಯ್ವೆನು ॥ ೨ ॥

ಪರಶಿವನ ರೂಪದಿಂ ಮರ್ತ್ಯಲೋಕಕ್ಕಿಳಿದು । ಪರಿಪೂರ್ಣ ಬ್ರಹ್ಮಮಯನಾಗಿ ಆಚರಿಸುತಾ । ಪರತತ್ವಗಳ ತಿಳಿದು ಪಾಪಗಳ ಖಂಡಿಸುತ ಶರಣ ಮಾರ್ಗದೊಳು ಕೂಡಿ ॥ ಗುರುಲಿಂಗ ಜಂಗಮದ ಗುಪ್ತ ಭಕ್ತಿಯ ಮಾಡಿ । ಶರೀರ

ಕರ್ಣೇಂದ್ರಿಯಗಳನೆಲ್ಲ ಧಿಃಕ್ಕರಿಸಿ | ನೆರೆ ಪರಮನೋಳ್ ಬೆರೆದು ಮರ್ತ್ಯವ ಬಯಸಬೇಡೆಂದು ಸರ್ವ ಪುಷ್ಪವನೀಯ್ವೆನು ॥ ೩ ॥

ಹೀಗೆ ಪುಷ್ಪಾಂಜಲಿಯನ್ನು ಮಾಡಿದ ತರುವಾಯ ಲಿಂಗೈಕ್ಯನ ಮುಖವನ್ನು ಆಪ್ತೇಷ್ಟರಿಗೆ ತೋರಿಸಿ ಚೀಲವನ್ನು ಮುಚ್ಚಬೇಕು. ಬಳಿಕ ವಿಭೂತಿ ಹಾಗೂ ಮಣ್ಣು ಮಿಶ್ರ ಮಾಡಿದ ಉಂಡೆಯನ್ನು ಲಿಂಗ ಶರೀರಿಯ ಮೇಲೆ ಇಟ್ಟು ಮಣ್ಣಿನ ಹೆಂಟೆ ಅಥಾವಾ ಹೆಂಡೆಗಳಿಂದ ಆ ತ್ರಿಕೋಣೆಯನ್ನು ಚನ್ನಾಗಿ ಭದ್ರ ಪೂರ್ವಕ ಮುಚ್ಚಿ ತ್ರಿಕೋಣೆಯ ಬಾಗಿಲಿಗೆ ಒಂದು ಹಲಿಗೆಯನ್ನಾಗಲೀ ಇಲ್ಲವೆ ಕಲ್ಲನ್ನಾಗಲೀ ಹಚ್ಚಿ ಕರ್ತನು ಮೇಲೆ ಬಂದ ತರುವಾಯ ಶಿವ ಶಿವಾ ಎನ್ನುತ್ತ ಸಮಸ್ತರೂ ಐದೈದು ಬೊಗಸೆ ಮಣ್ಣು ಹಾಕಿ, ಇತರೆಯ ಮಣ್ಣಿನಿಂದ ಸಮಾಧಿಯನ್ನು ತುಂಬಿ ಪೂರ್ತಿಗೊಳಿಸಬೇಕು. ಆ ಮೇಲೆ ಸಮಾಧಿಯ ಮೇಲ್ಭಾಗದಲ್ಲಿ ವೃಷಭನೊಡನೆ ಕೂಡಿದ ಲಿಂಗವನ್ನಿಟ್ಟು, ಇನ್ನುಳಿದ ಎಂಟು ದಿಕ್ಕುಗಳಲ್ಲಿ (ಮೂಲೆಗಳಲ್ಲಿ) ವೃಷಭಗಳನ್ನಿಟ್ಟು ಲಿಂಗೈಕ್ಯನ ಪುತ್ರ ಅಥವಾ ಸಹೋದರ ಇಲ್ಲವೇ ಬಂಧುವಾಗಲೀ ಯಾರೊಬ್ಬರಾದರೂ ಸಮಾಧಿಯ ಮೇಲೆ ಜಂಗಮ ಪಾದವನ್ನಿಡಿಸಿ ಅಲ್ಲಿರಿಸಿದ ಲಿಂಗಶಾಂತಿಗಾಗಿ ಪಾದಪೂಜಾ ಮಾಡಿ, ನಂತರ ಸರ್ವರೂ ಪುಷ್ಪಾಂಜಲಿಯನ್ನು ಮಾಡಬೇಕು. ಆ ಬಳಿಕ ಕರ್ತೃವು—

"ಮಮ ಪಿತೃ ಲಿಂಗಸ್ಯ ಪ್ರೀತ್ಯರ್ಥಂ ಕ್ಷೀರೇಣ ತರ್ಪಣಂ ಕರಿಷ್ಯೇ" ಎಂದು ಸಂಕಲ್ಪ ಮಾಡಬೇಕು. ನಂತರ—

"ಆತ್ಮಾತ್ಮಾನಂ ಇಷ್ಟಲಿಂಗಂ ತರ್ಪಯಾಮಿ"

ಎಂದು ಇಷ್ಟಲಿಂಗವನ್ನು ಕುರಿತು ಹಾಲಿನಿಂದ ಅಥವಾ ನೀರಿನಿಂದ ಗೋಮಾತೆಯ ಕಿವಿ ಸ್ವರೂಪವಾದ ಬಲಗೈ ಕಿರಿಬೆರಳಿನಿಂದ ತರ್ಪಣವನ್ನು ಬಿಟ್ಟು ಬಳಿಕ—

"ಅಂತರಾತ್ಮಾನ್ಮಾನಂ ಪ್ರಾಣಲಿಂಗಂ ತರ್ಪಯಾಮಿ"

ಎಂದು ಪ್ರಾಣಲಿಂಗವನ್ನು ಕುರಿತು ತರ್ಪಣವನ್ನು ಬಿಟ್ಟು ತದನಂತರ—

"ಪರಮಾತ್ಮಾತ್ಮಾನಂ ಭಾವಲಿಂಗಂ ತರ್ಪಯಾಮಿ"

ಎಂದು ಭಾವಲಿಂಗವನ್ನು ಕುರಿತು ತರ್ಪಣವನ್ನು ಬಿಟ್ಟು ಅವರಿಗೆ ಶಕ್ತ್ಯಾನುಸಾರವಾಗಿ ದಕ್ಷಿಣೆಯನ್ನು ಸಮರ್ಪಿಸಿದ ಬಳಿಕ ಸರ್ವರೂ ಮನೆಗೆ ಹೋಗಿ ಅಂದೇ ಗುರುಪಾದ ಪೂಜೆಯನ್ನು ಮಾಡಿ ಪಾದೋದಕವನ್ನು ಎಲ್ಲರೂ ಸ್ವೀಕರಿಸಿ ಮೃತರ ಆತ್ಮಕ್ಕೆ ಅರ್ಪಿಸಬೇಕು. ಇದು ಲಿಂಗೈಕ್ಯವಾದ ಮೊದಲನೆಯ ದಿನದ ಕಾರ್ಯವಾಗಿದೆ. ಇದರಂತೆ ೧೦ ದಿನ ಮಾಡಬೇಕು. ಸಾಧ್ಯವಾಗದಿದ್ದರೆ ೧೦ ನೇ ದಿವಸ ಮಾತ್ರ ಹಿಂದಿನ ಸರ್ವ ದಿವಸಗಳನ್ನೊಳಗೊಂಡು ತರ್ಪಣವನ್ನು ಕೊಡಬೇಕು. ತದ ನಂತರ ಕರ್ತನು—

# ೧೧-೧೨ ನೇ ದಿವಸದ ಮಾಡಬೇಕಾದದ ವಿಧಾನ

೧೧ ನೆಯ ದಿವಶ ೫೧ ಜನ ಮಾಹೇಶ್ವರರಿಗೆ ಬಿನ್ನವಿಸಿ, ಪ್ರಾಣಾಯಾಮ ವನ್ನು ಮಾಡಿ ದೇಶ ಕಾಲಾದಿಗಳನ್ನುಚ್ಚರಿಸಿ—

''ಏವಂ ಗುಣ ವಿಶೇಷಣ ವಿಶಿಷ್ಟಾಯಾಂ ಅಸ್ಯಾಂ ಶುಭತಿಥೌ (          ). ಗೋತ್ರೋತ್ಪನ್ನ (          ) ಶರ್ಮಣಃಮಮ ಪಿತೃಲಿಂಗಸ್ಯ ಸಿದ್ಧಿದಿನಾದಾರಭ್ಯ ಏಕಾದಶೇ ಹನಿ ಆಚಾರಾದಿಷ್ಟಲಿಂಗಸ್ಥಲಾಶ್ರಿತೈಕ ಪಂಚಾಶದ್ರುದ್ರ ಗಣಾರಾಧ ನೇನ ನಿರತಿಶಯ ಶಿವಾನಂದ ಸಿದ್ಧರ್ಥಂ ರುದ್ರಗಣಾರಾಧನಂ ಕರಿಷ್ಯೇ''

ಹೀಗೆಂದು ಸಂಕಲ್ಪ ಮಾಡಬೇಕು (ಇಲ್ಲಿ ವಿಶೇಷವೇನಂದರೆ ಮೃತರು ತಾಯಿಯಾದರೆ ''ಮಮಪಿತೃ ಲಿಂಗಸ್ಯ''ಅನ್ನುವ ಸ್ಥಾನದಲ್ಲಿ ''ಮಮ ಮಾತೃ ಲಿಂಗಸ್ಯ"ಎಂದು ಅನ್ನಬೇಕು. ಇದರಂತೆ ಹೆಂಡತಿಯಾಗಿದ್ದರೆ ''ಮಮ ಸ್ತ್ರೀಯಃ ಲಿಂಗಸ್ಯ''ಎಂದೂ; ಸಹೋದರನಾಗಿದ್ದರೆ ''ಮಮ ಭಾತೃ ಲಿಂಗಸ್ಯ'' ಎಂದು ಸಂಕಲ್ಪದಲ್ಲಿ ಕೂಡಿಸಿ ಅನ್ನಬೇಕು.)

ಮೇಲಿನಂತೆ ಸಂಕಲ್ಪಿಸಿದ ನಂತರ ಕಲಶ ಪೂಜೆಯನ್ನು ಮಾಡಿ ರುದ್ರಗಣ ರನ್ನು ಪೂಜಿಸಿ, ಈ ಪ್ರಾರ್ಥನೆಯನ್ನು ಮಾಡಿ, ಮಾಹೇಶ್ವರರ ಪಾದದ ಮೇಲೆ ಗಂಧಾಕ್ಷತೆಗಳಂ ಧರಿಸಿ ನಮಸ್ಕರಿಸಬೇಕು. ತದ ನಂತರ ಭೋಜನ ಮಾಡಿಸಿ, ದಕ್ಷಿಣೆ ವಗೈರೆ ಕೊಟ್ಟು ಕಳಿಸಬೇಕು ಇದರಂತೆ ೧೨ ನೆಯ ದಿವಸ ೩೬ ಜನ ಮಾಹೇಶ್ವರರನ್ನು ತೃಪ್ತಿಪಡಿಸಬೇಕಾಗುವದು, ಮಾಹೇಶ್ವರರ ಸಂಖ್ಯಾ ದೊಡ್ಡ ದಾಗಿ ಕಂಡರೆ ತಮ್ಮತಮ್ಮ ಶಕ್ತ್ಯಾನುಸಾರ ಗಣಾರಾಧನೆ ಮಾಡಬೇಕಾಗುವದು.

# ಮಾಸಿಕಾರಾಧನ ಕಾರ್ಯ-ವಿವರಣೆ

ಮರಣಾ ನಂತರ ಒಂದು ತಿಂಗಳೊಳಗಾಗಲೀ ಇಲ್ಲವೇ ಮರಣ ತಿಥಿಯ ದಿವಸ ಈ ಮಾಸಿಕಾರಾಧನೆಯನ್ನು ಮಾಡಬೇಕಾಗುವದು. ಆ ದಿವಸ ಕರ್ತನು ೧೧೨ ಮಾಹೇಶ್ವರರನ್ನು ಅಥವಾ ತಮಗೆ ಸಾಧ್ಯವಿದ್ದಷ್ಟು ಮಾಹೇಶ್ವರರನ್ನು ಬಿನ್ನವಿಸಿ, ಬರಮಾಡಿಕೊಂಡು ಪಾದಪೂಜೆಯನ್ನು ಮಾಡಿ, ಶಕ್ತ್ಯಾನುಸಾರ ಮೃಷ್ಟಾನ್ನ ಭೋಜನ ಮಾಡಿಸಿ, ಅವರನ್ನು ತೃಪ್ತಪಡಿಸಿ ದಕ್ಷಿಣೆ ತಾಂಬೂಲಾದಿ ಗಳನ್ನು ಕೊಟ್ಟು ಕಳಿಸಬೇಕು. ಈ ಪ್ರಕಾರ ಮಾಸಿಕಾರಾಧನೆಯನ್ನು ಮಾಡಿ, ಮೃತರ ಆತ್ಮಕ್ಕೆ ಶಾಂತಿಯನ್ನು ಕೋರಿ,ಶಾಶ್ವಿತ ಶಿವಯುಜ್ಯ ಸಿಧ್ಧಿಯನ್ನು ಬೇಡಿ ಕೊಳ್ಳಬೇಕು.

# ವಾರ್ಷಿಕಾರಾಧನವು

ಮರಣವಾದ ವರ್ಷ ಮಾಸ ತಿಥಿ ಪ್ರಾರಂಭವಾದ ದಿನದಲ್ಲಿ ಕರ್ತನು ತನ್ನ ಶಕ್ತ್ಯಾನುಸಾರವಾಗಿ ಮಹೇಶ್ವರರನ್ನು ಬರಮಾಡಿಕೊಂಡು ದೇಶಕಾಲಾದಿಗಳನ್ನು ಹೇಳಿ—

"ಏವಂ..........ಅಸ್ಯಾಂ ಶುಭ ತಿಥೌ ಅಸ್ಮತ್ಪಿತೃಃ ಪ್ರತಿ ಸಾಂವತ್ಸರಿಕಾಧನೆ ಅಸ್ಮತ್ಪಿತೃ ಪಿತಾಮಹ ಪ್ರಪಿತಾಮಹಾನುದ್ದಿಶ್ಯ ಶ್ರೀ ಸಾಂಬಶದಾಶಿವ ಪ್ರೀತ್ಯರ್ಥಂ ಶ್ರೀ ಪರಮೇಶ್ವರಾರಾಧನ ವಿಧಾನೇನ ಶಿವಸ್ವರೂಪ ಮಾಹೇಶ್ವರಾರಾಧನಂ ಕರಿಷ್ಯೇ"

ಹೀಗೆಂದು ಸಂಕಲ್ಪವನ್ನು ಮಾಡಿ—

"ಆಯಾಂತು ಮಾಹೇಶ್ವರ ಪೂಜಾರ್ಥಂ | ದುರಿತ ಕ್ಷಯಕಾರಕಾಃ | ಗಂಗೇಚ ಯಮುನೇ ಚೈವಗೋದಾವರೀ ಸರಸ್ವತೀ | ನರ್ಮದಾ ಸಿಂಧು ಕಾವೇರಿ ಜಲೇಸ್ಮಿನ್ ಸನ್ನಿಧಿಂ ಕುರು ||"

ಎಂಬ ಮಂತ್ರದಿಂದ ಕಲಶ ಪೂಜೆಯನ್ನು ಮಾಡಿ, ಬಂದ ಮಾಹೇಶ್ವರರಿಗೆ ಯೋಗ್ಯ ಆಸನದಲ್ಲಿ ಕೂಡ್ರಿಸಿ ಷೋಡಶೋಪಚಾರಗಳಿಂದ ಪೂಜೆಯನ್ನು ಮಾಡಿ ಭೋಜನ ಪಾತ್ರೆಯಲ್ಲಿ ತಾವು ಶಕ್ತ್ಯಾನುಸಾರ ಮಾಡಿಸಿದ ವ್ಯಂಜನಾನ್ನವನ್ನು ಎಡೆ ಮಾಡಿ:—

"ಸತ್ಯಾಂತ್ವರ್ತೇನ ಪರಿಸಿಂಚಾಮಿ"ಎಂದು ಜಲವನ್ನು ಸುತ್ತಲೂ (ಪ್ರದಕ್ಷಿಣೆಯ ಆಕಾರದಂತೆ)ಬಿಟ್ಟು "ಶಿವಲಿಂಗಾರ್ಪಣ ಕುರ್ಯಾತ್"ಎಂದು ನಮಸ್ಕಾರ ಮಾಡಬೇಕು.

ಭೋಜನವಾದ ನಂತರ ಕರ್ತನು ಮಾಹೇಶ್ವರರಿಗೆ ದಕ್ಷಿಣೆ ತಾಂಬೂಲಾದಿಗಳನ್ನು ಕೊಟ್ಟು ಸಂತೋಷಪಡಿಸಬೇಕು. ಈ ಅಂತ್ಯೇಷ್ಟಿ ವಿಧಾನವು ವೀರಶೈವರಿಗೆ ವಿಶೇಷ ಸಂಸ್ಕಾರವಾಗಿದೆ. ಈ ವಿಧಾನವನ್ನು ಪ್ರತಿವರ್ಷ ಮರಣ ತಿಥಿಯ ದಿವಸ ಮೇಲಿನ ವಿಧಾನದಂತೆ ಆಚರಿಸಬೇಕು. ಸಾಮಾನ್ಯರಿಗೆ "ಮೃತ ತಿಥಿಯಾಚರಣೆ"ಎಂದೂ ಮಹಾತ್ಮರಿಗೆ "ಪುಣ್ಯತಿಥಿ"ಯಾಚರಣೆಯೆಂದು ಅನ್ನುವ ವಾಡಿಕೆಯಾಗಿದೆ.

ಸಮಾಪ್ತ

# ನವಗ್ರಹ ಪೂಜಾ ಪದ್ಧತಿ.

ನವಗ್ರಹ ಪೂಜೆಯನ್ನು ಮಾಡಿಸುವ ಮೊದಲು ಯಾವ ಉದ್ದೇಶದಿಂದ ಯಾವ ದೋಷ ಪರಿಹಾರಾರ್ಥವಾಗಿ ಮಾಡಿಸಬೇಕಾಗಿದೆಯೋ ಅದನ್ನು ಸಂಕಲ್ಪದಲ್ಲಿ ಹೇಳಿ ಅನಂತರ ಪೂಜೆಯನ್ನು ಆರಂಭಿಸಬೇಕು. ಸಂಕಲ್ಪವನ್ನು ಶಿವ ಪೂಜಾ ಪ್ರಕರ್ಣದ ೯೨ನೇ ಪೇಜಿನಲ್ಲಿ ಹೇಳಿದಂತೆ ಕ್ರಮವಾಗಿ ಅಂದು ಕೊನೆಗೆ–

ಅಸ್ಯಾಂ ಶುಭ ತಿಥೌ ಮಮೋಪಾತ್ತ ದುರಿತ ಕ್ಷಯದ್ವಾರಾ ಶ್ರೀ ಪಾರ್ವತಿ ಪರಮೇಶ್ವರ ಪ್ರೀತ್ಯರ್ಥಂ (ಮಾಡತಕ್ಕ ಕಾರ್ಯದ ಹೆಸರು ಅಥವಾ ದೋಷನಿವಾರಣಾರ್ಥ ಹೆಸರು ಅಂದು ಕರ್ಮ ಕರಿಷ್ಯೇ ತದಂಗತ್ವೇನ ಶ್ರೀನವಗ್ರಹ ಪೂಜಾಂ ಕರಿಷ್ಯೇ" ಹೀಗೆಂದು ಸಂಕಲ್ಪ ಮಾಡಿ ಮೊದಲು ಗಣೇಶ ಪೂಜೆಯನ್ನೂ ಕುಂಭ ಪೂಜೆಯನ್ನೂ ಮಾಡಬೇಕು. ತದನಂತರ—

ಒಂದು ಯೋಗ್ಯ ಸ್ಥಳದಲ್ಲಿ ಷಡ್ಮಾರ್ಜನೆಯನ್ನು ಮಾಡಿ ಆ ಪವಿತ್ರ ಸ್ಥಳದಲ್ಲಿ ಪೂರ್ವ ಪಶ್ಚಿಮ ಮುಖವಾಗಿ ನಾಲ್ಕು ರೇಖೆಗಳನ್ನೂ ಉತ್ತರ ದಕ್ಷಿಣ ಮುಖವಾಗಿ ನಾಲ್ಕು ರೇಖೆಗಳನ್ನೂ ರಂಗೋಲಿ ಹಿಟ್ಟಿನಿಂದ ಹಾಕಿ ಒಂಭತ್ತು ಕೋಣಗಳನ್ನು ಮಾಡಬೇಕು. ಆ ಬಳಿಕ ಆ ಪ್ರತಿಯೊಂದು ಕೋಣಗಳಲ್ಲಿ ಅಕ್ಕಿಯನ್ನು ಹರಡಿ ಅದರಲ್ಲಿ ರವಿಗೆ ಮಧ್ಯಕೋಣದಲ್ಲಿ ವರ್ತುಲಾಕಾರವಾದ ಮಂಡಲವನ್ನೂ, ಚಂದ್ರನಿಗೆ ಆಗ್ನೇಯ ದಿಕ್ಕಿನಲ್ಲಿ ಚತುಷ್ಕೋಣಾಕಾರವಾದ ಮಂಡಲವನ್ನೂ, ಮಂಗಳನಿಗೆ ದಕ್ಷಿಣದಲ್ಲಿ ತ್ರಿಕೋಣಾಕಾರವಾದ ಮಂಡಲವನ್ನೂ, ಬುಧನಿಗೆಈಶಾನ್ಯದಿಕ್ಕಿನಲ್ಲಿ ಬಾಣಾಕಾರ ಮಂಡಲವನ್ನೂ, ಗುರುವಿಗೆ ಉತ್ತರದಲ್ಲಿ ದೀರ್ಘಚತುಷ್ಕೋಣ ಮಂಡಲವನ್ನೂ, ಶುಕ್ರನಿಗೆ ಪೂರ್ವದಲ್ಲಿ ಪಂಚಕೋಣಾಕಾರ ಮಂಡಲವನ್ನೂ ಶನಿಗೆ ಪಶ್ಚಿಮದಲ್ಲಿ ಧನುರಾಕಾರ ಮಂಡಲವನ್ನೂ, ರಾಹುವಿಗೆ ನೈಋತ್ಯ ದಿಕ್ಕಿನಲ್ಲಿ ಶೂರ್ಪಾಕಾರ ಮಂಡಡವನ್ನೂ, ಕೇತುವಿಗೆ ವಾಯುವ್ಯದಿಕ್ಕಿನಲ್ಲಿ ಧ್ವಜಾಕಾರ ಮಂಡಲವನ್ನೂ ಬರೆದು ಆಯಾಯ ಮಂಡಲದಲ್ಲಿ ಆಯಾಯ ಗ್ರಹಗಳನ್ನು ಸ್ಥಾಪಿಸಬೇಕು. ಹೇಗಂದರೆ—

ಸೂರ್ಯನಿಗೆ ಗೋದಿಯನ್ನು ಒಂದು ಕೆಂಪು ವಸ್ತ್ರದಲ್ಲಿ ಗಂಟು ಕಟ್ಟಿ, ಚಂದ್ರನಿಗೆ ಅಕ್ಕಿಯನ್ನು ಬಿಳೀ ವಸ್ತ್ರದಲ್ಲಿ ಕಟ್ಟಿ, ಮಂಗಳನಿಗೆ ತೊಗರಿಯನ್ನು ಕೆಂಪು ವಸ್ತ್ರದಲ್ಲಿ ಕಟ್ಟಿ, ಬುಧನಿಗೆ ಹೆಸರನ್ನು ಹಸಿರು ವಸ್ತ್ರದಲ್ಲಿ ಕಟ್ಟಿ, ಗುರುವಿಗೆ ಕಡಲೆಯನ್ನು ಹಳದೀ ವಸ್ತ್ರದಲ್ಲಿ ಕಟ್ಟಿ, ಶುಕ್ರನಿಗೆ ಅವರೆಯನ್ನು ಬಿಳೀ ವಸ್ತ್ರದಲ್ಲಿ ಕಟ್ಟಿ ಶನಿಗೆ ಎಳ್ಳನ್ನು ಕಪ್ಪು ವಸ್ತ್ರದಲ್ಲಿ ಕಟ್ಟಿ, ರಾಹುವಿಗೆ ಉದ್ದನ್ನು ಚಿತ್ರವರ್ಣದ ವಸ್ತ್ರದಲ್ಲಿ ಕಟ್ಟಿ, ಕೇತುವಿಗೆ ಹುರಳಿಯನ್ನು ಧೂಮ್ರ ವರ್ಣದ ವಸ್ತ್ರದಲ್ಲಿ ಕಟ್ಟಿ, ಫಲ, ತಾಂಬೂಲ ದಕ್ಷಿಣೆ ಸಹಿತವಾಗಿ ಮೇಲೆಹೇಳಿದಂತೆ ಆಯಾಯ ಕೋಣಗಳಲ್ಲಿಡಬೇಕು. ಕನಿಷ್ಟಪಕ್ಷ ದೊನ್ನೆಗಳನ್ನಾದರೂ ಇಟ್ಟರೆ ಬರುವದು. ಇದನ್ನು ಶಕ್ತ್ಯಾನುಸಾರ ಮಾಡಬೇಕು. ತದನಂತರ ಪ್ರತಿಯೊಂದು ಗ್ರಹದ ಪೂಜೆಯನ್ನು ಬೇರೆ ಬೇರೆಯಾಗಿ ಸಂಕಲ್ಪ ಮಾಡಿ ವಿಧಿಪೂರ್ವಕವಾಗಿ ಪೂಜಾ ಮಾಡಬೇಕು.

## ಸೂರ್ಯಗ್ರಹ ಪೂಜಾ ಪದ್ಧತಿ

ಮೊದಲು ದೇಶಕಾಲಾದಿಗಳನ್ನು ಉಚ್ಚರಿಸಿ:— "ಅಸ್ಯಾಂ ಶುಭ ತಿಥೌ ಮಮ ಸರ್ವಾರಿಷ್ಟ ಪರಿಹಾರದ್ವಾರಾ ಸರ್ವಾಭೀಷ್ಟ ಸಿದ್ಧ್ಯರ್ಥಂ ಅಮುಕ ಕಾರ್ಯ ಅದವಾ ಅಮುಕ ದೋಷ (ಮಾಡುವ ಕಾರ್ಯ ಹೆಸರು ಅಂದು) ವಶಾತ್ ಸಂಭಾವಿತ

ದುಷ್ಟಾರಿಷ್ಟ ಪರಿಹಾರಾರ್ಥಂ ಸೂರ್ಯಗ್ರಹ ಪ್ರೀತ್ಯರ್ಥಂ ಪೂಜಾಂ ಕರಿಷ್ಯೇ'' ಹೀಗೆ ಸಂಕಲ್ಪ ಮಾಡಿ—

**ಕರನ್ಯಾಸ:—** ಆಕೃಷ್ಣೇನಃ ಅಂಗುಷ್ಠಾಭ್ಯಾಂ ನಮಃ। ರಜಸಾವರ್ತಮಾನ ತರ್ಜನೀಭ್ಯಾಂ ನಮಃ। ನಿವೇಶಯನ್– ಮಧ್ಯಮಾಭ್ಯಾಂ ನಮಃ। ಅಮೃತಂ ಮರ್ತ್ಯಂಚ– ಅನಾಮಿಕಾಭ್ಯಾಂ ನಮಃ। ಹಿರಣ್ಯಯೇನ ಸವಿರಥೇನ– ಕನಿಷ್ಠಿಕಾಭ್ಯಾಂ ನಮಃ। ಆದೇವೋಯಾತಿ ಭುವನಾನಿ ಪಶ್ಯನ್–ಕರತಲ ಕರಪೃಷ್ಠಾಭ್ಯಾಂ ನಮಃ ॥

**ದೇಹನ್ಯಾಸ:—** ಆಕೃಷ್ಣೇನ– ಹೃದಯಾಯನಮಃ। ರಜಸಾವರ್ತಮಾನ ಶಿರಸೇಸ್ವಾಹಾ। ನಿವೇಶಯನ್– ಶಿಖಾಯೈವೌಷಟ್। ಅಮೃತಂ ಮರ್ತ್ಯಂಚ– ಕವಚಾಯಹುಂ। ಹಿರಣ್ಯಯೇಸವಿತಾರಥೇನ– ನೇತ್ರತ್ರಯಾಯ ವೌಷಟ್। ಆದೇಶೋಯಾತಿ ಭುವನಾನಿ ಪಶ್ಯನ್– ಅಸ್ತ್ರಾಯಫಟ್। ಓಂ ಭೂರ್ಭುವಸ್ಸುವರೋ ಮಿತಿ ದಿಗ್ಬಂಧಃ ॥ ಹೀಗೆ ಸೂರ್ಯನ ಕರನ್ಯಾಸ–ದೇಹನ್ಯಾಸವನ್ನು ಮಾಡಿ ಎಲ್ಲ ದಿಕ್ಕುಗಳಿಗೂ ಶುದ್ಧೋದಕವನ್ನು ಸಿಂಪಡಿಸಬೇಕು. ತದನಂತರ—

**ಧ್ಯಾನ:–** ದ್ವಿಭುಜಂ ಪದ್ಮಹಸ್ತಂಚ ವರದಂ ಮುಕುಟಾನ್ವಿತಂ। ಧ್ಯಾಯೇದ್ದಿವಾಕರಂ ದೇವಂ ಸರ್ವಾಭೀಷ್ಟ ಪ್ರದಾಯಕಂ। ಲಮಿತ್ಯಾದಿ ಪಂಚ ಪೂಜಾ॥ ಆಕೃಷ್ಣೇನ ರಜಸಾವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂಚ। ಹಿರಣ್ಮಯೇನ ಸವಿತಾರಥೇನ ದೇವೋಯಾತಿ ಭುವನಾನಿ ಪಶ್ಯನ್ ॥ ಹೀಗೆ ಕರಜೋಡಿಸಿ ಕರ್ತೃವು ಸೂರ್ಯಧ್ಯಾನ ಮಾಡಬೇಕು. ಆ ಬಳಿಕ—

**ಆವ್ಹಾನ:—** ಜಪಾಕುಸುಮ ಸಂಕಾಶಂ ದ್ವಿಭುಜಂ ಪದ್ಮಹಸ್ತಂಚ। ಸಿಂಧೂರಾಂಬರ ಮಾಲ್ಯಂಚ ರಕ್ತಗಂಧಾನು ಲೇಪನಂ॥ ಮಾಣಿಕ್ಯ ರತ್ನ ಖಚಿತಂ ಸರ್ವಾಭರಣ ಭೂಷಿತಂ। ಸಪ್ತಾಶ್ವರಥವಾಹಂತು ಮೇರುಂಚೈವ ಪ್ರದಕ್ಷಿಣಂ॥ ವರ್ತುಲಾಕಾರ ಮಂಡಲಮಧ್ಯೇ ಗೋಧೂಮಧಾನ್ಯಸ್ಯೋಪರಿ ಭಗವಂತಂ। ಓಂ ಭೂಃ ಓಂ ಭುವಃ ಓಂಸುವಃ ಓಂ ಭೂರ್ಭುವಸ್ಸುವಃ ಸೂರ್ಯಗ್ರಹಂ ಮಾವಾಹಯಾಮಿಃ ಸ್ಥಾಪಯಾಮಿ ಪೂಜಯಾಮಿಃ॥ ಹೀಗೆಂದು ಸೂರ್ಯನನ್ನು ಕರಜೋಡಿಸಿ ಆವ್ಹಾನ ಮಾಡಿ ಹಿಂದೆ ಪೂಜಾ ಪ್ರಕರ್ಣದಲ್ಲಿ ಹೇಳಿದಂತೆ ಸಕ್ರಮವಾಗಿ ಪೂಜಾ ಮಂತ್ರಗಳಿಂದ ಪೂಜಿಸಿ---

ಸೂರ್ಯ ಮಂತ್ರ ''ಜಪಾಕುಸುಮ ಸಂಕಾಶಂ ಕಾಶ್ಯಪೇಯಂ ಮಹಾದ್ಯುತಿಮ್। ತೇಮೋರಿಂ ಸರ್ವ ಪಾಪಘ್ನಂ ಪ್ರಣತೋಽಸ್ಮಿ ದಿವಾಕರಂ ॥

ಎಂಬ ಮಂತ್ರದಿಂದ ಏಕಚಿತ್ತವಾಗಿ ನಮಸ್ಕಾರ ಮಾಡಬೇಕು.

## ನವಗ್ರಹ ಸ್ಥಾಪನಾ ಚಕ್ರ

ಪೂರ್ವ

| | | | | |
|---|---|---|---|---|
| ಈಶಾನ್ಯ | ಬುಧ–ಹೆಸರು | ಶುಕ್ರ– ಅವರೆ | ಚಂದ್ರ– ಅಕ್ಕಿ | ಆಗ್ನೇಯ |
| ಉತ್ತರ | ಗುರು–ಕಡಲೆ | ರವಿ– ಗೋದಿ | ಮಂಗಳ–ತೊಗರಿ | ದಕ್ಷಿಣ |
| ವಾಯುವ್ಯ | ಕೇತು– ಹುರಳಿ | ಶನಿ– ಎಳ್ಳು | ರಾಹು– ಉದ್ದು | ನೈಋತ್ಯ |

## ಚಂದ್ರಗ್ರಹ ಪೂಜಾಪದ್ಧತಿ

ಸೂರ್ಯಗ್ರಹಕ್ಕೆ ಹೇಳಿದಂತೆ ಸಂಕಲ್ಪವನ್ನು ಮಾಡಿ ಪುರೋಹಿತನು:—

**ಕರನ್ಯಾಸ**— ಆ ಪ್ಯಾಯಸ್ವ ಅಂಗುಷ್ಠಾಭ್ಯಾಂ ನಮಃ। ಸಮೇತುತೇ ತರ್ಜನೀಭ್ಯಾಂ ನಮಃ| ವಿಶ್ವತಃ- ಮಧ್ಯಮಾಭ್ಯಾಂ ನಮಃ। ಸೋಮವೃಷ್ಣಿಯಂ ಅನಾಮಿಕಾಭ್ಯಾಂನಮಃ। ಭವಾವಾಜಸ್ಯ-ಕನಿಷ್ಠಿಕಾಭ್ಯಾಂ ನಮಃ। ಸಂಗಥೇ- ಕರತಲಕರ ಪೃಷ್ಠಾಭ್ಯಾಂ ನಮಃ॥ ಹೀಗೆಂದು ಕರನ್ಯಾಸವನ್ನು ಮಾಡಬೇಕು. ತದನಂತರ—

**ದೇಹನ್ಯಾಸ**— ಆಪ್ಯಯಸ್ವ-ಹೃದಯಾಯ ನಮಃ। ಸಮೇತುತೇ-ಶಿರಸೇ ಸ್ವಾಹಾ। ವಿಶ್ವತಃ-ಶಿಖಾಯೈ ವೌಷತ್। ಸೋಮವೃಷ್ಣಿಯಂ-ಕವಚಾಯಹುಂ। ಭವಾವಾಜಸ್ಯ-ನೇತ್ರತ್ರಯಾಯ ವೌಷಟ್। ಸಂಗಥೇ-ಅಸ್ತ್ರಾಯ ಫಟ್। ಓಂ ಭೂರ್ಭುವಸ್ಸುವರೋಮಿತಿ ದಿಗ್ಬಂಧಃ॥ಎಂದು ದೇಹನ್ಯಾಸ ಮಾಡಬೇಕು.ಆಬಳಿಕ-

**ಧ್ಯಾನ**— ಗಂಗಾಧರ ಧರಂ ದೇವಂ ಶ್ವೇತವರ್ಣಂ ನಿಶಾಕರಂ। ಧ್ಯಾಯೇ ದಮೃತಂ ಸಂಭೂತಂ ಸರ್ವಕಾಮ ಫಲಪ್ರದಂ॥ ಲ ಮಿತ್ಯಾದಿ ಪಂಚಪೂಜಾ ಮೂಲಂ। ಆಪ್ಯಾಯ ಸ್ವಸಮೇತುತೇ ವಿಶ್ವತಃ ಸೋಮವೃಷ್ಣಿಯಂ ಭವಾವಾಜಸ್ಯ ಸಂಗಥೇ॥ ಹೀಗೆ ಕರಗಳನ್ನು ಜೋಡಿಸಿ ಕರ್ತನು ಚಂದ್ರ-ಧ್ಯಾನಮಾಡಿ ಎಲ್ಲಾ ದಿಕ್ಕುಗಳಿಗೂ ಶುದ್ಧೋದಕವನ್ನು ಸಿಂಪಡಿಸಬೇಕು. ಆಮೇಲೆ-

**ಆಹ್ವಾನ**-- ಸೋಮಂ ದ್ವಿಭುಜ ಪದ್ಮಂಚ ಶುಕ್ಲಾಂಬರಧರಂ ಶುಭಂ। ಶ್ವೇತಗಂಧಾನು ಲೇಪನಂ ಮುಕ್ತಾಭರಣ ಭೂಷಿತಂ॥ ಸೋಮಂ ಚತುರ್ಭುಜಂ ದೇವಂ ಕೇಯೂರ ಮುಕುಟೋಜ್ವಲಂ। ಸಶುಭ್ರ ರಥಮಾರೂಢಂ ಮೇರುಂ ಚೈವ ಪ್ರದಕ್ಷಿಣಂ॥ ಸೂರ್ಯಗ್ರಹಸ್ಯ ಆಗ್ನೇಯ ದಿಗ್ಭಾಗೇ ಚತುರಶ್ರಮಂಡಲೇ ತಂಡುಲ ಧಾನ್ಯಸ್ಯೋಪರಿ ಭಗವಂತಂ ಓಂ ಭೂಃ ಓಂ ಭುವಃ ಓಂ ಸುವಃ ಓಂ ಭೂರ್ಭುವ ಸ್ಸುವಃ ಚಂದ್ರಗ್ರಹಂ ಮಾವಾಹಯಾಮಿ, ಸ್ಥಾಪಯಾಮಿ, ಪೂಜಯಾಮಿ॥ ಹೀಗೆಂದು ಚಂದ್ರನಆಹ್ವಾನಮಾಡಿ ಹಿಂದೆಹೇಳಿದ ಪೂಜಾಮಂತ್ರಗಳಿಂದಪೂಜಿಸಿ-

ಚಂದ್ರಮಂತ್ರ:—"ಧಧಿಶಂಖತುಷಾರಭಂ ಕ್ಷೀರೋದಾರ್ಣವ ಸಂಭವಮ್। ನಮಾಮಿ ಶಶಿನಂ ಸೋಮಂ ಶಂಭೋ ರ್ಮುಕುಟಭೂಷಣಮ್॥ ಎಂಬ ಮಂತ್ರ ದಿಂದ ಏಕಾಗ್ರಚಿತ್ತವಾಗಿ ಚಂದ್ರಗ್ರಹಕ್ಕೆ ನಮಸ್ಕಾರ ಮಾಡಬೇಕು.

## ಮಂಗಳ ಗ್ರಹ ಪೂಜಾ ಪದ್ಧತಿ

ದೇಶಕಾಲಾದಿಗಳನ್ನು ಉಚ್ಚರಿಸಿ ಪುರೋಹಿತನು—

**ಕರನ್ಯಾಸ**- ಅಗ್ನಿಮೂರ್ಧಾ-ಅಂಗುಷ್ಠಾಭ್ಯಾಂ ನಮಃ। ದಿವಃ ಕಕುತ್- ತರ್ಜನೀಭ್ಯಾಂ ನಮಃ। ಪತಿಃ ಪ್ರತಿವ್ಯಾ-ಮಧ್ಯಮಾಭ್ಯಾಂ ನಮಃ। ಅಯಂ- ಅನಾಮಿಕಾಭ್ಯಾಂ ನಮಃ। ಅಪಾಗ್ಂ ರೇತಾಗ್ಂಸಿ- ಕನಿಷ್ಠಿಕಾಭ್ಯಾಂ ನಮಃ। ಜಿನ್ವತಿ-ಕರತಲಕರ ಪ್ರಷ್ಠಾಭ್ಯಾಂ ನಮಃ॥

**ದೇಹನ್ಯಾಸ**- ಅಗ್ನಿಮೂರ್ಧ್ಯಾ-ಹೃದಯಾಯ ನಮಃ। ದಿವಃಕಕುತ್- ಶಿರಸೇ ಸ್ವಾಹಾ। ಪತಿಃ ಪ್ರತಿವ್ಯಾ-ಶಿಖಾಯೈ ವೌಷಟ್। ಅಯಂ-ಕವಚಾಯ ಹುಂ। ಅಪಾಗ್ಂ ರೇತಾಗ್ಂಸಿ-ನೇತ್ರತ್ರಯಾಯ ವೌಷಟ್। ಜನ್ವತಿ-ಅಸ್ತ್ರಾಯ ಫಟ್। ಓಂ ಭೂರ್ಭುವಸ್ಸುವರೋಮಿತಿ ದಿಗ್ಬಂಧಃ॥ ಹೀಗೆಂದು ಕರನ್ಯಾಸ-ದೇಹ ನ್ಯಾಸಗಳನ್ನು ಮಾಡಿ ಎಲ್ಲಾ ದಿಕ್ಕುಗಳಿಗೂ ಶುದ್ಧೋದಕವನ್ನು ಸಿಂಪಡಿಸ ಬೇಕು. ತದನಂತರ—

**ಧ್ಯಾನ**— ರಕ್ತಮಾಲ್ಯಾಂಬರಧರಂ ಮೇಷಾರೂಢಂ ಚತುರ್ಭುಜಂ। ಶಕ್ತಿ ಶೂಲ ಗದಾಪದ್ಮಂ ಧಾರಯಂತಂ ಕರಾಂಬುಜೈಃ ॥ ಲಮಿತ್ಯಾದಿ ಪಂಚಪೂಜಾ ಮೂಲ॥ ಅಗ್ನಿರ್ಮೂರ್ಧಾದಿವಃ ಕಕುತ್ಪತೀ ಪೃಥಿವ್ಯಾ ಅಯಂ। ಅಪಾಂರೇತಾಂಸಿ ಜಿನ್ವತಿ ॥ ಹೀಗೆ ಕರಗಳನ್ನು ಜೋಡಿಸಿ ಕರ್ತನು ಮಂಗಳನ ಧ್ಯಾನವನ್ನು ಮಾಡ ಬೇಕು. ಆ ಬಳಿಕ—

**ಆಹ್ವಾನ**— ರಕ್ತಮಾಲ್ಯಾಂಬರಧರಶ್ಶೂಲಿ ಶಕ್ತಿಗದಾಧರಂ | ಚತುರ್ಭುಜೋಮೇಷಗತೋ ವರದಶ್ಚರಾಸುತಃ ॥ ರಕ್ತ ಗಂಧಾನುಲೇಪಂಚ ವಸ್ತ್ರಾಭರಣ ಭೂಷಿತಂ ॥ ದಿವ್ಯರಥಮಾರೂಢಂ ಮೇರುಂಚೈವ ಪ್ರದಕ್ಷಿಣಂ ॥ ಸೂರ್ಯಗ್ರಹಸ್ಯ ದಕ್ಷಿಣದಿಗ್ಭಾಗೇ ತ್ರಿಕೋಣಾಕಾರ ಮಂಡಲೇ ಆಢಕಧಾನ್ಯನ್ಸ್ತೋಪರಿ ಭಗವಂತಂ। ಓಂಭೂಃ, ಓಂಭುವಃ, ಓಂಸುವಃ, ಓಂ ಭೂರ್ಭುವಸ್ಸುವಃ ಅಂಗಾರಕ ಗ್ರಹಂಮಾವಾಹಯಾಮಿ, ಸ್ಥಾಪಯಾಮಿ, ಪೂಜಯಾಮಿ ॥ ಹೀಗೆಂದು ಅಂಗಾರಕ ಗ್ರಹ ಆಹ್ವಾನ ಮಾಡಿ ಹಿಂದೆ ಹೇಳಿದಂತೆ ಪೂಜಾ ಮಂತ್ರಗಳಿಂದ ಪೂಜಿಸಿ—

ಅಂಗಾರಕ ಮಂತ್ರ— "ಧರಣೀಗರ್ಭಸಂಭೂತಂ ವಿದ್ಯುತ್ಕಾಂತಿ ಸಮಪ್ರಭಮ್ । ಕುಮಾರಂ ಶಕ್ತಿ ಹಸ್ತಂತಂ ಅಂಗಾರಕಂ ಪ್ರಾಣಮಾಮ್ಯಹಂ ॥" ಎಂಬ ಮಂತ್ರದಿಂದ ಅಂಗಾರಕನಿಗೆ ಏಕಾಗ್ರಚಿತ್ತದಿಂದ ನಮಸ್ಕಾರ ಮಾಡಬೇಕು.

## ಬುಧ ಗ್ರಹ ಪೂಜಾ ಪದ್ಧತಿ

ದೇಶ ಕಾಲಾದಿಗಳನ್ನುಚ್ಚರಿಸಿ-ಪುರೋಹಿತನು-

**ಕರನ್ಯಾಸ**— ಉದ್ಬುಧ್ಯಸ್ವಾಗ್ನೇ-ಅಂಗುಷ್ಠಾಭ್ಯಾಂ ನಮಃ। ಪ್ರತಿಜಾಗೃಹ್ಯೇನಂ-ತರ್ಜನೀಭ್ಯಾಂ ನಮಃ। ಅಯಂಚ-ಅನಾಮಿಕಾಭ್ಯಾಂ ನಮಃ। ಕೃಣ್ವಗ್ಂಸ್ಥಾಪಿತರಂ ಯುವಾನಂ-ಕನಿಷ್ಠಿಕಾಭ್ಯಾಂ ನಮಃ। ಅನ್ವಾತಾಗ್ಂ ಸೀತ್ವಯತಂತುಮೇತಂ-ಕರತಲಕರ ಪ್ರಷ್ಠಾಭ್ಯಾಂ ನಮಃ ॥

**ದೇಹನ್ಯಾಸ**— ಉದ್ಬುಧ್ಯಸ್ವಾಗ್ನೇ-ಹೃದಯಾಯ ನಮಃ। ಪ್ರತಿಗ್ರಹ್ಯೇನಂ-ಶಿರಸೇಸ್ವಾಹಾ | ಅಯಂಚ-ಶಿಖಾಯೈವಾಷಟ್। ಕಣ್ವಗ್ಂ ಸ್ಥಾಪಿತರಂ ಯುವಾನಂ-ಕವಚಾಯಹುಂ। ಅನ್ವಾತಾಗ್ಂ ಸೀತ್ವಯಿತಂತುಮೇತಂ-ಅಸ್ತ್ರಾಯಫಟ್ ॥ ಓಂ ಭೂರ್ಭುವಸ್ಸುವರೋಮಿತಿ ದಿಗ್ಬಂಧಃ ॥ ಹೀಗೆ ದೇಹನ್ಯಾಸ-ಕರನ್ಯಾಸಗಳನ್ನು ಮಾಡಿ ಎಲ್ಲಾ ದಿಕ್ಕುಗಳಿಗೆ ಶುದ್ಧೋದಕವನ್ನು ಸಿಂಪಡಿಸಬೇಕು. ತದನಂತರ—

**ಧ್ಯಾನ**— ಸಿಂಹಾರೂಢಂ ಚತುರ್ಬಾಹುಂ ಖಡ್ಗಚರ್ಮ ಗಧಾಧರಂ। ಸೌಮ್ಯಪುತ್ರಂ ಮಹಾಸೌಮ್ಯಂಧ್ಯಾಯೇತ್ಸರ್ವಾರ್ಥ ಸಿದ್ಧಿದಂ ॥ ಲಮಿತ್ಯಾದಿ ಪಂಚಪೂಜಾ ॥ ಉದ್ಬುಧ್ಯಸ್ವಾಗ್ನೇ ಪ್ರತಿಜಾಗೃಹ್ಯೇ ನಮಿಷ್ಟಾ ಪೂರ್ತೇಸಗ್ಂ ಸೃಜೇಥಾ ಮಯಂಚ| ಮನಃ ಕೃಣ್ವನ್ ಸ್ಥಾಪಿತರಂಯುವಾನ ಮನ್ವಾತಾಗ್ಂ ಸೀತ್ವಯತಂತು ಮೇತಂ || ಹೀಗೆ ಕರಗಳನ್ನು ಜೋಡಿಸಿಕೊಂಡು ಕರ್ತನು ಬುಧ ಧ್ಯಾನವನ್ನು ಮಾಡಬೇಕು. ತದನಂತರ—

**ಆಹ್ವಾನ**— ಪೀತಮಾಲ್ಯಾಂಬರಧರಂ ಪೀತಗಂಧಾನು ಲೇಪನಂ। ವಜ್ರಮಾಭರಣಂ ಚೈವ ಕಿರೀಟ ಮುಕುಟೋಜ್ವಲಂ ॥ ಕುಂಕುಮಾಂಕ ಚತುರ್ಭುಜಂ ಖಡ್ಗಶೂಲಗಧಾಪಾಣಿಂ| ಪೀತಾಶ್ವರ ರಥಮಾರೂಢಂ ಮೇರುಂಚೈವ ಪ್ರದಕ್ಷಿಣಂ॥ ಸೂರ್ಯಗ್ರಹಸ್ಯ ಈಶಾನ್ಯದಿಗ್ಭಾಗೇ ಬಾಣಾಕಾರಮಂಡಲೇ ಮುದ್ಗಧಾನ್ಯನ್ಸ್ತೋಪರಿ ಭಗವಂತಂ, ಓಂ ಭೂಃ, ಓಂ ಭುವಃ, ಓಂ ಸುವಃ, ಓಂ ಭೂರ್ಭುವಸ್ಸುವ ಬುಧ ಗ್ರಹಂ ಮಾವಾಹಯಾಮಿ, ಸ್ಥಾಪಯಾಮಿ, ಪೂಜಯಾಮಿ ಹೀಗೆ ಬುಧ ಗ್ರಹದ ಆಹ್ವಾನ ಮಾಡಿ ತದನಂತರ ಹಿಂದೆ ಹೇಳಿದ ಪೂಜಾ ಮಂತ್ರಗಳಿಂದ ಪೂಜಿಸಿ—

ಬುಧ ಮಂತ್ರ-- "ಪ್ರಿಯಂಗು ಕಲಿಕಾಶ್ಯಾಮಂ ರೂಪೇಣಾಪ್ರತಿಮಂ ಬುಧಮ್ | ಸೌಮ್ಯಂ ಸೌಮ್ಯಗುಣೋಪೇತಂ ತಂ ಬುಧಂ ಪ್ರಣಮಾಮ್ಯಹಮ್ || ಎಂಬಮಂತ್ರದಿಂದಬುಧನಿಗೆ ಏಕಾಗ್ರಚಿತ್ತದಿಂದ ಕರ್ತನುನಮಸ್ಕಾರಮಾಡಬೇಕು

## ಗುರು ಗ್ರಹ ಪೂಜಾ ಪದ್ಧತಿ

ದೇಶಕಾಲಾದಿಗಳನ್ನುಚ್ಚರಿಸಿ ಪುರೋಹಿತನು--

**ಕರನ್ಯಾಸ**- ಬ್ರಹಸ್ಪತಿ ಅತಿಯದರ್ಯೋ ಅರ್ಹಾತ್-ಅಂಗುಷ್ಠಾಭ್ಯಾಂ ನಮಃ | ದ್ಯುಮದ್ವಿಭಾತಿ-ತರ್ಜನೀಭ್ಯಾಂ ನಮಃ | ಕೃತುಮಜ್ಜನೇಷು-ಮಧ್ಯಮಾಭ್ಯಾಂ ನಮಃ | ಯದ್ದೀದಯಚ್ಛವಸ-ಅನಾಮಿಕಾಭ್ಯಾಂ ನಮಃ | ಋತೇ ಪ್ರಜಾದಸ್ಮಾಸು-ಕನಿಷ್ಠಿಕಾಭ್ಯಾಂ ನಮಃ | ದ್ರವಿಣಂಧೇಹಿ ಚಿತ್ರಂ-ಕರತಲಕರ ಪೃಷ್ಠಾಭ್ಯಾಂ ನಮಃ ||

**ದೇಹನ್ಯಾಸ**— ಬೃಹಸ್ಪತಿ ಅತಿಯದರ್ಯೋ ಅರ್ಹಾತ್-ಹೃದಯಾಯ ನಮಃ | ದ್ಯುಮದ್ವಿಭೂತಿ-ಶಿರಸೇಸ್ವಾಹಾ| ಕೃತುಜ್ಜನೇಷು-ಶಿಖಾಯೈ ವೌಷಟ್| ಯದ್ದೀದಯಚ್ಛವಸ-ಕವಚಾಯ ಹುಂ | ಋತೇಪ್ರಜಾದಸ್ಮಾಸು-ನೇತ್ರತ್ರಯಾಯ ವೌಷಟ್ | ದ್ರವಿಣಂಧೇಹಿಚಿತ್ರಂ-ಅಸ್ತ್ರಾಯಫಟ್ | ಓಂ ಭೂರ್ಭುವಸ್ಸುವರೋಮಿತಿ ದಿಗ್ಬಂಧಃ || ಹೀಗೆಂದು ಕರನ್ಯಾಸ-ದೇಹನ್ಯಾಸ ಮಾಡಿ ಎಲ್ಲಾ ದಿಕ್ಕುಗಳಿಗೂ ಶುದ್ಧೋದಕವನ್ನು ಸಿಂಪಡಿಸಬೇಕು. ಆ ಬಳಿಕ

**ಧ್ಯಾನ**— ವರಾಕ್ಷಮಾಲಾವಂಡಂಚ ಕಮಂಡಲಧರಂಭುಂ | ಪುಷ್ಯರಾಗಾಂಕಿತಂ ಪೀತಂವರದಂ ಭಾವಯೇದ್ಗುರುಂ || ಲಮಿತ್ಯಾದಿಪಂಚಪೂಜಾ || ಬೃಹಸ್ಪತೇ ಅತಿಯದರ್ಯೋಅರ್ಹಾ ದ್ಯುಮದ್ವಿಭಾತಿಕೃತುಮಜ್ಜನೇಷು | ಯದ್ದೀದಯಚ್ಛವಸರತ್ತ ಪ್ರಜಾತದವಸ್ಮಾಸುದ್ರ ವಿಣಂಧೀಹಿಚಿತ್ರಂ || ಹೀಗೆ ಕರಗಳನ್ನು ಜೋಡಿಸಿಕೊಂಡು ಕರ್ತನು ಗುರುಧ್ಯಾನವನ್ನು ಮಾಡಬೇಕು. ಆ ಮೇಲೆ--

**ಆಹ್ವಾನ**-- ಸ್ವರ್ಣಾಂಬರಧರಂ ದೇವಂ ಸ್ವರ್ಣ ಗಂಧಾನು ಲೇಪನಂ | ಪುಷ್ಪರಾಗಮಯ ಭೂಷ್ಯಂ ಚತುರ್ಭುಜ ಸಮಾನ್ವಿತಂ || ದಂಡಾಕ್ಷ ಸೂತ್ರಮಾಲಾಂಚ ಕಮಂಡಲವರಾನ್ವಿತಂ | ಸ್ವ ಸ್ವರ್ಣರಥಮಾರೂಢಂ ಮೇರುಂಚೈವ ಪ್ರದಕ್ಷಿಣಂ || ಸೂರ್ಯಗ್ರಹಸ್ಯ ಉತ್ತರದಿಗ್ಭಾಗೇ ದೀರ್ಘ ಚತುಶ್ರಾಕಾರ ಮಂಡಲೇ | ಚಣಕಧಾನ್ಯಸ್ಯೋಪರಿ ಭಗವಂತಂ | ಓಂ ಭೂಃ, ಓಂ ಭುವಃ, ಓಂ ಸುವಃ, ಓಂ ಭೂರ್ಭುವಸ್ಸುವ ಗುರುಗ್ರಹಂ ಮಾವಾಹಯಾಮಿ, ಸ್ಥಾಪಯಾಮಿ, ಪೂಜಯಾಮಿ || ಹೀಗೆಂದು ಗುರುಗ್ರಹ ಆಹ್ವಾನ ಮಾಡಿ ಹಿಂದೆ ಹೇಳಿದಂತೆ ಪೂಜಾ ಮಂತ್ರಗಳಿಂದ ಪೂಜಿಸಿ--

ಗುರುಮಂತ್ರ-- "ದೇವಾನಾಂಚ ಋಷೀಣಾಂಚ ಗುರೂಂ ಕಾಂಚನ ಸನ್ನಿಭಮ್ | ಬುದ್ಧಿಭೂತಂ ತ್ರಿಲೋಕೇಶಂ ತಂ ನಮಾಮಿ ಬ್ರಹಸ್ಪತಿಮ್ || ಎಂಬ ಮಂತ್ರದಿಂದ ಕರ್ತನು ಏಕಾಗ್ರಚಿತ್ತದಿಂದ ನಮಸ್ಕಾರ ಮಾಡಬೇಕು.

## ಶುಕ್ರಗ್ರಹ ಪೂಜಾ ಪದ್ಧತಿ

ದೇಶ ಕಾಲಾದಿಗಳನ್ನುಚ್ಚರಿಸಿ ಪುರೋಹಿತನು—

**ಕರನ್ಯಾಸ**—ಶುಕ್ರಂತೇಅನ್ಯತ್-ಅಂಗುಷ್ಠಾಭ್ಯಾಂ ನಮಃ | ಯಜತಂತೇ ಅನ್ಯತ್-ತರ್ಜನೀಭ್ಯಾಂ ನಮಃ| ವಿಷುರೂಪೇ ಅಹನಿ-ಮಧ್ಯಮಾಭ್ಯಾಂ ನಮಃ| ದ್ಯೌರಿವಾಸಿ-ಅನಾಮಿಕಾಭ್ಯಾಂ ನಮಃ| ವಿಶ್ವಾಹಿಮಾಯಾ ಅವಶಿಸ್ವಧಾವಃ-ಕನಿ

ಷ್ಠಿಕಾಭ್ಯಾಂ ನಮಃ । ಭದ್ರಾತೇಪೂಷನ್ನಿಹರಾತಿರಸ್ತು-ಕರತಲಕರ ಪೃಷ್ಠಾಭ್ಯಾಂ ನಮಃ ॥ ಹೀಗೆಂದು ಕರನ್ಯಾಸವನ್ನು ಮಾಡಿ ತದನಂತರ—

**ದೇಹನ್ಯಾಸ**— ಶುಕ್ರಂತೇ ಅನ್ಯತ್-ಹೃದಯಾಯನಮಃ । ಯಜತಂತೇ ಅನ್ಯತ್-ವಿಷುರೂಪೇ ಅಹನಿ-ಶಿಖಾಯೈ ವೌಷಟ್ । ದ್ಯೌರಿವಾಸಿ-ಕವಚಾಯ ಹುಂ । ವಿಶ್ವಾಹಿಮಾಯಾ ಅವಶಿಸ್ವಧಾವಃ-ನೇತ್ರತ್ರಯಾಯ ವಾಷಟ್ । ಭದ್ರಾತೇಪೂಷನ್ನಿಹರಾತಿರಸ್ತು-ಅಸ್ತ್ರಾಯಫಟ್ । ಓಂ ಭೂರ್ಭುವಸ್ಸುವರೋಮಿತಿ ದಿಗ್ಬಂಧಃ ॥ ಹೀಗೆ ದೇಹನ್ಯಾಸವನ್ನು ಮಾಡಿ ಎಲ್ಲಾ ದಿಕ್ಕುಗಳಿಗೂ ಶುದ್ಧೋದಕವನ್ನು ಸಿಂಪಡಿಸಬೇಕು. ಆ ಬಳಿಕ—

**ಧ್ಯಾನ** – ಜಟಿಲಂ ಸಾಕ್ಷಸೂತ್ರಂಚ ವರದಂಡಕಮಂಡಲವ್ । ಶ್ವೇತವಸ್ತ್ರಾವೃತಂ ಶುಕ್ರಂ ಧ್ಯಾಯೇದ್ದಾನವ ಪೂಜಿತಂ ॥ ಲಮಿತ್ಯಾದಿ ಪಂಚಪೂಜಾ॥ ಶುಕ್ರಂತೇ ಅನ್ಯದ್ಯಜತಂತೇ ಅನ್ಯದ್ವಿಷುರೂಪೆ ಅಹನೀದ್ಯೌರಿವಾಸಿ । ವಿಶ್ವಾಹಿಮಾಯಾ ಅವಸಿಸ್ವಧಾವೋ ಭದ್ರಾತೆ ಪೂಷದ್ನಿಹರಾತಿರಸ್ತು ॥ ಹೀಗೆ ಕರಗಳನ್ನು ಜೋಡಿಸಿ ಕರ್ತೃವು ಶುಕ್ರಧ್ಯಾನವನ್ನು ಮಾಡಬೇಕು. ತರುವಾಯ—

**ಆಹ್ವಾನ**— ಶುಕ್ರಂ ಚತುರ್ಭುಜಂ ದೇವಂ ಅಕ್ಷಮಾಲಾ ಕಮಂಡಲಂ । ದಂಡಹಸ್ತಂಚ ವರದಂ ಭಾಮ ಜಾಲಂಗಶೋಭಿತಂ ॥ ಶುಕ್ಲಾಂಬರಧರಂಮಾಲ್ಯಂ ಶುಕ್ಲಗಂಧಾನುಲೇಪಿತಂ । ವಜ್ರಮಾಭರಣಂ ಚೈವ ಕಿರೀಟ ಮಕುಟೋಜ್ವಲಂ ॥ ಶಿರೋಮೇಭಾರ್ಗವಃ ಪಾತುಫಾಲಂಪಾತು ಗೃಹಾಧಿಪಃ । ಶ್ವೇತಾಶ್ವರಥಮಾರೂಢಂ ಮೇರುಂಚೈವ ಪ್ರದಕ್ಷಿಣಂ ॥ ಸೂರ್ಯಗ್ರಹಸ್ಯಪ್ರಾಗ್ಭಾಗೇ ಪಂಚಕೋಣಾಕಾರ ಮಂಡಲೇ । ಬರ್ಬರಧಾನ್ಯಸ್ಯೋಪರಿ ಭಗವಂತಂ । ಓಂ ಭೂಃ, ಓಂ ಭುವಃ, ಓಂ ಸುವಃ, ಓಂ ಭೂರ್ಭುವಸ್ಸುವ ಶುಕ್ರಗ್ರಹಂ ಮಾವಾಹಯಾಮಿ, ಸ್ಥಾಪಯಾಮಿ, ಪೂಜಯಾಮಿ ॥ ಹೀಗೆಂದು ಶುಕ್ರನ ಆಹ್ವಾನ ಮಾಡಿ ಹಿಂದೆ ಹೇಳಿದಂತೆ ಪೂಜಾಮಂತ್ರಗಳಿಂದ ಪೂಜಿಸಿ—

ಶುಕ್ರಮಂತ್ರ— "ಹಿಮಕುಂದ ಮೃಣಾಲಾಭಂ ದೈತ್ಯಾನಾಂ ಪರಮಂ ಗುರುಮ್ । ಸರ್ವಶಾಸ್ತ್ರವಕ್ತಾರಂ ಭಾರ್ಗವಂ ಪ್ರಣಮ್ಯಾಹಮ್ ॥ ಎಂಬೀಮಂತ್ರದಿಂದ ಶುಕ್ರಗ್ರಹಕ್ಕೆ ಏಕಾಗ್ರ ಚಿತ್ತದಿಂದ ನಮಸ್ಕಾರ ಮಾಡಬೇಕು.

## ಶನಿಗ್ರಹ ಪೂಜಾ ಪದ್ಧತಿ

ದೇಶಕಾಲಾದಿಗಳನ್ನು ಉಚ್ಚರಿಸಿ ಪುರೋಹಿತನು:-

**ಕರನ್ಯಾಸ:**— ಶಮಗ್ನಿ-ಅಂಗುಷ್ಠಾಭ್ಯಾಂನಮಃ । ಅಗ್ನಿಭಿಸ್ಕರತ್-ತರ್ಜನೀಭ್ಯಾಂನಮಃ । ಶನ್ನಸ್ತಪತುಸೂರ್ಯಃ- ಮಧ್ಯಮಾಭ್ಯಾಂ ನಮಃ । ಶಂವಾತಃ ಅನಾಮಿಕಾಭ್ಯಾಂ ನಮಃ ॥ ವಾತ್ವರಪಾಃ-ಕನಿಷ್ಠಿಕಾಭ್ಯಾಂ ನಮಃ । ಅಪಶ್ರಿಧಃ ಕರತಲಕರ ಪೃಷ್ಠಾಭ್ಯಾಂ ನಮಃ ॥ ಹೀಗೆ ಕರನ್ಯಾಸವನ್ನು ಮಾಡಿ ತದನಂತರ—

**ದೇಹನ್ಯಾಸ**— ಶಮಗ್ನಿ-ಹೃದಯಾಯನಮಃ । ಅಗ್ನಿಭಿಸ್ಕರತ್-ಶಿರಸೇ ಸ್ವಾಹಾ । ಶನ್ನಸ್ತ ಪತಂ ಸೂರ್ಯಃ-ಶಿಖಾಯೈವಷಟ್ । ಶಂವಾತಃ-ಕವಚಾಯ ಹುಂ । ವಾತ್ವರಪಾಃ-ನೇತ್ರತ್ರಯಾಯವಾಷಟ್ । ಅತಶ್ರಿಧಃ-ಅಸ್ತ್ರಾಯಫಟ್ । ಓಂ ಭೂರ್ಭುವಸ್ಸುವರೋಮಿತಿ ದಿಗ್ಬಂಧಃ । ಹೀಗೆಂದು ದೇಹನ್ಯಾಸ ಮಾಡಿ ಎಲ್ಲ ದಿಕ್ಕುಗಳಿಗೂ ಶುದ್ಧೋದಕವನ್ನು ಸಿಂಪಡಿಸ ಬೇಕು. ಆ ಬಳಿಕ—

**ಧ್ಯಾನ:** – ನೀಲಾಂಬರೋ ನೀಲವಪುಃ ಕಿರೀಟಿ ಗೃಧ್ರಸ್ಥಿತಸ್ತ್ರಾಸಕರೋ ಧನುಷ್ಮಾನ್ । ಚತುರ್ಭುಜಸ್ಸೂರ್ಯಸುತಃ ಪ್ರಶಾಂತಸ್ಸದಾಸ್ತು ಮಹ್ಯಂ ವರ

ಮಿಷ್ಟಗಾಮೀ || ಲಮಿತ್ಯಾದಿ ಪಂಚ ಪೂಜಾ || ಶಮಗ್ನಿರಗ್ನಿ ಭಿಸ್ಕರಚ್ಛನ್ನಸ್ತಪತು ಸೂರ್ಯಃ । ಶಂವಾತೇ ವಾತ್ವರಪಾ ಅಪಸ್ರಿಧಃ || ಹೀಗೆಂದು ಕರ್ತೃವು ಕರಗಳನ್ನು ಜೋಡಿಸಿಕೊಂಡು ಧ್ಯಾನವನ್ನು ಮಾಡಬೇಕು. ಆ ಮೇಲೆ—

**ಆವ್ಹಾನ:**— ಚತುರ್ಭುಜಂ ಶನಿಂ ದೇವಂ ಚಾಪತೂಣೀಕೃಪಾಣಕಂ । ವರದಂಭೀಮದೃಷ್ಟ್ರಂಚ ನೀಲಾಂಗಂ ವರ ಭೂಷಣಂ|| ನೀಲಮಾಲ್ಯಾಂಭರದರಂ ನೀಲಗಂಧಾನುಲೇಪಿತಂ । ನೀಲರತ್ನೈರಲಂಕೃತಂ ನೀಲಗೃಧ್ರರಥಾವಹಂ || ಜಾಲಾಢ್ಯ ಮುಕುಟಾಭಾಸಂ ನೀಲ ಖಡ್ಗ ಗಧಾಧರಂ| ಮೇರು ಪ್ರದಕ್ಷಿಣಂ ಕೃತ್ವಾ ಸರ್ವ ಲೋಕಭ್ಯಾಯಾವಹಂ || ಸೂರ್ಯಗ್ರಹಸ್ಯ ಪಶ್ಚಿಮ ದಿಗ್ಭಾಗೇ ಧನುರಾಕಾರ ಮಂಡಲೇ | ತಿಲಧಾನ್ಯಸ್ಯೋಪರೀ ಭಗವಂತಂ |ಓಂ ಭೂಃ ಓಂ ಭವಃ ಓಂಸುವಃ ಓಂ ಭೂರ್ಭುವಸ್ಸವಃ । ಶನೈಶ್ಚರ ಗ್ರಹಂ ಮಾವಾಹಯಾಮಿ ಸ್ಥಾಪಯಾಮಿ ಪೂಜಯಾಮಿ || ಹೀಗೆಂದು ಶನಿಗ್ರಹವನ್ನು ಆವ್ಹಾನ ಮಾಡಿ ಹಿಂದೆ ಹೇಳಿದ ಪೂಜಾ ಮಂತ್ರಗಳಿಂದ ಪೂಜೆ ಮಾಡಿ—

ಶನಿಮಂತ್ರ:— "ನಿಲಾಂಜನ ಸಮಾಭಾಸಂ ರವಿಪುತ್ರಂ ಯಮಾಗ್ರಜಮ್|
ಛಾಯಾಮಾರ್ತಾಂಡ ಸಂಭೂತಂ ತಂ ನಮಾಮಿ ಶನೈಶ್ಚರಮ್ ||

ಎಂಬ ಮಂತ್ರದಿಂದ ಕರ್ತೃವು ಏಕಾಗ್ರ ಚಿತ್ತದಿಂದ ನಮಸ್ಕಾರ ಮಾಡಬೇಕು. || ಇತಿ ಶನೈಶ್ಚರ ಪೂಜಾ ಸಮಾಪ್ತಿಃ ||

## ರಾಹುಗ್ರಹ ಪೂಜಾಪದ್ಧತಿ

ದೇಶಕಾಲಾದಿಗಳನ್ನು ಹೇಳಿ ಕರ್ತೃವು:—

**ಕರನ್ಯಾಸ:**— ಕಯಾನಃ—ಅಂಗುಷ್ಠಾಭ್ಯಾಂನಮಃ। ಚಿತ್ರ ಆಭುವತ್—ತರ್ಜನೀಭ್ಯಾಂನಮಃ। ಊತೀ—ಮಧ್ಯಮಾಭ್ಯಾಂನಮಃ। ಸದಾವೃಧಃ-ಅನಾಮಿಕಾಭ್ಯಾಂ ನಮಃ। ಸಖಾ—ಕನಿಷ್ಠಿಕಾಭ್ಯಾಂನಮಃ। ಕಯಾಶಚಿಷ್ಠಯಾವೃತಾ ಕರತಲಕರಪೃಷ್ಠಾಭ್ಯಾಂನಮಃ|| ಹೀಗೆ ಕರನ್ಯಾಸವನ್ನು ಮಾಡಬೇಕು. ಆಬಳಿಕ-

**ದೇಹನ್ಯಾಸ:**— ಕಯಾನಃ—ಹೃದಯಾಯ ನಮಃ। ಚಿತ್ರಆಭುವತ್—ಶಿರಸೇಸ್ವಾಹಾ। ಊತಿ—ಶಿಖಾಯೈವಷಟ್। ಸದಾವೃದಃ—ಕವಚಾಯಹುಂ। ಸಖಾ—ನೇತ್ರತ್ರಯಾಯವೌಷಟ್। ಕಯಾಶಚಿಷ್ಠಯಾವೃತಾ—ಅಸ್ತ್ರಾಯಫಟ್ ಓಂ ಭೂರ್ಭುವಸ್ಸುವರೋಮಿತಿ ದಿಗ್ಬಂಧಃ || ಹೀಗೆಂದು ದೇಹನ್ಯಾಸ ಮಾಡಿ ಎಲ್ಲ ದಿಕ್ಕುಗಳಿಗೂ ಶುದ್ಧೋದಕವನ್ನು ಸಿಂಪಡಿಸಬೇಕು. ತದನಂತರ—

**ಧ್ಯಾನ:**— ಕರಾಳವದನಂ ಖಡ್ಗಚರ್ಮ ಶೂಲವರಾನ್ವಿತಂ | ನೀಲಸಿಹ್ಮಾಸನಸ್ಥಂಚ ಧ್ಯಾಯೇದ್ರಾಹುಂ ಪ್ರಶಾಂತಯೇ || ಲಮಿತ್ಯಾದಿ ಪಂಚಪೂಜಾ || ಕಯಾನಶ್ಚಿತ್ರ ಆಭುವ । ಊತೀ ಸದಾವೃಧಃ ಸಖಾಕಯಾಶಚಿಷ್ಠಯಾವೃತಾ ||
ಹೀಗೆಂದು ಕರ್ತವು ಕರಜೋಡಿಸಿಕೊಂಡು ಧ್ಯಾನ ಮಾಡಬೇಕು. ಆ ಮೇಲೆ—

**ಆವ್ಹಾನ:**— ರಾಹುಂ ಚತುರ್ಭುಜಂ ಚರ್ಮ ಶೂಲ ಖಡ್ಗವರಾನ್ವಿತಂ। ಕೃಷ್ಣಾಂಬರಧರಂ ಮಾಲ್ಯಂ ಕೃಷ್ಣ ಗಂಧಾನು ಲೇಪಿತಂ || ಗೋಮೇಧಿಕ ವಿಭೂಷಂಚ ವಿಚಿತ್ರ ಮುಕುಟೋ ಫಣಿಂ। ಕೃಷ್ಣ ಸಿಂಹ ರಥಾರೂಢಂ ಮೇರುಂಚೈವ ಪ್ರದಕ್ಷಿಣಂ || ಸೂರ್ಯಗ್ರಹಸ್ಯ ನೈಋತಿ ದಿಗ್ಭಾಗೇ। ಶೂರ್ಪಾಕಾರ ಮಂಡಲೇ। ಮಾಷಧಾನ್ಯಸ್ಯೋಪರಿ ಭಗವಂತಂ। ಓಂ ಭೂಃ ಓಂ ಭುವಃ ಓಂ ಸುವಃ ಓಂ

ಹೀಗೆಂದು ರಾಹುವಿನ ಆವ್ಹಾನವನ್ನು ಮಾಡಿ ಹಿಂದೆ ಹೇಳಿದ ಪೂಜಾ ಮಂತ್ರಗಳಿಂದ ಪೂಜೆ ಮಾಡಿ=

ರಾಹುಮಂತ್ರ:-"ಅರ್ಧಕಾಯಂ ಮಹಾವೀರ್ಯಂ ಚಂದ್ರಾದಿತ್ಯ ವಿಮರ್ದನಂ।
ಸಿಂಹಿಕಾಗರ್ಭ ಸಂಭೂತಂ ತಂ ರಾಹುಂ ಪ್ರಣಮಾಮ್ಯಹಮ್ ॥

ಎಂಬ ಮಂತ್ರದಿಂದ ರಾಹುವಿಗೆ ಕರ್ತವು ಏಕಾಗ್ರಚಿತ್ತದಿಂದ ನಮಸ್ಕಾರ ಮಾಡಬೇಕು. ॥ ಇಂತಿ ರಾಹು ಪೂಜಾ ಸಮಾಪ್ತಿಂ ॥

## ಕೇತು ಗ್ರಹ ಪೂಜಾ ಪದ್ಧತಿ

ದೇಶ ಕಾಲಾದಿಗಳನ್ನು ಹೇಳಿ ಪುರೋಹಿತನು--

**ಕರನ್ಯಾಸ**-- ಕೇತುಂಕೃಣ್ವನ್- ಅಂಗುಷ್ಠಾಭ್ಯಾಂ ನಮಃ । ಅಕೇತವೇ-ತರ್ಜನೀಭ್ಯಾಂ ನಮಃ। ಪೇಶೋಮರ್ಯಾಃ- ಮಧ್ಯಮಾಭ್ಯಾಂ ನಮಃ । ಅಪೇಶವೇ-ಅನಾಮಿಕಾಭ್ಯಾಂ ನಮಃ। ಸಮುಷದ್ಭಿ-ಕನಿಷ್ಠಿಕಾಭ್ಯಾಂ ನಮಃ। ಅಜಾಯಥಾಃ-ಕರತಲಕರ ಪೃಷ್ಠಾಭ್ಯಾಂ ನಮಃ ॥ ಹೀಗೆ ಕರನ್ಯಾಸವನ್ನು ಮಾಡಬೇಕು. ತದನಂತರ--

**ದೇಹನ್ಯಾಸ**— ಕೇತುಂ ಕೃಣ್ವನ್-ಹೃದಯಾಯನಮಃ । ಅಕೇತವೇ ಶಿರಸೇಸ್ವಾಹಾ। ಪೇಶೋಮರ್ಯಾಃ-ಶಿಖಾಯೈವೌಷಟ್ । ಅಪೇಶವೇ-ಕವಚಾಯ ಹುಂ । ಸಮುಷದ್ಭಿಃ - ನೇತ್ರತ್ರಯಾಯ ವೌಷಟ್ । ಅಜಾಯಥಾಃ—ಅಸ್ತ್ರಾಯಫಟ್ । ಓಂಭೂರ್ಭುವಸ್ಸುವರೋಮಿತಿ ದಿಗ್ಬಂಧಃ ॥ ಹೀಗೆಂದು ದೇಹನ್ಯಾಸಮಾಡಿ ಎಲ್ಲಾ ದಿಕ್ಕುಗಳಿಗೆ ಶುದ್ಧೋದಕವನ್ನು ಸಿಂಪಡಿಸಿ ಆಬಳಿಕ-

**ಧ್ಯಾನ**- ಧೂಮ್ರವರ್ಣಂ ದ್ವಿಬಾಹುಂಚ ಕೇತುಂಚ ವಿಕೃತಾನನಂ । ಗೃಧ್ರಾಸನಗತಂ ನಿತ್ಯಂ ಧ್ಯಾಯೇತ್ಸರ್ವ ಫಲಾಪ್ತಯೇ ॥ ಲಮಿತ್ಯಾದಿ ಪಂಚ ಪೂಜಾ॥ ಕೇತುಂಕೃಣ್ವಂನಕೇತವೇ ಪೇಶೋಮರ್ಯಾ ಅಪೇಶಸೇಸ ಮುಷದ್ಭಿರಜಾಯಥಾಃ ॥ ಹೀಗೆಂದು ಕರ್ತವು ಕರಜೋಡಿಸಿಕೊಂಡು ಕೇತುಧ್ಯಾನ ಮಾಡಬೇಕು. ತರುವಾಯ—

**ಆವ್ಹಾನ**- ಕೇತುಂಕರಾಳವದನಂ ಚಿತ್ರವರ್ಣಂ ಕಿರೀಟಿನಂ । ಚಿಶ್ರಛತ್ರ ಗಧಾಧರಂ । ಧ್ವಜಪತಾಕಶೋಭಿತಂ॥ ಧೂಮ್ರವರ್ಣಂ ಧ್ವಜಾಕಾರಂ ಧ್ವಿಭುಜಂ ವರದಾಂಗದಂ । ಚಿತ್ರಾಂಬರಧರಂಕೇತುಂ ಚಿತ್ರಗಂಧಾನು ಲೇಪನಂ । ವೈಢೂರ್ಯಾಭರಣಂ ಚೈವ ವೈಢೂರ್ಯಮುಕುಟೋಫಣಿಃ । ಚಿತ್ರಾರ್ಶ್ವಧ ಮಾರೂಢಂ ಮೇರುಂಚೈವ ಪ್ರದಕ್ಷಿಣಂ॥ ಸೂರ್ಯಗ್ರಹಸ್ಯ ವಾಯುವ್ಯದಿಗ್ಭಾಗೇ । ಧ್ವಜಾಕಾರ ಮಂಡಲೇ ಕುಳಿತ್ಥ ಧಾನ್ಯಸ್ಯೋಪರಿ ಭಗವಂತಂ॥ ಓಂಭೂಃ ಓಂಭುವಃ ಓಂಸುವಃ ಓಂಭೂರ್ಭುವಸ್ಸುವಃ ಕೇತುಗ್ರಹಂ ಮಾವಾಹಯಾಮಿಸ್ಥಾಪಯಾಮಿ ಪೂಜಾಯಾಮಿ ॥ ಹೀಗೆಂದು ಆವ್ಹಾನ ಮಾಡಿಹಿಂದೆ ಹೇಳಿದ ಪೂಜಾಮಂತ್ರಗಳಿಂದ ಪೂಜಿಸಿ—

ಕೇತುಮಂತ್ರ:- "ಪಲಾಶಪುಷ್ಪಸಂಕಾಶಂ ತಾರಕಾಗ್ರಹ ಮಸ್ತಕಮ್ ।
ರೌದ್ರಂರೌದ್ರಾತ್ಮಕಂಘೋರಂ ತಂ ಕೇತುಂ ಪ್ರಣಮಾಮ್ಯಹಮ್॥

ಎಂಬ ಮಂತ್ರದಿಂದ ಕೇತುವಿಗೆ ಕರ್ತೃವು ಏಕಾಗ್ರ ಚಿತ್ತದಿಂದ ನಮಸ್ಕಾರ ಮಾಡಬೇಕು. ॥ ಇತಿ ಕೇತುಪೂಜಾ ಸಮಾಪ್ತಂ ॥

॥ ಇತಿ ನವಗ್ರಹ ಪೂಜಾ ಪದ್ಧತಿ ॥

## ಸಮಾಧಿಯ-ಚಕ್ರವು.



# ಹಿಂದೀ ವರ್ಣಮಾಲೆ

## ಸ್ವರಗಳು

| | | | | | | |
|---|---|---|---|---|---|---|
| अ | आ | इ | ई | उ | ऊ | ऋ |
| ಅ | ಆ | ಇ | ಈ | ಉ | ಊ | ಋ |

| | | | | | |
|---|---|---|---|---|---|
| ए | ऐ | ओ | औ | अं | अः |
| ಎ | ಐ | ಒ | ಔ | ಅಂ | ಅಃ |

## ವ್ಯಂಜನಗಳು

| | | | | | | | | | |
|---|---|---|---|---|---|---|---|---|---|
| क | ख | ग | घ | ङ | च | छ | ज | झ | ञ |
| ಕ | ಖ | ಗ | ಘ | ಙ | ಚ | ಛ | ಜ | ಝ | ಞ |
| ठ | ट | ड | ढ | ण | त | थ | द | ध | न |
| ಟ | ಠ | ಡ | ಢ | ಣ | ತ | ಥ | ದ | ಧ | ನ |

| | | | | | | | | |
|---|---|---|---|---|---|---|---|---|
| प | फ | ब | भ | म | य | र | ल | व |
| ಪ | ಫ | ಬ | ಭ | ಮ | ಯ | ರ | ಲ | ವ |

| | | | | | | |
|---|---|---|---|---|---|---|
| श | ष | स | ह | ळ | क्ष | ज्ञ |
| ಶ | ಷ | ಸ | ಹ | ಳ | ಕ್ಷ | ಜ್ಞ |

## ಅಂಕಗಳು

| | | | | | | | | | |
|---|---|---|---|---|---|---|---|---|---|
| १ | २ | ३ | ४ | ५ | ६ | ७ | ८ | ९ | १० |
| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ |

# ಅಳತೆ, ಮಾಪು, ತೂಕ ಮತ್ತು ನಾಣ್ಯಗಳು.

ಚಟಾಕು
ಗಿದ್ದಪಾವು
ಅರಪಾವು
ಪಾವು

ಸೇರು
ಅಚ್ಚೇರು
ಪಾವು
ಚಟಾಕು

೨½ ಸೇರು
೫ ಸೇರು
ಪಾವು ಮಣ
ಅರ್ಧ ಮಣ
ಮಣ

ಬಿಲ್ಲಿ
ಅರ್ಧ ಆಣೆ
ಆಣೆ
ಎರಡಾಣೆ
ನಾಲ್ಕಾಣೆ
ರೂಪಾಯಿ
ಅರ್ಧ ರೂಪಾಯಿ

## ನಾಣ್ಯಗಳು

೩ ಪೈ ಅಂದರೆ ೧ ಬಿಲ್ಲಿ
೨ ಬಿಲ್ಲಿ ,, ೧ ಅರ್ಧಾಣೆ
೨ ಅರ್ಧಾಣೆ ,, ೧ ಆಣೆ
೨ ಆಣೆ ,, ೧ ಚವಲಿ

೨ ಚವಲಿ ಅಂದರೆ ೧ ಪಾವಲಿ
೨ ಪಾವಲಿ ,, ೧ ಅರ್ಧ ರೂಪಾಯಿ
೨ ಅರ್ಧ ರೂಪಾಯಿ ಅಂದರೆ ೧ ರೂಪಾಯಿ